KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಜೂನ್ ೨೫, ೨೦೦೯ (ಆಷಾಢ ೪, ಶಕ ವರ್ಷ ೧೯೩೧) | ಸಂಚಿಕೆ ೨೬ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಜಿ. ರುದ್ರೇಶ್, ಪಿ.ಐ., ಮೂಡಿಗೆರೆ ವೃತ್ತ, ಚಿಕ್ಕಮಗಳೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ:04/ಪಿಆರ್/ಸಿಬ್ಬಂದಿ(2)2006–07 ದಿನಾಂಕ:30.06.2007
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ:ಸಿಬಿ(8)76/2007–08 ದಿ:31.05.2008
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 26.07.2008.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8)76/2007–08 ದಿ:06.10.2008.
5. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 214 ಸಿಎನ್‌ಎಸ್ 08 ದಿನಾಂಕ:28.03.2009

**ಪ್ರಸ್ತಾವನೆ:**

ಶ್ರೀ ಜಿ. ರುದ್ರೇಶ್, ಪಿ.ಐ., ಇವರು ಭದ್ರಾವತಿ ನಗರ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರ ವಿರುದ್ಧ ಕರ್ತವ್ಯ ನಿರ್ಲಕ್ಷತನ, ದುರ್ನಡತೆಯ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:**

1) ಕಾಸರಗೋಡು ಜಿಲ್ಲೆಯ ಶ್ರೀ ಕೆ.ಮೋಹನ್ ನಾಯಕ್ ಬಿನ್ ಬಾಬು ನಾಯಕ್ ಎಂಬುರಿಗೆ ಅಬ್ಬಿಗೆರೆ ಗ್ರಾಮದ ವಾಸಿಗಳಾದ ರಾಮ ಮತ್ತು ನಾಗರಾಜ ಎಂಬುವವರು ಚಿನ್ನದ ಗಟ್ಟಿಯನ್ನು ಕೊಡುತ್ತೇವೆಂದು ನಂಬಿಸಿ ರೂ.1,47,000–00 ಹಣವನ್ನು ಪಡೆದು ನಕಲಿ ಚಿನ್ನದ ಗಟ್ಟಿಯನ್ನು ಕೊಟ್ಟು ಮೋಸ ಮಾಡಿರುವ ಬಗ್ಗೆ ನೀವು ದಿ:23–11–2005 ರಂದು ಮಾಹಿತಿಯನ್ನು ಶ್ರೀ ಕೆ. ಮೋಹನ್ ನಾಯಕ್, ಇವರಿಂದ ಪಡೆದಿದು, ಈ ವಂಚನೆ ಘಟನೆಯ ಬಗ್ಗೆ ಸಮರ್ಪಕ ತನಿಖೆ ನಡೆಸಿ ಕಾನೂನು ಪ್ರಕಾರ ಕ್ರಮ ಕೈಗೊಳ್ಳದೇ, ನಿಮ್ಮ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತೆಯನ್ನು ತೋರಿರುತ್ತೀರಿ.

2) ಮೇಲಿನ ವಂಚನೆ ಪ್ರಕರಣದ ಬಗ್ಗೆ ಮಾಹಿತಿಯನ್ನು ಪಡೆದ ನೀವು, ನಿಮ್ಮ ಅಧೀನದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಲಕ್ಷ್ಮೀಕಾಂತ, ಸಿಪಿಸಿ–1442, ಇವರನ್ನು ಹೊರ ಜಿಲ್ಲೆಯ ಸಂತೆಬೆನ್ನೂರು ಠಾಣೆಗೆ ಕಳುಹಿಸಿದ್ದು, ಸದರಿಯವರು ಈ ಪ್ರಕರಣದಲ್ಲಿ ಅರ್ಜಿದಾರರು ಹಾಗೂ ಆರೋಪಿಗಳು ರಾಜಿಮಾಡಿಕೊಂಡಿರುವ ಬಗ್ಗೆ ನಿಮ್ಮ ಗಮನಕ್ಕೆ ತಂದರೂ, ಸದರಿ ವಂಚನೆ ಪ್ರಕರಣದ ಬಗ್ಗೆ ಕಾನೂನು ಪ್ರಕಾರ ಕ್ರಮ ಕೈಗೊಳ್ಳದೇ, ಈ ಬಗ್ಗೆ ಮಾಹಿತಿಯನ್ನು ಮೇಲಾಧಿಕಾರಿಗಳಿಗೆ ಸಲ್ಲಿಸದೇ ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತನ ತೋರಿ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ.

3) ಈ ಮೇಲಿನ ವಂಚನೆ ಪ್ರಕರಣದ ಬಗ್ಗೆ ಯಾವುದೇ ಕಾನೂನು ಕ್ರಮ ಕೈಗೊಳ್ಳದೇ, ಸದರಿ ಆರೋಪಿಗಳು ಇಂತಹದೇ ಇನ್ನೊಂದು ವಂಚನೆ ಪ್ರಕರಣದಲ್ಲಿ ದಿನಾಂಕ: 25.12.2005ರಂದು ಶ್ರೀ ಮಹಮದ್ ಆರೀಸ್ ಬಿನ್ ಅಬ್ದುಲ್ ಖಾದರ್, ಮಂಗಳೂರು, ಇವರಿಂದ ರೂ.1,50,000.00ಗಳ್ನು ಪಡೆದು ಮೋಸ ಮಾಡಿರುವುದು ವರದಿಯಾಗಿದ್ದು, ಮೊದಲ ಮೋಸದ ಪ್ರಕರಣದಲ್ಲಿ ಸರಿಯಾದ ಆರೋಪಿಗಳ ವಿರುದ್ಧ ತನಿಖೆ ನಡೆಸಿ ಕ್ರಮ ಕೈಗೊಳ್ಳದ ಕಾರಣ ಆರೋಪಿಗಳು ಅಂತಹುದೇ ಇನ್ನೊಂದು ಮೋಸದ ಪ್ರಕರಣವನ್ನು ಎಸಗಿದ್ದು, ನಿಮ್ಮ ನಿರ್ಲಕ್ಷತೆ ಯಿಂದಾಗಿ ಆರೋಪಿಗಳು 2ನೇ ಮೋಸದ ಪ್ರಕರಣವನ್ನು ಎಸಗಲು ಪರೋಕ್ಷವಾಗಿ ಕಾರಣರಾಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ(1)ರಲ್ಲಿ ಓದಲಾದ ದಿನಾಂಕ:30–06–2007ರ ಆದೇಶದಲ್ಲಿ ಅರ್ಜಿದಾರರ "ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಅವರ ಮುಂದಿನ ವೇತನ ಬಡ್ತಿಗಳಿಗೆ ಧಕ್ಕೆಯಾಗದಂತೆ ಮೂರು ವರ್ಷಗಳ ಕಾಲ ಮುಂದೂಡುವ ದಂಡನೆಯನ್ನು" ವಿಧಿಸಿದ್ದಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ(2)ರಲ್ಲಿ ಓದಲಾದ ದಿನಾಂಕ: 31.05.2008ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇವರ ಪಾತ್ರವನ್ನು ಗಮನಿಸಿದಲ್ಲಿ ದಂಡನೆಯ ಪ್ರಮಾಣವು ಅಧಿಕವಾಗಿದೆಯಂದು ಪರಿಗಣಿಸಿ, ಈ ಕುರಿತು ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಓದಲಾದ (5)ರ ಪತ್ರದಲ್ಲಿ ಪಡೆದು ಸರ್ಕಾರವು ಈ ಕೆಳಕಂಡತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 359 ಪೊಸಿಅ 2008, ಬೆಂಗಳೂರು, ದಿನಾಂಕ: 9ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಿ. ರುದ್ರೇಶ್, ಪಿ.ಐ., ಮೂಡಿಗೆರೆ ವೃತ್ತ, ಚಿಕ್ಕಮಗಳೂರು, ಇವರಿಗೆ ಶಿಸ್ತು ಪ್ರಾಧಿಕಾರ ವಿಧಿಸಿದ ದಂಡನೆಯ ಆದೇಶವನ್ನು ಭಾಗಶಃ ಮಾರ್ಪಡಿಸಿ ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮೂರು ತಿಂಗಳ ಕಾಲ ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಮುಂದೂಡುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1188

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಡಿ. ಪುಟ್ಟನಾಯ್ಕ, ಎ.ಎಚ್.ಸಿ.–14, ಡಿ.ಎ.ಆರ್, ದಾವಣಗೆರೆ ಜಿಲ್ಲೆ ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಇವರ ಆದೇಶ ಸಂಖ್ಯೆ: ಸಿಬ್ಬಂದಿ(5)/ಇವಿ/04/07/ಓ.ಬಿ : 379/07 ದಿನಾಂಕ: 14.02.2008.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರ ಆದೇಶ ಸಂಖ್ಯೆ : 46/ಅಪೀಲು/ಸಿಬ್ಬಂದಿ–2007–08 ಓ.ಬಿ.6/2008–09 ದಿ: 10.04.2008
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ: 10.03.2008.
4. ಮಹಾ ನಿರ್ದೇಶಕರು ಮತ್ತು ಅರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು (2) 25/2008–09 ದಿನಾಂಕ: 09.07.2008.

5. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ : ಪಿ.ಎಸ್.ಸಿ. 121 ಸಿ.ಎನ್.ಎಸ್. 08 ದಿನಾಂಕ: 12.03.2009.

**ಪ್ರಸ್ತಾವನೆ:**

ಶ್ರೀ ಡಿ. ಪುಟ್ಟನಾಯಕ, ಎ.ಹೆಚ್.ಸಿ.–14, ಡಿ.ಎ.ಆರ್, ದಾವಣಗೆರೆ ಜಿಲ್ಲೆ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಹಿಂದೆ ಎ.ಪಿ.ಸಿ. ವಾಹನ ಚಾಲಕರಾಗಿ ದಾವಣಗೆರೆಯ ಆರ್.ಎಫ್.ಎಸ್.ಎಲ್.ನಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ತೀವ್ರ ನಿರ್ಲಕ್ಷತನ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಿಯಮಗಳು) ನಿಯಾಮಾವಳಿ 1965 ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:–**

"ನೀವು ಈ ಹಿಂದೆ ದಾವಣಗೆರೆಯ ಆರ್.ಎಫ್.ಎಸ್.ಎಲ್.ನಲ್ಲಿ 1996 ನೇ ಸಾಲಿನಿಂದ ಜೀಪ್ ನಂ. ಕೆ.ಎ.–01 ಜಿ.–2002 ರ ಚಾಲಕನಾಗಿ ಕರ್ತವ್ಯ ನಿರ್ವಹಿಸಿದ್ದು, ನೀವೊಬ್ಬ ಚಾಲಕ ಎನ್ನುವದನ್ನು ಮರೆತು ನಿಮಗೆ ನೀಡಲಾದ ಜೀಪನ್ನು ಬೇಕಾಬಿಟ್ಟಿಯಾಗಿ ನಿರ್ವಹಣೆ ಮಾಡಿ, ಜೀಪು ಚಾಲನೆ ಮಾಡುವಾಗ ಸರಿಯಾಗಿ ರಸ್ತೆ ಕಡೆ ಗಮನ ಕೊಡದೆ, ನಿಮಗೆ ಮನಬಂದಂತೆ ಅನ್ಯರ ವಿಚಾರ ಮಾತನಾಡುತ್ತಾ ಎತ್ತಲೋ ನೋಡುತ್ತಾ ಜೀಪನ್ನು ಅತೀ ವೇಗವಾಗಿ ಮತ್ತು ನಿರ್ಲಕ್ಷ್ಯತನದಿಂದ ಚಾಲನೆ ಮಾಡುತ್ತಾ ಬಂದಿರುತ್ತೀರಿ. ಈ ಸಂಬಂಧ ಶ್ರೀ.ಕೆ.ಟಿ.ವೆಂಕಟೇಶ್ ತಂದೆ ಕೆ.ತಿಮ್ಮೇಗೌಡ, ಉಪ ನಿರ್ದೇಶಕರು, ಪ್ರಾದೇಶಿಕ ನ್ಯಾಯ ವಿಜ್ಞಾನ ಪ್ರಯೋಗಾಲಯ, ಇವರು ಜೀಪನ್ನು ಸರಿಯಾಗಿ ರಸ್ತೆ ಕಡೆ ಗಮನವಿಟ್ಟು ಚಾಲನೆ ಮಾಡುವಂತೆಯೂ ಮತ್ತು ಅನ್ಯರ ವಿಚಾರ ನನ್ನ ಹತ್ತಿರ ಜೀಪ್ ಚಾಲನೆ ಮಾಡುವಾಗ ಮಾತನಾಡಬಾರದು ಎಂದು ತಿಳಿಸಿದ್ದಾಗ್ಯೂ ಸಹ ನೀವು ಅವರನ್ನು ಅವರೊಬ್ಬ ಹಿರಿಯ ಅಧಿಕಾರಿಯೆನ್ನುವುದನ್ನು ಲಕ್ಷಿಸದೆ ಅವರೊಂದಿಗೆ ವಿನಾಃ ಕಾರಣ ವಾಗ್ವಾದಕ್ಕೆ ಇಳಿದು ಅನುಚಿತವಾಗಿ ವರ್ತಿಸಿರುತ್ತೀರ ಮತ್ತು ದಿ: 13.09.2006 ರಂದು 11–30 ಎ.ಎಂ.ಗೆ ನೀವು ಉಪ ನಿರ್ದೇಶಕರ ಅನುಮತಿಯಿಲ್ಲದೆ ಅವರ ಕೊಠಡಿಗೆ ಬಂದು ನಾನು ಫೋರ್ಜರಿ ಸಹಿ ಮಾಡಿದ್ದೇನೆಂದು ನೀವು ನನ್ನ ಮೇಲೆ ಮೇಲಾಧಿಕಾರಿಗಳಿಗೆ ವರದಿ ಕಳುಹಿಸಿರುತ್ತೀರಿ, ನೀವು ದಲಾಯತ್ತ ಸೂಳೇ ಮಕ್ಕಳಿಗೆ ಸಪೋರ್ಟ್ ಮಾಡುತ್ತಿದ್ದೀರಿ, ನನ್ನ ವಿರುದ್ಧ ಕೊಟ್ಟಿರುವ ವರದಿಯನ್ನು ಹಿಂದಕ್ಕೆ ಪಡೆಯದಿದ್ದರೆ ನಿಮ್ಮ ಮೇಲೆ ಎಸ್.ಸಿ. ಎಸ್.ಟಿ. ಕಾಯ್ದೆ ಅಡಿಯಲ್ಲಿ ಕೇಸು ಹಾಕಿಸುತ್ತೇನೆ ಮತ್ತು ಮಾನ ನಷ್ಟ ಮೊಕದ್ದಮೆ ಅರ್ಜಿ ಹಾಕುತ್ತೇನೆ" ಎಂದು ಏರು ಧ್ವನಿಯಲ್ಲಿ ಕೂಗಾಡಿ ಕಛೇರಿಯ ಶಾಂತ ವಾತಾವರಣವನ್ನು ಹಾಳು ಮಾಡಿ, ಕಛೇರಿಯ ಕೆಲಸ ಕಾರ್ಯಗಳಿಗೆ ಅಡ್ಡಿ ಪಡಿಸಿರುತ್ತೀರಿ.

ದಿನಾಂಕ 12.09.2006 ರಂದು ರಾತ್ರಿ ಆರ್.ಎಫ್.ಎಸ್.ಎಲ್.ಕಛೇರಿಯ ದಲಾಯತ್ ಶ್ರೀ ಸತೀಶ್‌ಕುಮಾರ್, ಅವರ ಮನೆಯ ಹತ್ತಿರ ಹೋಗಿ ಅವರ ಮನೆ ಬಾಗಿಲು ಬಡಿದು, ಸತೀಶ್ ಕುಮಾರ್ ಮತ್ತು ಅವರ ಮನೆಯವರ ಹತ್ತಿರ ವಿಪರೀತ ಗಲಾಟೆ ಮಾಡಿ ಭಯ ಹುಟ್ಟಿಸಿ ಅವರಿಗೆ ಜೀವ ಬೆದರಿಕೆಯನ್ನು ಒಡ್ಡಿರುತ್ತೀರಿ.

ನಿಮ್ಮ ನಡವಳಿಕೆಯ ಬಗ್ಗೆ ನಿರ್ದೇಶಕರು, ಆರ್.ಎಫ್.ಎಸ್.ಎಲ್. ಬೆಂಗಳೂರು ರವರು ವಿಶೇಷ ವರದಿಯನ್ನು ಸಲ್ಲಿಸುವಂತೆ ಉಪನಿರ್ದೇಶಕರಿಗೆ ಸೂಚಿಸಿದ ಮೇರೆಗೆ, ಉಪ ನಿರ್ದೇಶಕರು, ಪ್ರಾದೇಶಿಕ ನ್ಯಾಯ ವಿಜ್ಞಾನ ಪ್ರಯೋಗಾಲಯ ದಾಣಗೆರೆ ರವರು ದಿ. 16.09.2006 ರಂದು ವಿಶೇಷ ವರದಿಯನ್ನು ಸಲ್ಲಿಸಿದಾಗ, ನೀವು ದಿ. 19.09.2006 ರಂದು 7–10 ಎ.ಎಂ.ಗೆ ಉಪನಿರ್ದೇಶಕರ ಮನೆಯ ದೂರವಾಣಿ ಸಂಖ್ಯೆ 236657 ಕ್ಕೆ ಕರೆ ಮಾಡಿ ನಾನು ಮಾನ್ಯ ಐ.ಜಿ.ಪಿ., ಸಾಹೇಬರಿಗೆ ಮತ್ತು ಇಲಾಖೆಯ ಮೇಲಾಧಿಕಾರಿಗಳಿಗೆ ಭೇಟಿ ಮಾಡುವ ಸಲುವಾಗಿ ರಜೆ ಅರ್ಜಿ ನಿವೇದಿಸಿದ್ದು, ನೀವು ಅನುಮತಿ ನೀಡಿ ರಜೆ ಕೊಟ್ಟುರುವುದಿಲ್ಲ. ಆದ್ದರಿಂದ ನಾನು ವಾಪಸ್ ಡ್ಯೂಟಿಗೆ ಬರುತ್ತೇನೆ. ಪ್ರತಿ ದಿನದಂತೆ ಕಛೇರಿಯ ಸಿಬ್ಬಂದಿಯವರಿಗೆ ಮೊಬೈಲ್ ವ್ಯಾನ್‌ನಲ್ಲಿ ಹೋಗಲು ಹೇಳಿ ಎಂದು ಹಾಗೂ ನೀವು ನನಗೆ ಮೇಲಾಧಿಕಾರಿಗಳಿಗೆ ಭೇಟಿ ಮಾಡಲು ಅನುಮತಿ ನೀಡದೆ ಇರುವ ಬಗ್ಗೆ ಲಿಖಿತ ಉತ್ತರ ಕೊಡಬೇಕು ಎಂದು ಉಪ ನಿರ್ದೇಶಕರೊಂದಿಗೆ ಅಸಭ್ಯವಾಗಿ ವರ್ತಿಸಿರುತ್ತೀರಿ ಮತ್ತು ಅವರು ದಿ. 18.09.2006 ರಂದು ನಿರ್ದೇಶಕರೊಂದಿಗೆ ಫೋನ್‌ನಲ್ಲಿ ಮಾತಾಡಿ ನಿಮಗೆ ಅನುಮತಿ ನೀಡುವ ಬಗ್ಗೆ ಕೇಳಿರುವ ಬಗ್ಗೆ ಮತ್ತು ನಿರ್ದೇಶಕರು ಮೇಲಾಧಿಕಾರಿಗಳಿಗೆ ಭೇಟಿ ಮಾಡಲು ಅನುಮತಿ ನೀಡಬೇಕು ಎಂದು ಹೇಳಿರುವ ಬಗ್ಗೆ ತಿಳಿಸಿ ಫೋನ್ ಇಟ್ಟ ನಂತರ ಪುನಃ 8–15 ಎ.ಎಂ.ಗೆ ಫೋನ್ ಮಾಡಿ "ನೀವು ನನ್ನ ಹತ್ತಿರ ಕ್ಷಮಾಪಣೆ ಕೇಳಬೇಕು, ಇಲ್ಲವಾದಲ್ಲಿ ನಿಮ್ಮ ಮೇಲೆ ಎಸ್.ಸಿ./ ಎಸ್.ಟಿ. ಜಾತಿ ನಿಂದನೆ ಕೇಸು ದಾಖಲಿಸಿ ಸಸ್ಪೆಂಡ್ ಮಾಡಿಸಿ, ಹಾಯ್ ಬೆಂಗಳೂರು ಪತ್ರಿಕೆಯವರನ್ನು ಕರೆಯಿಸಿ ನಿಮ್ಮ ಬಗ್ಗೆ ಪತ್ರಿಕೆಯಲ್ಲಿ ಹಾಕಿಸುತ್ತೇನೆ," ಎಂದು ಫೋನ್‌ನಲ್ಲಿ ಬೆದರಿಕೆ ಹಾಕಿ, ಶಿಸ್ತಿನ ಇಲಾಖೆಯ ನೌಕರನಿಗೆ ಸಲ್ಲದ ಘೋರ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ.

ಪ್ರತಿನಿತ್ಯ ಒಂದಲ್ಲ ಒಂದು ಕಾರಣಕ್ಕಾಗಿ ನ್ಯಾಯ ವಿಜ್ಞಾನ ಪ್ರಯೋಗಾಲಯ ಕಛೇರಿಯ ಅಧಿಕಾರಿ ಮತ್ತು ಸಿಬ್ಬಂದಿಯವರೊಂದಿಗೆ ಕ್ಷುಲ್ಲಕ ಕಾರಣಕ್ಕಾಗಿ ಜಗಳವಾಡುತ್ತಾ ಅವರಿಗೆ ಕೊಲೆ ಬೆದರಿಕೆಯನ್ನು ಒಡ್ಡಿರುತ್ತೀರಿ. ಮೊಬೈಲ್ ವ್ಯಾನ್ ನಂ. ಕೆ.ಎ. 01–ಜಿ 8284 ಅನ್ನು ಪೂರ್ವ ವಲಯ ಪೊಲೀಸ್ ಅಧಿಕಾರಿಗಳು ಪೊಲೀಸ್ ಪ್ರಕರಣಗಳಲ್ಲಿ ಕೃತ್ಯ ನಡೆದ ಸ್ಥಳಕ್ಕೆ

ಭೇಟಿ ನೀಡುವ ಬಗ್ಗೆ ಎಫ್.ಎಸ್.ಎಲ್ ಅಧಿಕಾರಿಗಳಿಗೆ ಕರೆ ಬಂದಾಗ, ಸದರಿಯವರು ಮೊಬೈಲ್ ವ್ಯಾನ್‌ನಲ್ಲಿ ಕೃತ್ಯ ನಡೆದ ಸ್ಥಳಕ್ಕೆ ಭೇಟಿ ನೀಡುವ ಸಲುವಾಗಿ ಒದಗಿಸಿದ್ದು, ಸದರಿ ಮೊಬೈಲ್ ವ್ಯಾನನ್ನು ಭದ್ರತೆಯ ದೃಷ್ಠಿಯಿಂದ ಕಛೇರಿಯ ವೇಳೆ ಮುಗಿದ ನಂತರ ಎಫ್.ಎಸ್.ಎಲ್. ಕಛೇರಿಯಿಂದ ಡಿ.ಎ.ಆರ್. ಆವರಣದಲ್ಲಿ ನಿಲ್ಲಿಸಿ ಪುನಃ ಕಛೇರಿಯ ಸಿಬ್ಬಂದಿಗಳನ್ನು ಕರೆತರುವ ಕರ್ತವ್ಯಕ್ಕೆ ನಿಯೋಜಿಸಿದಾಗ, ನೀವು ಮೊಬೈಲ್ ವ್ಯಾನನ್ನು ನಿಮ್ಮ ಮನ ಬಂದಂತೆ ಅತೀ ವೇಗವಾಗಿ ಒಳಗಡೆ ಕುಳಿತವರಿಗೆ ಭಯವಾಗುವ ರೀತಿಯಲ್ಲಿ ಚಾಲನೆ ಮಾಡಿ, ವ್ಯಾನನ್ನು ಆರ್.ಎಫ್.ಎಸ್.ಎಲ್. ಕಛೇರಿಯ ಕಾಂಪೌಂಡಿನ ಒಳಗೆ ತರುವಾಗ 2 ಸಲ ಕಾಂಪೌಂಡ್ ಗೋಡೆಗೆ ಡಿಕ್ಕಿ ಹೊಡೆಸಿ, ಮೊಬೈಲ್ ವ್ಯಾನನ್ನು ಕಿಟಕಿಯ ಗಾಜುಗಳು ಒಡೆದು ಹೋಗಿದ್ದರೂ ಅದನ್ನು ಮೇಲಾಧಿಕಾರಿಗಳ ಗಮನಕ್ಕೆ ತರದೆ, ನಿಮ್ಮ ಸ್ವಂತ ಖರ್ಚಿನಿಂದ ದುರಸ್ಥಿ ಮಾಡಿಸಿ ನಿಮ್ಮ ಕರ್ತವ್ಯದಲ್ಲಿ ಅತೀವ ನಿರ್ಲಕ್ಷ್ಯತನ ಮತ್ತು ಬೇಜವಾಬ್ದಾರಿತನವನ್ನು ಪ್ರದರ್ಶಿಸಿರುತ್ತೀರಿ.

ಅಲ್ಲದೇ ಆಗಾಗ್ಯೆ ಮೊಬೈಲ್ ವ್ಯಾನನ್ನು ದುರಸ್ಥಿ ನೆಪ ಹೇಳಿಕೊಂಡು ಮೊಬೈಲ್ ವ್ಯಾನಿನ ಲಾಗ್ ಪುಸ್ತಕವನ್ನು ಸಹ ಸರಿಯಾಗಿ ನಿಗದಿತ ಸಮಯಕ್ಕೆ ಬರೆಯದೆ ಮೊಬೈಲ್ ವ್ಯಾನನ್ನು ಡಿ.ಎ.ಆರ್. ಆವರಣದಲ್ಲಿ ನಿಲ್ಲಿಸಿ ಕಛೇರಿಗೆ ಸರಿಯಾಗಿ ದಿನ ನಿತ್ಯ ಹೋಗದೇ ನಿಮಗೆ ಇಷ್ಟ ಬಂದ ಹಾಗೆ ಹಾಜರಾತಿ ಪುಸ್ತಕಕ್ಕೆ ಸಹಿ ಮಾಡುವ ಹವ್ಯಾಸವನ್ನು ಬೆಳೆಸಿಕೊಂಡಿದ್ದು, ಈ ಬಗ್ಗೆ ದಿನಾಂಕ: 09.11.2006 ರಂದು 10–15 ಕ್ಕೆ ಸಹಿ ಮಾಡಲು ಕಛೇರಿ ಅಧೀಕ್ಷಕರಾದ ಶ್ರೀ ಬಿ.ವೆಂಕಟಪ್ಪ ನಿಮಗೆ ಇಷ್ಟ ಬಂದಾಗ ಕಛೇರಿಯ ಹಾಜರಿ ಪುಸ್ತಕಕ್ಕೆ ಸಹಿ ಹಾಕುವುದರಿಂದ, ಬೇರೆ ನೌಕರರು ನನಗೆ ಪುಟ್ಟನಾಯ್ಕರವರಿಗೆ ಒಂದು ಕಾನೂನು, ನಮಗೆ ಒಂದು ಕಾನೂನಾ ಎಂದು ಹೇಳುತ್ತಾರೆ. ಆದ್ದರಿಂದ ನೀವು ನಿಮಗೆ ಇಷ್ಟ ಬಂದಾಗ ಸಹಿ ಮಾಡುವುದನ್ನು ಬಿಟ್ಟು ಎಲ್ಲಾ ನೌಕರರು ಸಹಿ ಮಾಡುವ ಹಾಗೆ ನೀವು ಸಹ ನಿಗದಿತ ಸಮಯಕ್ಕೆ ಕಛೇರಿಗೆ ಹಾಜರಾಗಿ ಬಂದು ಸಹಿ ಮಾಡಿ ಎಂದು ಹೇಳಿದಾಗ, ಅವರೊಂದಿಗೆ ಸಹ ಜಗಳವಾಡಿ ಅವರಿಗೆ ಮಾನಸಿಕವಾಗಿ ನೋವಾಗುವ ರೀತಿಯಲ್ಲಿ ಸಂಬಂದವಿಲ್ಲದ ವಿಚಾರದಲ್ಲಿ ಏನೇನೋ ರಾಜಕೀಯವಾಗಿ ಮಾತನಾಡಿ ನಿಮ್ಮ ವಿರುದ್ಧ ಮೇಲಾಧಿಕಾರಿಗಳಿಗೆ ಮತ್ತು ಮಂತ್ರಿಗಳಿಗೆ ಪಿರ್ಯಾದು ನೀಡುತ್ತೇನೆ ಎಂದು ಬೆದರಿಕೆ ಹಾಕಿರುತ್ತೀರಿ, ಅಲ್ಲದೇ ಪ್ರತಿದಿನ ಕಛೇರಿಗೆ ಹೋಗಿ ನಿಮಗೆ ಸಂಬಂಧವಿಲ್ಲದ ವಿಚಾರದಲ್ಲಿ ಜಗಳ ತೆಗೆದು, ಉಪನಿರ್ದೇಶಕರು ಮತ್ತು ಕಛೇರಿಯ ಸಿಬ್ಬಂದಿಯವರಿಗೆ ಕೆಲಸ ಮಾಡಲು ಬಿಡದೇ ಕಛೇರಿಯ ಕರ್ತವ್ಯಕ್ಕೆ ಅಡಚಣೆಯುಂಟು ಮಾಡಿರುತ್ತೀರಿ".

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳೂ ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ : 14.02.2008 ರ ಆದೇಶದಲ್ಲಿ ಅರ್ಜಿದಾರರಿಗೆ "ಎ.ಹೆಚ್.ಸಿ. ಹುದ್ದೆಯ ಕನಿಷ್ಠ ವೇತನ ಮಟ್ಟಕ್ಕೆ 5 ವರ್ಷಗಳ ಕಾಲ ಇಳಿಸುವ ದಂಡನೆ ವಿಧಿಸಿರುತ್ತಾರೆ."

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ 10.04.2008 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಆರೋಪದ ಸ್ವರೂಪವನ್ನು ಗಮನಿಸಿದಲ್ಲಿ ದಂಡನೆಯ ಪ್ರಮಾಣವು ಅಧಿಕವೆಂದು ಪರಿಗಣಿಸಿ ಈ ಕುರಿತು ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಓದಲಾದ (5) ರ ಪತ್ರದಲ್ಲಿ ಪಡೆದು ಶಿಸ್ತುಪ್ರಾಧಿಕಾರದ ಆದೇಶವನ್ನು ಭಾಗಶಃ ಮಾರ್ಪಡಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 214 ಪೊಸಿಅ 2008, ಬೆಂಗಳೂರು, ದಿನಾಂಕ: 2ನೇ ಏಪ್ರಿಲ್ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963 ರ ಸೆಕ್ಷನ್ 25(2) (ಬಿ) ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಡಿ. ಪುಟ್ಟನಾಯಕ, ಎ.ಹೆಚ್.ಸಿ. –14, ಡಿ.ಎ.ಆರ್., ದಾವಣಗೆರೆ ಇವರ ವಿರುದ್ಧ ಶಿಸ್ತು ಪ್ರಾಧಿಕಾರದ ಆದೇಶ ದಿನಾಂಕ: 14.02.2008 ನ್ನು ಭಾಗಶಃ ಮಾರ್ಪಡಿಸಿ, ಅದರ ಬದಲಾಗಿ "ಇವರ ಮುಂದಿನ ಎರಡು ವರ್ಷಗಳ ಕಾಲ ತಡೆಹಿಡಿಯುವ ದಂಡನೆಯನ್ನು ವಿಧಿಸಿ ಆದೇಶಿಸಿದೆ."

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1189

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಂ. ಕೀರ್ತಿಕುಮಾರ್, ಪಿಎಸ್ಐ, ಮಿಡಿಗೇಶಿ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ ಇವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1. ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರ ಸಂಖ್ಯೆ:99/ಸಿಬ್ಬಂದಿ–1/2008–09 ದಿನಾಂಕ: 17.01.2009.

**ಪ್ರಸ್ತಾವನೆ:**

ಶ್ರೀ ಎಂ. ಕೀರ್ತಿಕುಮಾರ್, ಪಿಎಸ್ಐ, ಮಿಡಿಗೇಶಿ ಪೊಲೀಸ್ ಠಾಣೆ ಇವರು ದಿನಾಂಕ 31–12–2001 ರಂದು ಪಿಎಸ್ಐ ಆಗಿ ನೇಮಕಗೊಂಡಿದ್ದು, ದಿನಾಂಕ 30–06–2004 ರಂದು ಎರಡೂವರೆ ವರ್ಷಗಳ ಪ್ರೊಬೇಷನರಿ ಅವಧಿಯನ್ನು ಪೂರ್ಣಗೊಳಿಸಿರುತ್ತಾರೆ. ಆದರೆ ಹುದ್ದೆಗೆ ನಿಗಧಿಪಡಿಸಿದ ಅಕೌಂಟ್ಸ್ ಹೈಯರ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿಲ್ಲವಾದ ಕಾರಣ ಇವರ ಖಾಯಂ ಪೂರ್ವ ಅವದಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮ, 1977ರ ನಿಯಮ 4(ii) ರನ್ವಯ 1 ವರ್ಷ 3 ತಿಂಗಳವರೆಗೆ ಅಂದರೆ ದಿನಾಂಕ: 01.07.2004 ರಿಂದ 30.09.2005 ರವರೆಗೆ ಐ.ಜಿ.ಪಿ, ಕೇಂದ್ರ ವಲಯ, ಬೆಂಗಳೂರು ಇವರು ದಿನಾಂಕ: 19.09.2008 ರಲ್ಲಿ ವಿಸ್ತರಿಸಿರುತ್ತಾರೆ. ದಿನಾಂಕ: 09.06.2007 ರಂದು ಸದರಿಯವರು ಅಕೌಂಟ್ಸ್ ಹೈಯರ್ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುತ್ತಾರೆ. ಆದ್ದರಿಂದ ಇಲಾಖಾ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ದಿನಾಂಕ 08.06.2007 ರವರೆಗೆ ಪ್ರೊಬೇಷನರಿ ಅವಧಿಯನ್ನು ವಿಸ್ತರಿಸಬೇಕೆಂದು ಡಿಜಿ ಮತ್ತು ಐಜಿಪಿ ರವರ ಮೇಲೆ ಓದಲಾದ (1)ರ ಪತ್ರದಲ್ಲಿ ಕೋರಲಾಗಿರುತ್ತದೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 38 ಪೊಸಇ 2009, ಬೆಂಗಳೂರು, ದಿನಾಂಕ: 22ನೇ ಏಪ್ರಿಲ್ 2009**

ಶ್ರೀ ಎಂ. ಕೀರ್ತಿಕುಮಾರ್, ಪಿಎಸ್ಐ, ಮಿಡಿಗೇಶಿ ಪೊಲೀಸ್ ಠಾಣೆ, ತುಮಕೂರು ಜಿಲ್ಲೆ ಇವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ: 01.10.2005 ರಿಂದ 08.06.2007 ವರೆಗೆ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ 4(1)ನೇ ನಿಯಮದ ಉಪ ನಿಯಮ (i) ರನ್ವಯ ವಿಸ್ತರಿಸಲಾಗಿದೆ.

ವಿಸ್ತರಿಸಿದ ಪರಿವೀಕ್ಷಣಾ ಅವಧಿಗೆ ಕ.ನಾ.ಸೇ (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗಧಿಪಡಿಸುವುದು. ಹೀಗೆ ನಿಗಧಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1190

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಬಾಸು ಚೌವ್ಹಾಣ್, ಪ್ರೊ.ಪಿ.ಎಸ್.ಐ. (ಸಿವಿಲ್) ರವರ ಪರಿವೀಕ್ಷಣಾ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1. ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರ ಸಂಖ್ಯೆ:58/ಸಿಬ್ಬಂದಿ–1/2007–08 ದಿನಾಂಕ: 05.01.2008 ಮತ್ತು 19–01–2009.

**ಪ್ರಸ್ತಾವನೆ:**

ಶ್ರೀ ಬಾಸು ಚೌವ್ಹಾಣ್, ಪ್ರೊ.ಪಿ.ಎಸ್.ಐ. (ಸಿವಿಲ್) ರವರು ಪಿ.ಎಸ್.ಐ. ಹುದ್ದೆಗೆ ದಿನಾಂಕ 15–09–2003 ರಂದು ನೇಮಕಾತಿ ಹೊಂದಿ $2^1/_2$ ವರ್ಷಗಳ ಖಾಯಂಪೂರ್ವ ಅವಧಿಯನ್ನು ದಿನಾಂಕ 15–03–2006ಕ್ಕೆ ಪೂರ್ಣಗೊಳಿಸಿದ್ದು, ಇವರ ವಿರುದ್ಧ ಇಲಾಖಾ ವಿಚಾರಣೆ ಬಾಕಿ ಇದ್ದುದರಿಂದ ಖಾಯಂ ಪೂರ್ವ ಅವಧಿಯನ್ನು ದಿನಾಂಕ 15–03–2006 ರಿಂದ 15–03–2007 ರವರೆಗೆ ವಿಸ್ತರಿಸಲಾಗಿರುತ್ತದೆ. ಸದರಿಯವರು ಕರ್ತವ್ಯ ನಿರ್ಲಕ್ಷತೆಯ ಆರೋಪದ ಮೇಲೆ ದಿನಾಂಕ 01.10.2009 ರವರೆಗೆ ಚಾಲ್ತಿ ಶಿಕ್ಷೆಯಲ್ಲಿರುವುದರಿಂದ ಸದರಿಯವರ ಖಾಯಂ ಪೂರ್ವ ಅವಧಿಯನ್ನು 1977ರ ಕೆ.ಸಿ.ಎಸ್. (ಪ್ರೊಬೇಷನ್) ನಿಯಮಾವಳಿ 4(1)(ii) ಮೇರೆಗೆ ದಿನಾಂಕ 16–03–2007 ರಿಂದ 15–06–2007 ರವರೆಗೆ ವಿಸ್ತರಿಸಲಾಗಿರುತ್ತದೆಯೆಂದು ಮೇಲೆ (1)ರಲ್ಲಿ ಓದಲಾದ ಡಿ.ಜಿ.ಪಿ. ರವರ ಪತ್ರದಲ್ಲಿ ವಿವರಿಸಲಾಗಿರುತ್ತದೆ. ಸದರಿ ಅಧಿಕಾರಿಯವರು ಕೆ.ಸಿ.ಎಸ್. ಪರಿವೀಕ್ಷಣೆ ನಿಯಮ 1977ರ ನಿಯಮ 4 & 5(1)ರನ್ವಯ ಪಿ.ಎಸ್.ಐ ಹುದ್ದೆಯ ಕಾರ್ಯಭಾರ ನಿರ್ವಹಿಸಲು ಸಮರ್ಥರಾಗಿರುತ್ತಾರೆಂದು ಹಾಗೂ ದಿನಾಂಕ 16–06–2007 ರಿಂದ 01–10–2009 ರವರೆಗೆ ಸದರಿ ಅಧಿಕಾರಿಯವರ ಖಾಯಂ ಪೂರ್ವ ಅವಧಿಯನ್ನು ವಿಸ್ತರಿಸುವಂತೆ ಮೇಲೆ(1)ರಲ್ಲಿ ಓದಲಾದ ಡಿಜಿ ಮತ್ತು ಐಜಿಪಿ ರವರ ಪತ್ರದಲ್ಲಿ ಕೋರಲಾಗಿರುತ್ತದೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 45 ಪೊಸಇ 2008, ಬೆಂಗಳೂರು, ದಿನಾಂಕ: 22ನೇ ಏಪ್ರಿಲ್ 2009**

ಶ್ರೀ ಬಾಸು ಚೌವ್ಹಾಣ್, ಪ್ರೊ.ಪಿ.ಎಸ್.ಐ. (ಸಿವಿಲ್) ರವರ ಪರಿವೀಕ್ಷಣಾ ಅವಧಿಯನ್ನು ದಿನಾಂಕ 16.06.2007 ರಿಂದ 01.10.2009ರ ವರೆಗೆ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 4(1)(i) ರನ್ವಯ ವಿಸ್ತರಿಸಲಾಗಿದೆ.

ವಿಸ್ತರಿಸಿದ ಪರಿವೀಕ್ಷಣಾ ಅವಧಿಗೆ ಕ.ನಾ.ಸೇ (ಪರಿವೀಕ್ಷಣೆ) ನಿಯಮಗಳು 1977ರ ನಿಯಮ 10ರ ಪ್ರಕಾರ ವಾರ್ಷಿಕ ವೇತನ ಬಡ್ತಿಗಳನ್ನು ನೀಡುವಂತಿಲ್ಲ. ಕಾಲ್ಪನಿಕವಾಗಿ ವಾರ್ಷಿಕ ವೇತನ ಬಡ್ತಿಗಳನ್ನು ಬಿಡುಗಡೆ ಮಾಡಿ ವೇತನವನ್ನು ನಿಗಧಿಪಡಿಸುವುದು. ಹೀಗೆ ನಿಗಧಿಪಡಿಸಿದ ವೇತನದ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1191 **ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ರಾಮನಗರ ಹಾಗೂ ಚಿಕ್ಕಬಳ್ಳಾಪುರ ಸರ್ಕಾರಿ ಅಭಿಯೋಜಕರ ಕಛೇರಿಗಳನ್ನು ಸಂಯುಕ್ತ ಕಛೇರಿಗಳೆಂದು ಘೋಷಿಸುವ ಬಗ್ಗೆ ಹಾಗೂ ಸರ್ಕಾರಿ ಅಭಿಯೋಜಕರನ್ನು ಕಛೇರಿ ಮುಖ್ಯಸ್ಥರು ಮತ್ತು ವೇತನ ಬಡವಾಡೆ ಅಧಿಕಾರಿ ಎಂದು ಘೋಷಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂಇ 27 ಭೂದಾಪು/2006 ದಿನಾಂಕ: 6–10–2007

2. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಪತ್ರ ಸಂಖ್ಯೆ:ಡಿಪಿಎನ್. ಸಿ.ಶಾ.1.59/2007–08 ದಿನಾಂಕ: 16–10–2008.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಅದೇಶದಲ್ಲಿ ರಾಮನಗರ ಮತ್ತು ಚಿಕ್ಕಬಳ್ಳಾಪುರ ಜಿಲ್ಲೆಗಳನ್ನು ಹೊಸ ಜಿಲ್ಲೆಯೆಂದು ಘೋಷಿಸಿ ಆದೇಶಿಸಲಾಗಿರುತ್ತದೆ. ಮೇಲೆ ಓದಲಾದ (2)ರ ಪತ್ರದಲ್ಲಿ ಅಭೀಯೋಗ ನಿರ್ದೇಶಕರು ಸರ್ಕಾರಿ ಅಭಿಯೋಜಕರ ಕಛೇರಿ, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ರಾಮನಗರ ಮತ್ತು ಚಿಕ್ಕಬಳ್ಳಾಪುರ ಕಛೇರಿಗಳು ಕಾರ್ಯ ನಿರ್ವಹಣೆ ಪ್ರಾರಂಭಿಸಿದ್ದು, ಮೇಲ್ಕಂಡ ಜಿಲ್ಲೆಗಳ ಸಿ.ಜೆ.ಎಂ. ನ್ಯಾಯಲಯಕ್ಕೆ ಹೊಂದಿಕೊಂಡಂತೆ ಕಾರ್ಯ ನಿರ್ವಹಿಸಲು ತಲಾ ಒಂದು ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯನ್ನು ಮಂಜೂರು ಮಾಡಿದ್ದು, ಸದರಿ ಅಧಿಕಾರಿಗಳು ಹೊಸ ಜಿಲ್ಲೆಗಳು ಪ್ರಾರಂಭವಾಗುವುದಕ್ಕೆ ಮುಂಚಿನಿಂದಲೂ ಸದರಿ ಹುದ್ದೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವುದರಿಂದ ಸದರಿ ಎರಡು ಸರ್ಕಾರಿ ಅಭಿಯೋಜಕರುಗಳ ಕಛೇರಿಗಳನ್ನು ಜಿಲ್ಲಾ ಮಟ್ಟದ ಸಂಯುಕ್ತ ಕಛೇರಿಗಳೆಂದು ಘೋಷಿಸಬೇಕೆಂದು ಮತ್ತು ಸದರಿ ಕೇಂದ್ರದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಎಲ್ಲಾ ಅಧಿಕಾರಿಗಳನ್ನು ಮತ್ತು ಸಿಬ್ಬಂದಿಯವರನ್ನು ಸರ್ಕಾರಿ ಅಭಿಯೋಜಕರ ಕಛೇರಿಯ ನಿಯಂತ್ರಣದಲ್ಲಿ ಬರುವ ಅಧಿಕಾರಿಗಳು ಮತ್ತು ಸಿಬ್ಬಂದಿಯವರು ಎಂದು ಘೋಷಿಸಲು ಹಾಗೂ ಈ ಕಛೇರಿಗಳಿಗೆ ವೇತನ ಡ್ರಾ ಮಾಡಲು ಬಟವಾಡಾಧಿಕಾರತ್ವ ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ.

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 481 ಪಿಪಿಇ 2008, ಬೆಂಗಳೂರು, ದಿನಾಂಕ: 20ನೇ ಏಪ್ರಿಲ್ 2009**.

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಹೊಸದಾಗಿ ಸೃಜಿಸಲಾದ ರಾಮನಗರ ಹಾಗೂ ಚಿಕ್ಕಬಳ್ಳಾಪುರ ಜಿಲ್ಲೆಗಳ ಸರ್ಕಾರಿ ಅಭಿಯೋಜಕರನ್ನು ಕರ್ನಾಟಕ ಆರ್ಥಿಕ ಸಂಹಿತೆ ಅನುಚ್ಛೇದ 17(ಸಿ) 49 ಮತ್ತು 50ರನ್ವಯ ಮಹಾಲೇಖಪಾಲರಿಂದ ಅಧಿಕರಿಸುವ (authorization) ಷರತ್ತಿಗೊಳಪಟ್ಟು ಹಣ ತೆಗೆಯುವ ಮತ್ತು ಬಟವಾಡೆ ಮಾಡುವ ಅಧಿಕಾರವನ್ನು ನೀಡಲು ಸರ್ಕಾರವು ಈ ಮೂಲಕ ಮಂಜೂರಾತಿಯನ್ನು ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 51 ವೆಚ್ಚ–11/2008 ದಿನಾಂಕ: 31.03.2009ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಪಿ.ಆರ್. 1192 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ,

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸ ಮತ್ತು ಅಭಿಯೋಗಗಳು).

**ವಿಷಯ:** ಚಾಮರಾಜನಗರದ ಸಿವಿಲ್ ಜಡ್ಜ್(ಹಿರಿಯ ವಿಭಾಗ) ಮತ್ತು ಸಿ.ಜೆ.ಎಂ. ನ್ಯಾಯಾಲಯ ಹಾಗೂ ಚನ್ನರಾಯಪಟ್ಟಣದ ಹೆಚ್ಚುವರಿ ಸಿವಿಲ್ ನ್ಯಾಯಧೀಶರ(ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯಗಳಿಗೆ ಹೊಂದಿಕೊಂಡಂತೆ ಅಭಿಯೋಜಕರುಗಳ ಕಛೇರಿಗಳಲ್ಲಿ ಸಿಬ್ಬಂದಿಯ ಹುದ್ದೆಗಳ ಸೃಜಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ:ಲಾ 309 ಎಲ್‌ಸಿಇ 2002, ದಿನಾಂಕ: 23.06.2005.

2. ಸರ್ಕಾರದ ಆದೇಶ ಸಂ:ಲಾ 292 ಎಲ್‌ಸಿಇ 2000, ದಿನಾಂಕ: 16–04–2001.

3. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ:ಡಿಪಿಎನ್/ ಸಿಶಾ1/186/2002–03, ದಿನಾಂಕ:27–04–2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಹೊಸದಾಗಿ ಪ್ರಾರಂಭವಾಗುವ ಸಿವಿಲ್ ಜಡ್ಜ್(ಹಿರಿಯ ವಿಭಾಗ) ನ್ಯಾಯಾಲಯವನ್ನು ಸಿವಿಲ್ ಜಡ್ಜ್ (ಹಿರಿಯ ವಿಭಾಗ) ಮತ್ತು ಸಿ.ಜೆ.ಎಂ. ನ್ಯಾಯಾಲಯ ಎಂದು ಪದನಾಮಗೊಳಿಸಿ ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಚನ್ನರಾಯಪಟ್ಟಣದ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರ (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯವನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡಿ ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಪತ್ರದಲ್ಲಿ, ಚಾಮರಾಜನಗರದ ಸಿವಿಲ್ ಜಡ್ಜ್(ಹಿರಿಯ ವಿಭಾಗ) ಮತ್ತು ಸಿ.ಜೆ.ಎಂ. ನ್ಯಾಯಾಲಯ ಹಾಗೂ ಚನ್ನರಾಯಪಟ್ಟಣದ ಹೆಚ್ಚುವರಿ ಸಿವಿಲ್ ನ್ಯಾಯಧೀಶರ(ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯಗಳನ್ನು ಮೇಲೆ ಕ್ರಮ ಸಂಖ್ಯೆ (1) ಮತ್ತು (2)ರಲ್ಲಿ ಓದಲಾದ ಸರ್ಕಾರದ ಆದೇಶಗಳನ್ವಯ ಸೃಜಿಸಲಾಗಿದೆ. ಸದರಿ ನ್ಯಾಯಾಲಯಗಳಲ್ಲಿ ರಾಜ್ಯವನ್ನು ಪ್ರತಿನಿಧಿಸಿ ಪ್ರಕರಣಗಳನ್ನು ನಡೆಸಲು ಚಾಮರಾಜನಗರದ ಸದರಿ ನ್ಯಾಯಾಲಯಕ್ಕೆ ಹೊಂದಿಕೊಂಡ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಗೆ ಒಂದು ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ, ಒಂದು ಬೆರಳಚ್ಚುಗಾರ–ವ–ಸಹಾಯಕರ ಮತ್ತು ಒಂದು ದಲಾಯತ್ ಹುದ್ದೆಯನ್ನು ಹಾಗೂ ಚನ್ನರಾಯಪಟ್ಟಣದ ಸದರಿ ನ್ಯಾಯಾಲಯಕ್ಕೆ ಹೊಂದಿಕೊಂಡು ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಗೆ ಒಂದು ಸಹಾಯಕ ಸರ್ಕಾರಿ ಅಭಿಯೋಜಕರ, ಬೆರಳಚ್ಚುಗಾರ–ವ–ಸಹಾಯಕರ ಮತ್ತು ಒಂದು ದಲಾಯತ್ ಹುದ್ದೆಯನ್ನು, ಇಲಾಖೆಗೆ ಸೃಜನೆ ಮಾಡುವಂತೆ ಕೋರಿರುತ್ತಾರೆ.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 48 ಪಿಪಿಇ 2008, ಬೆಂಗಳೂರು, ದಿನಾಂಕ: 22ನೇ ಏಪ್ರಿಲ್ 2009**.

ಮೇಲಿನ ವಿವರಿಸಿರುವ ಹಿನ್ನಲೆಯಲ್ಲಿ, ಚಾಮರಾಜನಗರದ ಸಿವಿಲ್ ಜಡ್ಜ್(ಹಿರಿಯ ವಿಭಾಗ) ಮತ್ತು ಸಿ.ಜೆ.ಎಂ. ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಗೆ ಹಾಗೂ ಚನ್ನರಾಯಪಟ್ಟಣದ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರ(ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಗೆ ಇದಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಿರುವಂತೆ ಹುದ್ದೆಗಳನ್ನು ಮೊದಲಬಾರಿ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ.

ಸದರಿ ಹುದ್ದೆಗಳನ್ನು ಬಾಹ್ಯಮೂಲಗಳಿಂದ ಭರ್ತಿಮಾಡಿಕೊಳ್ಳತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.07.1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹಾಗೂ ಆರ್ಥಿಕ ಇಲಾಖೆಯು ಟಿಪ್ಪಣಿ ಸಂ: ಎಫ್‌ಡಿ 918 ವೆಚ್ಚ–7/2008, ದಿನಾಂಕ: 06.12.2008 ಮತ್ತು ಎಫ್‌ಡಿ 82 ವೆಚ್ಚ–11/08, ದಿನಾಂಕ:28.01.2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ,

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸ ಮತ್ತು ಅಭಿಯೋಗಗಳು).

**ಸರ್ಕಾರದ ಆದೇಶ ಸಂಖ್ಯೆ: ಒಇ 48 ಪಿಪಿಇ 2006, ದಿನಾಂಕ: 22.04.2009**

**ಅನುಬಂಧ**

**ಚಾಮರಾಜನಗರ ಸಿವಿಲ್ ಜಡ್ಜ್ (ಹಿರಿಯ ವಿಭಾಗ) ಮತ್ತು ಸಿ.ಜೆ.ಎಂ. ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಹಿರಿಯ ಸಹಾಯ ಸರ್ಕಾರಿ ಅಭಿಯೋಜಕರ ಕಛೇರಿಗೆ ಸೃಜಿಸಲಾಗಿರುವ ಹುದ್ದೆಗಳ ವಿವರ:**

| ಕ್ರ. ಸಂ. | ಹುದ್ದೆಯ ವಿವರ | ಮಂಜೂರಾದ ಹುದ್ದೆಗಳು |
|---|---|---|
| 1 | ಬೆರಳಚ್ಚುಗಾರ–ವಾ–ಸಹಾಯಕ | 01 |
| 2 | ದಲಾಯತ್ | 01 |

ಚನ್ನರಾಯಪಟ್ಟಣದ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರ (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಗೆ ಸೃಜಿಸಲಾಗಿರುವ ಹುದ್ದೆಗಳ ವಿವರ:

| ಕ್ರ. ಸಂ. | ಹುದ್ದೆಯ ಹೆಸರು | ಮಂಜೂರಾದ ಹುದ್ದೆಗಳು |
|---|---|---|
| 1 | ಬೆರಳಚ್ಚುಗಾರ–ವಾ–ಸಹಾಯಕ | 01 |
| 2 | ದಲಾಯತ್ | 01 |

ಕೆ.ಸಿ. ಸಿದ್ದಪ್ಪ

ಪಿ.ಆರ್. 1193 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ,
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸ ಮತ್ತು ಅಭಿಯೋಗಗಳು).

## FOREST, ECOLOGY AND ENVIRONMENT SECRETARIAT

**Sub:** Transfer of lease of diversion of 27,193 ha. of Forest land in Alagilwada RF of Harapanahalli Range, Davanagere Division for establishment of 23.10 MW Wind Power Project Sanctioned in Favour of M/s Bellary Wind Power Private Ltd., to M/s. B.P. Energy India Pvt. Ltd., Mumbai

**Read:**
1. Letter No.4-KRC497/2008/BAN/3144, dated 24th October 2008 of Government of India, Ministry of Environment and Forests, Regional Office, Bangalore.
2. Government order No. FEE 96 FLL 2008, Bangalore dated 10.11.2008
3. Guide lines of G.O.I.F. No. 8-84/2002-FC, dated 14.05.2004 and 20.02.2006.
4. Letter No. A5(5)GFL.CR.3/07-08 dated 04.02.2009 of Principal Chief Conservator of Forests, Bangalore.
5. State Government letter No. FEE 16 FLL 2009, dated 13.02.2009.
6. Letter No. 4-KRC497/2008-BAN/3946, dated 11.3.2009 of Government of India, Ministry of Environment and Forests, Regional Office, Bangalore.

**Preamble:**

Government of India in its letter read at (1) above has accorded approval under Forest (Conservation) Act, 1980 for diversion of 27,193 ha. forest land in Alagilwada RF of Davanagere Division for establishment of 23.10 MW Wind Power Project in favour of M/s Bellary Wind Power Private Pvt. Ltd., Bangalore. Accordingly Government of Karnataka has issued Government order read at (2) above.

The Principal Chief Conservator of Forests, Bangalore vide his letter dated 04.02.2009 read at (4) above had submitted a proposal to obtain the approval of Government of India as per the Government of India's guidelines dated 14.05.2004 and 20.02.2006 (read at 3 above) issued under Forest (Conservation) Act, 1980 for transfer of lease for diversion of 27,193 ha. of forest land in Alagilwada Reserve Forest of Harapanahalli Range, Davanagere Division for establishment of 23.10 MW Wind Power Sanctioned in favour of M/s Bellary Wind Power Private Ltd., to M/s. B.P. Energy India Pvt. Ltd., Mumbai.

The original user agency M/s. Bellary Wind Power Private Ltd., Bangalore has proposed to transfer 27,193 ha. of forest land to the new user agency M/s. B.P. Energy India Private Limited, Mumbai. The original user agency has submitted no objection certificate for such transfer and the new user agencies have submitted an under taking that they will abide by the conditions stipulated by Government of India and Government of Karnataka.

Accordingly the proposal was recommended to Government of India vide State Government letter dated 13.02.2009 read at (5) above.

Government of India, Ministry of Environment and Forests, Regional Office, Bangalore vide their letter dated: 11th March 2009 read at (6) above has conveyed its approval guidelines issued under Forest (Conservation) Act, 1980 for transfer of lease of diverted Forest land of 27,193 ha. in Alagilwada RF of Harapanahalli Range, Davanagere Division for establishment of 23.10 MW Power Project from M/s. Bellary Wind Power Private Limited, Bangalore (the original user agency) to M/s. B.P. Energy India Private Limited, Mumbai (the Investor/Power Producer) subject to the condition that M/s. B.P.Energy India

Private Limited, Mumbai shall abide by all the conditions imposed by Central Government vide their letter dated : 24.10.2008 and any other conditions that may be stipulated by Government of India in future read at (1) above.

The proposal has been examined in detail and hence the order.

**Government Order No. FEE 16 FLL 2009, Bangalore, Dated: 4th April 2009**

In the circumstances explained above, Government are pleased to accord approval guidelines issued under Section 2 of Forest (Conservation) Act, 1980 for transfer of lease of diverted forest land of 27,193 ha. in Alagilwada RF of Harapanahalli Range, Davanagere Division for establishment of 23.10 MW Wind Power Project from M/s. Bellary Wind Power Private Limited, Bangalore, (the original User agency), to M/s. B.P. Energy India Private Limited, Mumbai (the Investor/Power Producer).

The transfer of lease is subject to the condition that the new user agencies, i.e., the investors/power producer, shall abide all the conditions imposed by the Central Government/State Government/Principal Chief Conservator of Forests, for diversion of 27,193 ha. of forest land in favour of M/s. B.P. Energy India Private Limited, Mumbai for establishment of 23.10 MW Wind Power Project in Alagilwada RF of Harapanahalli Range, Davanagere Division of Karnataka.

By Order and in the name of Governor of Karnataka,

**H.M. MALLIKARJUNA SWAMY**

P.R. 1194

Under Secretary to Government,

Forest, Ecology and Environment Department

**ಕಂದಾಯ ಸಚಿವಾಲಯ**

**ವಿಷಯ:** ಸೆಂಟ್ರಲ್ ರಿಸರ್ವ್ ಪೊಲೀಸ್ ಫೋರ್ಸ್ (ಸಿಆರ್‌ಪಿಎಫ್) ಇವರಿಗೆ ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ತರಳು ಗ್ರಾಮದ ಸ.ನಂ.55ರಲ್ಲಿನ ಸರ್ಕಾರಿ ಜಮೀನು ಮಂಜೂರಾತಿ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 121 ಎಲ್‌ಜಿಬಿ 94, ದಿ.05.07.94.
2. ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 455 ಎಲ್‌ಜಿಬಿ 2001, ದಿ.16.12.2002.
3. ಇನ್ಸ್‌ಪೆಕ್ಟರ್ ಜನರಲ್, ಸಿಆರ್‌ಪಿಎಫ್, ದಕ್ಷಿಣ ವಲಯ, ಹೈದರಬಾದ್ ಇವರ ಪತ್ರ ಸಂಖ್ಯೆ. ಬಿ–ವಿ–7/2007–ಪಿಆರ್‌ಓವಿ (ಡಬ್ಲೂ) ತರಳು, ದಿ.04.04.2008

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿನ ಸರ್ಕಾರದ ಆದೇಶ ದಿ:05.07.94ರಲ್ಲಿ ಕೇಂದ್ರೀಯ ಮೀಸಲು ಪೊಲೀಸ್ ಪಡೆ (ಸಿಆರ್‌ಪಿಎಫ್) ಇವರಿಗೆ ಬೆಂಗಳೂರು ದಕ್ಷಿಣ ತಾಲ್ಲೂಕು, ಉತ್ತರಹಳ್ಳಿ ಹೋಬಳಿ, ತರಳು ಗ್ರಾಮದ ಸ.ನಂ.55ರಲ್ಲಿ 253 ಎಕರೆ ಜಮೀನನ್ನು ರೈಫಲ್ ಫೈಯರಿಂಗ್ ರೇಂಜ್ ಉದ್ದೇಶಕ್ಕಾಗಿ ಪ್ರತಿ ಎಕರೆಗೆ ರೂ.30,000/– ಹಾಗೂ ಭೂ ಪರಿವರ್ತನೆ ಶುಲ್ಕ ಮತ್ತಿತರ ಶುಲ್ಕಗಳನ್ನು ವಿಧಿಸಿ ಮಂಜೂರು ಮಾಡಲು ಸರ್ಕಾರದ ಅನುಮೋದನೆ ನೀಡಲಾಗಿತ್ತು.

ವೈಲ್ಡ್‌ಲೈಫ್ ಆಫ್ ಇಂಡಿಯಾ ಇವರು ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ್ದ ಸಾರ್ವಜನಿಕ ಹಿತಾಸಕ್ತಿ ರಿಟ್ ಅರ್ಜಿ ಸಂಖ್ಯೆ: 7301/2001 ಟ್ರಸ್ಟ್ ಅನ್ನು ರೈಫಲ್ ಫೈಯರಿಂಗ್ ರೇಂಜ್ ಉದ್ದೇಶಕ್ಕಾಗಿ ಸಿಆರ್‌ಪಿಎಫ್ ಇವರಿಗೆ ಸೂಕ್ತ ಜಮೀನು ಮಂಜೂರು ಮಾಡುವಂತೆ ನಿರ್ದೇಶನ ನೀಡಿ, ರಾಜ್ಯ ಉಚ್ಚ ನ್ಯಾಯಾಲಯವು ರಿಟ್ ಅರ್ಜಿಯನ್ನು ಇತ್ಯರ್ಥ ಪಡಿಸಿರುತ್ತದೆ. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿ:01.09.2001ರಂದು ನಡೆದ ಸಭೆಯಲ್ಲಿ ಸದರಿ ಜಮೀನು ಅರಣ್ಯ ಇಲಾಖೆ ವ್ಯಾಪ್ತಿಯಲ್ಲಿರುವ ಜಮೀನಿಗೆ ಹೊಂದಿಕೊಂಡಿದ್ದು, ಸದರಿ ಜಮೀನುಗಳು ಸೇಫ್ ಸೋನ್‌ನಲ್ಲಿ ಬರುತ್ತಿದ್ದು, ಸಿಆರ್‌ಪಿಎಫ್ ಇವರಿಗೆ ರೈಫಲ್ ಫೈಯರಿಂಗ್ ರೇಂಜ್ ಉದ್ದೇಶಕ್ಕಾಗಿ ನೀಡಿರುವುದರಿಂದ ವನ್ಯ ಜೀವಿಗಳಿಗೆ ತೊಂದರೆಯಾಗುವುದೆಂದು ತಿಳಿಸಿ ಮಂಜೂರಾತಿಯನ್ನು ರದ್ದುಪಡಿಸಲು ನಿರ್ಣಯಿಸಲಾಗಿರುತ್ತದೆ. ಅದರಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿನ ಸರ್ಕಾರದ ಆದೇಶ ದಿ: 16.12.2002ರಲ್ಲಿ ಸಿಆರ್‌ಪಿಎಫ್ ಇವರಿಗೆ 253 ಎಕರೆ ಜಮೀನನ್ನು ಮಂಜೂರು ಮಾಡಿರುವ ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 121 ಎಲ್‌ಜಿಬಿ 94, ದಿ: 05.07.94 ನ್ನು ರದ್ದುಪಡಿಸಿ, ಈ ರದ್ದುಗೊಳಿಸಿದ 253 ಎಕರೆ ಜಮೀನಿನ ಪೈಕಿ 100 ಎಕರೆ ಜಮೀನನ್ನು ವಿಜ್ಞಾನ ನಗರ ಮತ್ತು ಸ್ಪೇಸ್ ಮ್ಯೂಸಿಯಂ ಉದ್ದೇಶಗಳಿಗಾಗಿ ಯೋಜನಾ, ಸಾಂಖ್ಯಿಕ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಗೆ ವರ್ಗಾಯಿಸಲು ಸರ್ಕಾರದ ಪೂರ್ವಾನುಮೋದನೆ ನೀಡಲಾಗಿರುತ್ತದೆ.

ಇನ್ಸ್‌ಪೆಕ್ಟರ್ ಜನರಲ್, ಸಿಆರ್‌ಪಿಎಫ್, ಹೈದರಬಾದ್ ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿನ ಪತ್ರದಲ್ಲಿ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿ ಸದರಿ ಜಮೀನಿನಲ್ಲಿ ಬೆಟಾಲಿಯನ್ ಕ್ಯಾಪಿಂಗ್ ಸೈಟ್ ಹಾಗೂ ಸ್ಪೇಸ್ ಫಾರ್ ಫ್ರೀ ಇಂಡಕ್ಷನ್ ಟ್ರೈನಿಂಗ್ ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳುವುದರಿಂದ ತರಳು ಗ್ರಾಮದ 253 ಎಕರೆ ಜಮೀನನ್ನು ಅವರಿಗೇ ಬಿಟ್ಟು ಕೊಡುವಂತೆ ಕೋರಿರುತ್ತಾರೆ. ದಿ:23.02.2005ರಂದು ನಡೆದ ಸಭೆಯಲ್ಲಿ ಈ ಹಿಂದಿನ ರಾಜ್ಯ ಸರ್ಕಾರದ ಬದ್ಧತೆಯನ್ನು ಭಾಗಶಃ ಗೌರವಿಸಲು ಸಿಆರ್‌ಪಿಎಫ್ ಇವರಿಗೆ ಸದರಿ ಜಮೀನಿನಲ್ಲಿ 100 ಎಕರೆಯನ್ನು ಹಾಗೂ ಫೈಯರಿಂಗ್ ರೇಂಜ್ ಉದ್ದೇಶಕ್ಕಾಗಿ ನೆಲಮಂಗಲ ಮತ್ತು ಮಾಗಡಿ ತಾಲ್ಲೂಕುಗಳಲ್ಲಿ ಮಂಜೂರು ಮಾಡಲು ಸಿಆರ್‌ಪಿಎಫ್ ಇವರ ಅಭಿಪ್ರಾಯವನ್ನು ಸರ್ಕಾರದ ಪತ್ರ ದಿ:24.09.05 ರಲ್ಲಿ ಕೋರಲಾಗಿತ್ತು. ಆದರೆ ಭಾರತ ಸರ್ಕಾರದ ಒಳಾಡಳಿತ ಸಚಿವಾಲಯವು ಮತ್ತು ಸಿಆರ್‌ಪಿಎಫ್ ಇವರು ತರಬೇತಿ ಸಂಬಂಧಿತ ಚಟುವಟಿಕೆಗಳಿಗೆ ಅಗತ್ಯ ಮೂಲ ಸೌಲಭ್ಯಗಳನ್ನು ಕಲ್ಪಿಸಲು ಅಪಾರ ಬಂಡವಾಳವನ್ನು ಈಗಾಗಲೇ ತೊಡಗಿಸಿರುವುದರಿಂದ ರಾಜ್ಯ ಸರ್ಕಾರದ 100 ಎಕರೆ ಜಮೀನನ್ನು ತರಳು ಗ್ರಾಮದಲ್ಲಿ ಹಾಗೂ 152 ಎಕರೆ ಜಮೀನನ್ನು ನೆಲಮಂಗಲ ಮತ್ತು ಮಾಗಡಿ ತಾಲ್ಲೂಕುಗಳಲ್ಲಿ ಮಂಜೂರು ಮಾಡುವ ಪ್ರಸ್ತಾವನೆಗೆ ಒಪ್ಪದೇ ಈ ಹಿಂದೆ ತರಳು ಗ್ರಾಮದಲ್ಲಿ 253 ಎಕರೆ ಮಂಜೂರು ಮಾಡಿರುವುದನ್ನೇ ನೀಡುವಂತೆ ಹಾಗೂ ಈ ಜಮೀನಿನಲ್ಲಿ ಸಿಆರ್‌ಪಿಎಫ್ ಈಗಾಗಲೇ ಫೈಯರಿಂಗ್ ಅಭ್ಯಾಸಗಳನ್ನು ಹೊರತುಪಡಿಸಿ ತರಭೇತಿ ಚಟುವಟಿಕೆಗಳನ್ನು ನಡೆಸುತ್ತಿರುವುದರಿಂದ ಈ ಜಮೀನನ್ನೇ ನೀಡುವಂತೆ ಕೋರಿರುತ್ತಾರೆ.

ಈ ನಡುವೆ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ವಿಜ್ಞಾನ ನಗರಕ್ಕಾಗಿ ಮಂಜೂರು ಮಾಡಿರುವ 100 ಎಕರೆ ಜಮೀನಿನ ಸ್ವಾಧೀನತೆ ನೀಡುವಂತೆ ಕಂದಾಯ ಇಲಾಖೆಯನ್ನು ಕೋರಿರುತ್ತದೆ. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿ:25.06.08 ರಂದು ನಡೆದ ಸಭೆಯಲ್ಲಿ ರಾಜ್ಯ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂ:7301/2001ರಲ್ಲಿ ಸಿಆರ್‌ಪಿಎಫ್‌ಗೆ ನೀಡಿರುವ ಜಮೀನನ್ನು ರದ್ದುಪಡಿಸಲು ಯಾವುದೇ ನಿರ್ದೇಶನ ನೀಡಿರುವುದಿಲ್ಲ ಎಂಬ ಅಂಶವನ್ನು ಸಭೆಯಲ್ಲಿ ಗಮನಿಸಲಾಯಿತು. ಸಭೆಗೆ ಹಾಜರಾಗಿದ್ದ ಸಿಆರ್‌ಪಿಎಫ್ ಅಧಿಕಾರಿಗಳು ಈ ಜಮೀನಿನಲ್ಲಿ ಸಿಆರ್‌ಪಿಎಫ್ ಯಾವುದೇ ಫೈಯರಿಂಗ್ ಚಟುವಟಿಕೆಗಳನ್ನು ನಡೆಸುವುದಿಲ್ಲವೆಂದು ಹಾಗೂ ಈ ಸಂಬಂಧವಾಗಿ ಕರ್ನಾಟಕ ಸರ್ಕಾರಕ್ಕೆ ಮುಚ್ಚಳಿಕೆ ನೀಡುವುದಾಗಿ ಸಭೇಯಲ್ಲಿ ತಿಳಿಸಿರುತ್ತಾರೆ. ಸರ್ಕಾರದ ಕಾರ್ಯದರ್ಶಿ, ಅರಣ್ಯ ಇಲಾಖೆ ಇವರು ಸರ್ವೋಚ್ಚ ನ್ಯಾಯಾಲಯವು ರಚಿಸಿರುವ ಸೆಂಟ್ರಲ್ ಎಂಪವರ್ಡ್ ಕಮಿಟಿಯ ಮುಂದೆ ವೈಲ್ಡ್‌ಲೈಫ್ ಆಫ್ ಇಂಡಿಯಾ ಇವರು ಸಲ್ಲಿಸಲಾಗಿರುವ ಅರ್ಜಿ ಸಂಖ್ಯೆ: 369ಕ್ಕೆ ಸಂಬಂಧಿಸಿದಂತೆ ವಿಜ್ಞಾನ ನಗರಕ್ಕೆ ಮಂಜೂರು ಮಾಡಿರುವ 100 ಎಕರೆ ಜಮೀನನ್ನು ರದ್ದುಪಡಿಸುವುದಾಗಿ ಪ್ರಮಾಣ ಪತ್ರ ಸಲ್ಲಿಸಿರುವುದಾಗಿ ಸಭೆಯಲ್ಲಿ ತಿಳಿಸಿರುತ್ತಾರೆ. ಆದ್ದರಿಂದ ಮಾಹಿತಿ ತಂತ್ರಜ್ಞಾನ ಇಲಾಖೆಗೆ ಈ ಜಮೀನನ್ನು ನೀಡದಿರಲು ತಿಳಿಸಿರುತ್ತಾರೆ. ಆದ್ದರಿಂದ ದಿ: 25.06.2008ರಂದು ನಡೆದ ಸಭೆಯಲ್ಲಿ ಸಿಆರ್‌ಪಿಎಫ್‌ಗೆ ತರಳು ಗ್ರಾಮದಲ್ಲಿ 253 ಎಕರೆ ಜಮೀನನ್ನು ಮಂಜೂರು ಮಾಡಿರುವ ಸರ್ಕಾರಿ ಆದೇಶ ದಿ:05.07.94 ನ್ನು ಪುನರ್ ಸ್ಥಿತಿಗೆ ತರಲು ಹಾಗೂ ವಿಜ್ಞಾನ ನಗರ ಉದ್ದೇಶಕ್ಕಾಗಿ ಬದಲಿ ಜಮೀನನ್ನು ಮಂಜೂರು ಮಾಡಲು ತೀರ್ಮಾನಿಸಲಾಗಿರುತ್ತದೆ.

ಆದರೆ ಪ್ರಸ್ತುತ ತರಳು ಗ್ರಾಮದ ಸ.ನಂ.55 ರ ಜಮೀನಿನ ವಿವರವಾದ ಸರ್ವೆ ಮಾಡಿ ಸಲ್ಲಿಸಲಾಗಿರುವ ನಕ್ಷೆಯ ಪ್ರಕಾರ ಲಭ್ಯವಿರುವ ಜಮೀನಿನ ವಿವರ ಕೆಳಕಂಡಂತಿರುತ್ತದೆ.

1) ಸಿಆರ್‌ಪಿಎಫ್ ರವರಿಗೆ ಖಾಲಿ ಇರುವ ಜಮೀನು 220 ಎಕರೆ.
2) ರೈತರು ತಮಗೆ ಇನಾಂ ಅಬಾಲಿಷನ್ ವಿಶೇಷ ಜಿಲ್ಲಾಧಿಕಾರಿಗಳಿಂದ ಎಂಡಾರ್ಸ್‌ಮೆಂಟ್ ಆಗಿದೆ ಎಂದು ತಿಳಿಸುವ ಹಾಗೂ ಅನುಭವಿಸುತ್ತಿರುವ ವಿಸ್ತೀರ್ಣ 183.28 ಎಕರೆ.
3) ಗ್ರಾಮಠಾಣ, ಖರಾಬ್, ರಸ್ತೆ ವಗೈರೆ, ಹದ್ದಿಗೆ ಹಿಡಿದಹಳ್ಳ 47.37 ಎಕರೆ.

ಮೇಲ್ಕಂಡ ಸರ್ವೆ ನಕ್ಷೆಯಂತೆ ಖಾಲಿ ಇರುವ 220 ಎಕರೆ ಜಮೀನನ್ನು ಸಿಆರ್‌ಪಿಎಫ್ ಇವರಿಗೆ ಮಂಜೂರು ಮಾಡಲು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 198 ಎಲ್‌ಜಿಬಿ 2000, ಬೆಂಗಳೂರು, ದಿನಾಂಕ: 17ನೇ ಡಿಸೆಂಬರ್ 2008**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸಿಆರ್‌ಪಿಎಫ್ ರವರ ಚಟುವಟಿಕೆಗಳು ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನದಲ್ಲಿನ ವನ್ಯಜೀವಿಗಳಿಗೆ ಯಾವುದೇ ತೊಂದರೆಯಾಗಬಾರದು ಹಾಗೂ ಈ ಜಮೀನಿನಲ್ಲಿ ಫೈಯರಿಂಗ್ ರೇಂಜ್ ನಡೆಸಬಾರದೆಂಬ ಷರತ್ತಿಗೊಳಪಟ್ಟು ದಿ:05.07.94 ರ ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 121 ಎಲ್‌ಜಿಬಿ 94 ಅನ್ನು ಭಾಗಶಃ ಮಾರ್ಪಡಿಸಿ ಸ.ನಂ 55 ರಲ್ಲಿನ 253 ಎಕರೆ ಬದಲಿಗೆ ಸರ್ವೆ ನಕ್ಷೆ ಪ್ರಕಾರ ಯಾರದೇ ಸ್ವಾಧೀನದಲ್ಲಿ ಇರದೇ ಖಾಲಿ ಇರುವ 220 ಎಕರೆ ಜಮೀನನ್ನು ಮಾತ್ರ ಸಿಆರ್‌ಪಿಎಫ್ ಇವರಿಗೆ ಮಂಜೂರು ಮಾಡಲು ಆದೇಶಿಸಿದೆ. ಅಲ್ಲದೇ ದಿ:16.12.2002 ರ ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 455 ಎಲ್‌ಜಿಬಿ 2001 ರಲ್ಲಿ 100 ಎಕರೆ ಜಮೀನನ್ನು ವಿಜ್ಞಾನ ನಗರಕ್ಕೆ ಮಂಜೂರು ಮಾಡಿರುವುದನ್ನು ರದ್ದುಪಡಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1195

**ಇ. ಈಶ್ವರ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ.ಮಂಜೂರಾತಿ)

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ:** ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಹಾಗೂ ಡಿಆರ್‌ಡಿಎ ಆಡಳಿತ ಕಾರ್ಯಕ್ರಮಗಳನ್ನು 2009–2010ನೇ ಸಾಲಿನಲ್ಲಿ ಮುಂದುವರೆಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ನಡೆವಳಿ ಸಂಖ್ಯೆ: ಗ್ರಾಅಪ 28 ಯೋಉಮಾ 2009 ದಿನಾಂಕ: 03.04.2009.

**ಪ್ರಸ್ತಾವನೆ:**

2008–09ನೇ ಸಾಲಿನಲ್ಲಿ ಅನುಷ್ಠಾನಗೊಳಿಸಿದ ಯೋಜನೆಗಳನ್ನು 2009–2010ನೇ ಸಾಲಿನಲ್ಲಿ ಮುಂದುವರಿಸುವ ಕುರಿತು ದಿನಾಂಕ 02–04–2009 ರಂದು ಇಲಾಖೆಯ ಸರ್ಕಾರದ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಮುಂದುವರೆಸಲು ತೀರ್ಮಾನಿಸಲಾಗಿದೆ. ಅದರಂತೆ, 2009–2010ನೇ ಸಾಲಿಗೆ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಹಾಗೂ ಡಿಆರ್‌ಡಿಎ ಆಡಳಿತ ಕಾರ್ಯಕ್ರಮಗಳನ್ನು ಮುಂದುವರಿಸಲು ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 25 ಎಸ್‌ಜೆವೈ 2008, ಬೆಂಗಳೂರು, ದಿನಾಂಕ: 18ನೇ ಏಪ್ರಿಲ್ 2009**

ಕರ್ನಾಟಕ ಸರ್ಕಾರವು ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಹಾಗೂ ಡಿಆರ್‌ಡಿಎ ಆಡಳಿತ ಕಾರ್ಯಕ್ರಮಗಳನ್ನು ಕೇಂದ್ರ ಸರ್ಕಾರವು ಈ ಯೋಜನೆಗೆ ನಿಗದಿಪಡಿಸಬಹುದಾದ ಅನುದಾನ ಹಾಗೂ ವಿಧಿಸಬಹುದಾದ ಷರತ್ತುಗಳಿಗೆ ಒಳಪಟ್ಟು 2009–2010ನೇ ಸಾಲಿಗೆ ಮುಂದುವರಿಸಿದೆ.

2009–2010ನೇ ಸಾಲಿನಲ್ಲಿ ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಹಾಗೂ ಡಿಆರ್‌ಡಿಎ ಆಡಳಿತ ಕಾರ್ಯಕ್ರಮಗಳನ್ನು ಈ ಕೆಳಕಂಡ ಲೆಕ್ಕಶೀರ್ಷಿಕೆಯಲ್ಲಿ ಭರಿಸತಕ್ಕದ್ದು.

**ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಎಸ್‌ಜಿಎಸ್‌ವೈ) ಲೆಕ್ಕ ಶೀರ್ಷಿಕೆ:** "2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು 01 ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198–ಗ್ರಾಮ ಪಂಚಾಯತ್‌ಗಳಿಗೆ ಸಹಾಯ–6–ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2009–2010 (2501–01–198–6–01)" (ಲಿಂಕ್ ಕೋಡ್ 2501–01–800–0–07)

**ಡಿಆರ್‌ಡಿಎ (ಆಡಳಿತ) (ಜಿಲ್ಲಾವಲಯ) ಲೆಕ್ಕಶೀರ್ಷಿಕೆ:** "2515 ಇತರೆ ಗಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196–ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6–ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ–(ಕೇಂದ್ರ ಪುರಸ್ಕೃತ ಯೋಜನೆ) 2009–2010 (2515–00–196–6–06)".

**ಡಿಆರ್‌ಡಿಎ (ಆಡಳಿತ) ರಾಜ್ಯ ಕೋಶ ಲೆಕ್ಕಶೀರ್ಷಿಕೆ:** "2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–800–ಇತರೆ ವೆಚ್ಚಗಳು–0–08 ಜಿಲ್ಲಾ ಗಾಮೀಣಾಭಿವೃದ್ಧಿ ಏಜೆನ್ಸಿ (ಯೋಜನೆ) (2515–00–800–0–08)".

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರ ಸಹಮತಿ ಸಂಖ್ಯೆ:ಗ್ರಾಅಪ 130 ಪಿಬಿಎಸ್ 2009 ದಿನಾಂಕ 16–04–2009ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಾ: ಶಮ್ಲಾ ಇಕ್ಬಾಲ್**

ಪಿ.ಆರ್. 1196 ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ವಿಷಯ:** ಶ್ರೀ ಎಸ್.ಆರ್. ಮಿಟ್ಟಲಕೋಡ, ಕಿರಿಯ ಇಂಜಿನಿಯರ್ ಮತ್ತು ಎಂ.ಎಂ. ಕಲ್ಯಾಣಶೆಟ್ಟಿ, ಗ್ರಾಮ ಪಂಚಾಯತ್ ಕಾರ್ಯದರ್ಶಿ, ಮುಧೋಳ ಬಾಗಲಕೋಟೆ ಜಿಲ್ಲೆ ಇವರುಗಳು ಎಸೆಗಿದ ಅಕ್ರಮಗಳಿಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಉಪ ಲೋಕಾಯುಕ್ತರಿಗೆ ವಹಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1. ಸರ್ಕಾರದ ಪತ್ರ ಸಂಖ್ಯೆ. ಗ್ರಾಅಪ 125 ಕೆಎಸ್‌ಎಸ್ 2005 (ಭಾಗ), ದಿನಾಂಕ, 13–02–2006.

2. ಉಪ ನಿಬಂಧಕರು, (ವಿಚಾರಣೆ–2), ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂ. D.O.NO.COMPT/UPLOK/BGM-28/2006/DRE-2, ದಿ. 19–03–09.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ ಶ್ರೀ ಎಸ್.ಆರ್. ಮಿಟ್ಟಲಕೋಡ, ಅಂದಿನ ಕಿರಿಯ ಇಂಜಿನಿಯರ್, ತಾಲ್ಲೂಕು ಪಂಚಾಯತ್, ಮುಧೋಳ, ಬಾಗಲಕೋಟೆ ಜಿಲ್ಲೆ ಮತ್ತು ಶ್ರೀ ಎಂ.ಎಂ.ಕಲ್ಯಾಣಶೆಟ್ಟಿ, ಅಂದಿನ ಕಾರ್ಯದರ್ಶಿ, ಗ್ರಾಮ ಪಂಚಾಯತ್, ನಾಗರಾಳ, ಮುಧೋಳ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ಹಾಗೂ ಶ್ರೀ ಎ.ವಿ.ಆಡಿನವರ, ಅಂದಿನ ಕಾರ್ಯದರ್ಶಿ, ಗ್ರಾಮ ಪಂಚಾಯತ್ ವತಿಯಿಂದ ಕಟ್ಟಿಸಿದ ನೀರಿನ ತೊಟ್ಟಿ ನಿರ್ಮಾಣದಲ್ಲಿ ಕಳಪೆ ಕಾಮಗಾರಿ

ನಿರ್ವಹಿಸಿರುತ್ತಾರೆಂಬ ಆಪಾದನೆಗಳ ಬಗ್ಗೆ ತನಿಖೆ ಮಾಡಿ ವರದಿ ಸಲ್ಲಿಸುವಂತೆ ಕೋರಿ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತಕ್ಕೆ ವಹಿಸಲಾಗಿತ್ತು.

ಉಪನಿಬಂಧಕರು (ವಿಚಾರಣೆಗಳು–2), ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ತಮ್ಮ ಪತ್ರದೊಂದಿಗೆ ಮಾನ್ಯ ಉಪ ಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ ಇವರು ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಸೆಕ್ಷನ್ 12(3) ರಡಿ ನೀಡಿರುವ ವರದಿಯನ್ನು ಕಳುಹಿಸುತ್ತಾ ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸಿನಂತೆ ಕ್ರಮ ವಹಿಸಲು ಕೋರಿರುತ್ತಾರೆ.

ಮಾನ್ಯ ಉಪ ಲೋಕಾಯುಕ್ತರು ತಮ್ಮ ವರದಿಯಲ್ಲಿ ಶ್ರೀ ಎಸ್.ಆರ್. ಮಿಟ್ಟಲಕೋಡ, ಕಿರಿಯ ಇಂಜಿನಿಯರ್, ತಾಲ್ಲೂಕು ಪಂಚಾಯತ್, ಮುಧೋಳ, ಬಾಗಲಕೋಟೆ ಜಿಲ್ಲೆ ಮತ್ತು ಶ್ರೀ ಎಂ.ಎಂ. ಕಲ್ಯಾಣಶೆಟ್ಟಿ, ಕಾರ್ಯದರ್ಶಿ, ಗ್ರಾಮ ಪಂಚಾಯತ್, ಮುಧೋಳ ಬಾಗಲಕೋಟೆ ಜಿಲ್ಲೆ ಇವರುಗಳು ನಾಗರಾಳ ಗ್ರಾಮದಲ್ಲಿ ಕೈಗೊಳ್ಳಲಾದ ನೀರಿನ ತೊಟ್ಟಿ ನಿರ್ಮಾಣದಲ್ಲಿ ಕಳಪೆ ಕಾಮಗಾರಿ ಎಸೆಗಿ, ಸದರಿ ನೀರಿನ ತೊಟ್ಟಿಯು ಕುಸಿಯಲು ಹಾಗೂ ಆ ಮೂಲಕ ಇಬ್ಬರು ಮಹಿಳೆಯುರು ಸಾವಿಗೀಡಾಗಲು ಮತ್ತು ಒಬ್ಬ ಬಾಲಕಿಯು ಗಾಯಗೊಳ್ಳಲು ಕಾರಣರಾಗಿದ್ದು, ಆ ಮೂಲಕ ಸರ್ಕಾರದ ಕರ್ತವ್ಯದಲ್ಲಿ ಆಸಕ್ತಿ, ನಿಷ್ಠೆ ಹಾಗೂ ಪ್ರಾಮಾಣಿಕತೆ ತೋರುವಲ್ಲಿ ಸಂಪೂರ್ಣ ವಿಫಲರಾಗಿದ್ದು, ತೀವ್ರತರವಾದ ದುರ್ನಡತೆ ಎಸೆಗಿರುವುದು ಮೇಲ್ನೋಟಕ್ಕೆ ಕಂಡುಬಂದಿದೆ ಎಂದು ತಿಳಿಸುತ್ತಾ, ಆರೋಪಿತರ ವಿರುದ್ಧ ಶಿಸ್ತು ಕ್ರಮ ಪ್ರಾರಂಭಿಸಲು ಶಿಫಾರಸ್ಸು ಮಾಡಿ, ಅದಕ್ಕಾಗಿ ಪ್ರಕರಣದಲ್ಲಿ ವಿವರವಾದ ಇಲಾಖಾ ವಿಚಾರಣೆ ಕೈಗೊಳ್ಳಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 14 (ಎ) ರಡಿಯಲ್ಲಿ ಪ್ರಕರಣವನ್ನು ಕರ್ನಾಟಕ ಉಪ ಲೋಕಯುಕ್ತಕ್ಕೆ ವಹಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಸರ್ಕಾರವು ಮಾನ್ಯ ಉಪ ಲೋಕಾಯುಕ್ತರ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸದರಿ ನೌಕರರು ಸರ್ಕಾರದ ಕರ್ತವ್ಯ ನಿರ್ವಹಿಸುವಲ್ಲಿ ತೀವ್ರತರಲೋಪ ಮತ್ತು ದುರ್ನಡತೆ ಎಸೆಗಿದ್ದಾರೆಂಬುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ, ಸದರಿ ವರದಿಯನ್ನು ಒಪ್ಪಿ ಈ ಪ್ರಕರಣದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ರೀತ್ಯ ಇಲಾಖಾ ವಿಚಾರಣೆ ನಡೆಸಲು ಸದರಿ ನಿಯಾಮಾವಳಿಗಳ ನಿಯಮ 14(ಎ)ರನ್ವಯ ಈ ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಲು ನಿರ್ಣಯಿಸಿದೆ. ಆದ್ದರಿಂದ ಈ ಆದೇಶ.

**ಆದೇಶ ಸಂಖ್ಯೆ: ಗ್ರಾಅಪ 2 ಇಎನ್‌ಕ್ಯೂ 09, ಬೆಂಗಳೂರು, ದಿನಾಂಕ: 25ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಶ್ರೀ ಎಸ್.ಆರ್. ಮಿಟ್ಟಲಕೋಡ, ಹಿಂದಿನ ಕಿರಿಯ ಇಂಜಿನಿಯರ್, ತಾಲ್ಲೂಕು ಪಂಚಾಯತ್, ಮುಧೋಳ, ಬಾಗಲಕೋಟೆ ಜಿಲ್ಲೆ (ಪ್ರಸ್ತುತ ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಬೀಳಗಿ) ಮತ್ತು ಶ್ರೀ ಎಂ.ಎಂ.ಕಲ್ಯಾಣಶೆಟ್ಟಿ, ಹಿಂದಿನ ಕಾರ್ಯದರ್ಶಿ, ಗ್ರಾಮ ಪಂಚಾಯತ್, ಮುಧೋಳ ಬಾಗಲಕೋಟೆ ಜಿಲ್ಲೆ (ಪ್ರಸ್ತುತ ಕೋಲೂರು ಗ್ರಾಮ ಪಂಚಾಯತ್, ಬೀಳಗಿ ತಾಲ್ಲೂಕು) ಇವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11ರ ರೀತ್ಯ ಇಲಾಖಾ ವಿಚಾರಣೆ ನಡೆಸಲು ಸದರಿ ನಿಯಾಮಾಳಿಗಳ ನಿಯಮ 14(ಎ) ರನ್ವಯ ಈ ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಿ ಆದೇಶಿಸಿದೆ.

ಸದರಿ ವಿಚಾರಣೆಯನ್ನು ಮೂರು ತಿಂಗಳೊಳಗಾಗಿ ಪೂರ್ಣಗೊಳಿಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಲು ಈ ಮೂಲಕ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವೈ. ಸಾಗರ**

ಪಿ.ಆರ್. 1197

ಸರ್ಕಾರದ ಅಧೀನ ಕಾರ್ಯದರ್ಶಿ, (ಸೇವೆಗಳು–ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಶ್ರೀ ಕೆ.ಬಿ.ಲೆಂಕಣ್ಣವರ್, ಜಿಲ್ಲಾ ನ್ಯಾಯಾಧೀಶರು ಅವರ ವಿರುದ್ಧ ಇಲಾಖಾ ವಿಚಾರಣೆ – ದಂಡನೆ ವಿಧಿಸಿ ಅಂತಿಮ ಆದೇಶವನ್ನು ಹೊರಡಿಸುವ ಬಗ್ಗೆ

**ಓದಲಾಗಿದೆ:**
1. ನೋಟೀಸ್ ಸಂಖ್ಯೆ ಡಿ.ಐ.10/2005 ದಿ: 6.09.2005 ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ ಅವರಿಂದ,
2. ವಿಚಾರಣಾ ವರದಿ ದಿನಾಂಕ: 30.07.2007 ನ್ಯಾಯಮೂರ್ತಿ ಆರ್.ಗುರುರಾಜನ್, ವಿಚಾರಣಾಧಿಕಾರಿಗಳಿಂದ.
3. ನೋಟೀಸ್ ಸಂಖ್ಯೆ ಡಿ.ಐ.10/2005 ದಿ: 11.10.2007 ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ ಅವರಿಂದ,

4. ಶ್ರೀ ಕೆ.ಬಿ.ಲೆಂಕಣ್ಣವರ್, ಜಿಲ್ಲಾ ನ್ಯಾಯಾಧೀಶರ ಉತ್ತರ ದಿನಾಂಕ: 26.10.2007
5. ರಿಜಿಸ್ಟ್ರಾರ್ ಜನರಲ್, ಕರ್ನಾಟಕ ಉಚ್ಚ ನ್ಯಾಯಾಲಯ ಬೆಂಗಳೂರು ಅವರ ಪತ್ರ ಸಂಖ್ಯೆ ಡಿ.ಐ. 10/2005 ದಿನಾಂಕ: 18.10.2008 ಹಾಗೂ 19.02.2009

**ಪ್ರಸ್ತಾವನೆ:**

ಶ್ರೀ ಕೆ.ಬಿ. ಲೆಂಕಣ್ಣವರ್, ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರ ವಿರುದ್ಧ ಕರ್ನಾಟಕ ಉಚ್ಚ ನ್ಯಾಯಾಲಯವು ಮೇಲೆ (1)ರಲ್ಲಿ ಓದಲಾದ ದಿನಾಂಕ: 06.09.2005 ರ ದೋಷಾರೋಪಣೆ ಮಾಡುವ ಮೂಲಕ ಈ ಕೆಳಕಂಡ ಆರೋಪಗಳನ್ನು ಕುರಿತು ವಿವರವಾದ ವಿಚಾರಣೆ ನಡೆಸಿತು.

(1) 29ನೇ ಹೆಚ್ಚುವರಿ ಸಿಟಿ ಸಿವಿಲ್ ಅಂಡ್ ಸೆಷನ್ಸ್ ನ್ಯಾಯಾಧೀಶರು, ಬೆಂಗಳೂರು ಈ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ, ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದ ಕಾವೇರಿ ಭವನ ಶಾಖೆಯಿಂದ ರೂ. 1.00 ಲಕ್ಷ ; ಜೀವನಭೀಮಾ ನಗರ ಶಾಖೆಯಿಂದ 2.00 ಲಕ್ಷ ಸಾಲಗಳನ್ನು 2002 ಮತ್ತು 2003 ರಲ್ಲಿ ಪಡೆದು ಜೀವನಭೀಮಾ ನಗರ ಶಾಖೆಗೆ ರೂ. 1,78,000/– ಗಳನ್ನು ಕಾವೇರಿ ಭವನ ಶಾಖೆಗೆ ರೂ.1,10,000/–ಗಳನ್ನು 2005 ರ ಜುಲೈನಲ್ಲಿ ಒಟ್ಟಿಗೆ ಪಾವತಿಸಿ ಆ ಹಣದ ಮೂಲವನ್ನು ತಿಳಿಸಲು ವಿಫಲರಾಗಿದ್ದು.

(2) ನ್ಯಾಯಾಂಗ ಅಧಿಕಾರಿಗಳ ಸಹಕಾರ ಸಂಘದಿಂದ ಸಾಲ ಪಡೆದು ಹಾಗೂ ತನ್ನ ಉಳಿತಾಯದೊಡನೆ ಮಾರುತಿ ಎಸ್ಟೀಂ ಕಾರನ್ನು ಖರೀದಿಸಲು ಅನುಮತಿ ಪಡೆದು ಆ ರೀತಿ ಮಾಡದೆ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಮಡಿಕೇರಿ ಶಾಖೆಯಿಂದ 4.65 ಲಕ್ಷ ರೂಪಾಯಿಗಳ ವಾಹನ ಸಾಲ ಪಡೆದು ಆ ಮಾಹಿತಿಯನ್ನು ನೇಮಕಾತಿ ಪ್ರಾಧಿಕಾರಿಯಿಂದ ಮುಚ್ಚಿಟ್ಟಿದ್ದು.

(3) ಪ್ರಿನ್ಸಿಪಲ್ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಮಡಿಕೇರಿ ಈ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ 2004–05 ರಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಕಾರ್ಪೋರೇಷನ್ ಬ್ಯಾಂಕ್ ಮತ್ತು ಕೆನರಾ ಬ್ಯಾಂಕ್‌ಗಳ ಮಡಿಕೇರಿ ಶಾಖೆಗಳಿಂದ ಸಕ್ಷಮ ಪ್ರಾಧಿಕಾರಿಯ ಅನುಮತಿ ಪಡೆಯದೆ ಒಟ್ಟು 10.50 ಲಕ್ಷ ರೂಪಾಯಿಗಳ ವಿವಿಧ ರೀತಿಯ ಸಾಲವನ್ನು ಪಡೆದಿದ್ದು.

(4) ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಮಡಿಕೇರಿ ಶಾಖೆಯ ಅವರ ಉಳಿತಾಯ ಖಾತೆಯಲ್ಲಿ 2003 ರಿಂದ 2005 ರವರೆಗಿನ 2 ವರ್ಷಗಳ ಅವಧಿಯಲ್ಲಿ ಸತತವಾಗಿ ಅಪಾರ ಮೊತ್ತವು ಜಮೆಯಾಗಿದ್ದು, ಅದನ್ನು ಅವರ ಆಸ್ತಿ/ಋಣ ಪಟ್ಟಿಯಲ್ಲಿ ತೋರಿಸದೆ ಉಳಿದಿದ್ದು.

(5) ಅವರ ಸಾರ್ವಜನಿಕ ಭವಿಷ್ಯ ನಿಧಿ ಖಾತೆಯಿಂದ 3 ಭಾರಿ ಮುಂಗಡವನ್ನು ಪಡೆದು ಯಾವ ಉದ್ದೇಶಕ್ಕಾಗಿ ಪಡಿದಿದ್ದರೋ, ಆ ಉದ್ದೇಶಕ್ಕೆ ವೆಚ್ಚ ಮಾಡಿರುವುದರ ಬಗ್ಗೆ ಮಾಹಿತಿ ನೀಡದೆ ಇದ್ದದ್ದು.

(6) ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದ ಜೀವನ ಭೀಮ ನಗರ ಶಾಖೆ ಹಾಗೂ ಕಾವೇರಿ ಭವನ ಶಾಖೆಗಳನ್ನುಳಿದು ಇತರ ಯಾವುದೇ ಬ್ಯಾಂಕ್‌ಗಳಲ್ಲಿನ ಯಾವುದೇ ಶಾಖೆಗಳಿಂದ ಯಾವುದೇ ಮುಂಗಡವನ್ನು ಪಡೆದಿಲ್ಲವೆಂಬ ಸುಳ್ಳು ಮಾಹಿತಿಯನ್ನು ಸಕ್ಷಮ ಪ್ರಾಧಿಕಾರಿಗೆ ನೀಡುವ ಮೂಲಕ ಆಸ್ತಿ ಮತ್ತು ಋಣ ಪಟ್ಟಿಯಲ್ಲಿ ತಪ್ಪು ಮಾಹಿತಿಯನ್ನು ನೀಡಿದ್ದು..

(7) ಮಡಿಕೇರಿಯಲ್ಲಿ ಪ್ರಧಾನ ಜಿಲ್ಲಾ ನ್ಯಾಯಾಧೀಶರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಕೊಲೆ ಆರೋಪಿಗಳು ಸಲ್ಲಿಸಿದ ಜಾಮೀನು ಅರ್ಜಿಯು ಅವರಿಂದ ಹಾಗೂ ರಾಜ್ಯ ಉಚ್ಚ ನ್ಯಾಯಾಲಯದಿಂದ ಒಮ್ಮೆ ತಿರಸ್ಕೃತಗೊಂಡಿದ್ದರೂ ಸಹ ವೈದ್ಯಕೀಯ ಕಾರಣಗಳ ಮೇಲೆ ಆರೋಪಿಗಳು ಮತ್ತೇ ನಿಮಗೆ ಅರ್ಜಿ ಸಲ್ಲಿಸಿದಾಗ ಜಾಮೀನು ನೀಡಿ ಅದು ಜಾರಿಯಲ್ಲಿದ್ದರೂ ಸಹ ಅವರು ಕಾರವಾರಕ್ಕೆ ವರ್ಗಾವಣೆಗೊಂಡ ನಂತರ ಅನಗತ್ಯವಾಗಿ ಸದರಿ ಜಾಮೀನು ಅವಧಿಯನ್ನು ಮೃತರ ಪತ್ನಿಯ ವಿರೋಧದ ನಡುವೆಯೂ ವಿಸ್ತರಿಸಿದ್ದು.

(8) ಶನಿವಾರ ಸಂತೆಯಲ್ಲಿ ವ್ಯಕ್ತಿಯೊಬ್ಬನ ಮೇಲೆ ಮಾರಣಾಂತಿಕ ಹಲ್ಲೆ ನಡೆಸಿದ ಆರೋಪಿಗಳು ನೀವು ಕಾರವಾರಕ್ಕೆ ವರ್ಗಾವಣೆಗೊಂಡ ನಂತರ ಸಲ್ಲಿಸಿದ ಜಾಮೀನು ಅರ್ಜಿಯನ್ನು ವಿಚಾರಣೆಗೆ ಕೈಗೆತ್ತಿಕೊಂಡು ಆಕ್ಷೇಪಣೆಗಳನ್ನು ಅಂದೇ ಸಲ್ಲಿಸುವಂತೆ ಸರ್ಕಾರಿ ಅಭಿಯೋಜಕರ ಮೇಲೆ ಒತ್ತಡ ತಂದು ಸಂಬಂಧಪಟ್ಟ ಪೊಲೀಸರಿಗೆ ಮಾಹಿತಿ ನೀಡದೆ, ಗಾಯದ ಕುರಿತು ಪ್ರಮಾಣ ಪತ್ರ ಪಡೆಯದೆ, ಸಾಕ್ಷಿಗಳ ಹೇಳಿಕೆ ಕುರಿತ ಕಾಗದ ಪತ್ರಗಳನ್ನು ಪಡೆಯದೆ, ಆರೋಪಿತರ ಕ್ರಿಮಿನಲ್ ಹಿನ್ನೆಲೆಯನ್ನು ತಿಳಿದುಕೊಳ್ಳದೆ ಸದರಿ ಹುದ್ದೆಯಿಂದ ಬಿಡುಗಡೆ ಹೊಂದುವ ಮುನ್ನಾ ದಿನ ಅವರುಗಳಿಗೆ ಜಾಮೀನು ನೀಡಿದ್ದು ಅದಾದ ಕೆಲವೇ ದಿನಗಳಲ್ಲಿ ಬೆಂಗಳೂರಿನ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಕಾವೇರಿ ಭವನ ಹಾಗೂ ಜೀವನ ಭೀಮ ನಗರ ಶಾಖೆಗಳ ಸಾಲದ ಖಾತೆಗೆ ರೂ. 2.88 ಲಕ್ಷ ರೂ.ಗಳನ್ನು ಮತ್ತು ರೂ. 44,347–00 ಗಳನ್ನು ಮಡಿಕೇರಿ ಶಾಖೆಗೆ ಜಮೆ ಮಾಡಿದ

ಹೀಗಿದ್ದು ಆ ಸಾಲಿನ ಆಸ್ತಿ ವಿವರಣೆಯಲ್ಲಿ ಬ್ಯಾಂಕ್ ಖಾತೆಯಲ್ಲಿ ಕೇವಲ 9,821–00 ರೂ. ಜಮೆ ಇರುವುದಾಗಿ ತಪ್ಪು ಮಾಹಿತಿ ನೀಡಿದ್ದು.

(9) ಬಾಲ ಕಾರ್ಮಿಕ (ನಿಷೇಧ ಮತ್ತು ನಿಯಂತ್ರಣ) ಕಾಯಿದೆ 1986 ರ ಸೆಕ್ಷನ್ 3 ಮತ್ತು 14 ರಡಿ ಅಪರಾಧವೆಸಗಿದ ದಂಪತಿಗಳು ವಿರಾಜಪೇಟೆ ಜೆ.ಎಂ.ಎಫ್.ಸಿ. ಅವರ ಮುಂದೆ ಇರುವ ಮೊಕದ್ದಮೆಯನ್ನು ಪ್ರಶ್ನಿಸಿ ಉಚ್ಚ ನ್ಯಾಯಾಲಯದಲ್ಲಿ ಹೂಡಿದ್ದ ರಿಟ್ ಅರ್ಜಿಯನ್ನು ಹಿಂದಕ್ಕೆ ಪಡೆದು ಮತ್ತೇ ಆರೋಪಿಯ ಮುಂದೆ ಮರುಪರಿಶೀಲನಾ ಅರ್ಜಿಯನ್ನು ಸಲ್ಲಿಸಿದಾಗ ಆರೋಪಿಯು ಅವರುಗಳೊಡನೆ ಶಾಮೀಲಾಗಿ ಕ್ರಿಮಿನಲ್ ಮರುಪರಿಶೀಲನಾ ಅರ್ಜಿಯನ್ನು ಸಲ್ಲಿಸಲು ಕಾಲಾವಧಿಯು ಮುಗಿದಿದ್ದರೂ ಸಹ ಅದನ್ನು ವಿಚಾರಣೆಗೆ ಅಂಗೀಕರಿಸಿ ಪಕ್ಷಪಾತ ಹಾಗೂ ಹಣ ಪಡೆದು ಸದರಿ ಮೊಕದ್ದಮೆಯನ್ನು ಅಸಿಂಧುಗೊಳಿಸಿದ್ದು ಹಾಗೂ ಅದಾದ ಸ್ವಲ್ಪ ದಿನಗಳಲ್ಲಿಯೇ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಮಡಿಕೇರಿ ಶಾಖೆಯ ತನ್ನ ಸಾಲದ ಖಾತೆಗೆ ರೂ. 60,483–00 ಗಳನ್ನು ಜಮಾ ಮಾಡಿದ್ದು ಹಾಗೂ ತನ್ನ ಆಸ್ತಿ ಮತ್ತು ಋಣ ಪಟ್ಟಿಯಲ್ಲಿ ಬ್ಯಾಕ್ ಖಾತೆಯಲ್ಲಿ ಕೇವಲ ರೂ. 9,821–00 ಗಳಿರುವುದಾಗಿ ತಪ್ಪು ಘೋಷಣೆ ಮಾಡಿದ್ದು.

ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2) ರಲ್ಲಿ ಓದಲಾದ ದಿನಾಂಕ:30.4.2007 ರ ವಿಚಾರಣಾ ವರದಿಯನ್ನು ಸಲ್ಲಿಸಿ ಆರೋಪಗಳ ಕುರಿತು ಈ ಕೆಳಕಂಡಂತೆ ನಿರ್ಣಯ ನೀಡಿದರು.

1ನೇ ಸಾಕ್ಷಿಯಾದ ಬ್ಯಾಂಕ್‌ನ ಚೀಫ್ ಮ್ಯಾನೇಜರ್ ಅವರು ಆರೋಪಿ ನ್ಯಾಯಾಂಗ ಅಧಿಕಾರಿಯು ದಿನಾಂಕ 6.3.2003 ರಂದು 2.00 ಲಕ್ಷ ರೂ.ಗಳ ಸಾಲವನ್ನು ಕೋರಿ ಅರ್ಜಿ ಸಲ್ಲಿಸಿದ್ದು, ಕೃಷ್ಣಪ್ಪ ಎಂಬ ಆರೋಪಿಯ ಸಹಾಯಕರ ಖಾತರಿಯೊಡನೆ ಸಾಲವನ್ನು ನೀಡಿದ್ದು ಕಂತುಗಳ ಮೂಲಕ ಮರು ಪಾವತಿ ಮಾಡಿ ಸಾಲವನ್ನು ತೀರಿಸಲಾಗಿದೆಯೆಂದು ತಿಳಿಸಿದ್ದಾರೆ. ಈ ರೀತಿ ಸಾಕ್ಷ್ಯ ನೀಡುವಲ್ಲಿ ದಿನಾಂಕ 9.7.2005 ರಂದು ಆರೋಪಿಯು ಒಮ್ಮೆಗೆ ರೂ. 1,78,000 ಗಳನ್ನು ಜಮೆ ಮಾಡಿರುವುದಾಗಿ ತಿಳಿಸಿದ್ದಾರೆ. ಕೆಲವು ತಿಂಗಳು ಆರೋಪಿಯು ಸಾಲವನ್ನು ಮರುಪಾವತಿ ಮಾಡದಿದ್ದಾಗ ನೋಟೀಸ್ ಕೂಡ ನೀಡಿರುವುದಾಗಿ ತಿಳಿಸಿದ್ದಾರೆ, ಆರೋಪಿ ನ್ಯಾಯಾಂಗ ಅಧಿಕಾರಿ ತಮ್ಮ ವಾದದಲ್ಲಿ ತಮ್ಮ ಪತ್ನಿಗೆ ತೀವ್ರ ಸ್ವರೂಪದ ಖಾಯಿಲೆಯಿದ್ದು ಆಗಾಗ್ಗೆ ಆಸ್ಪತ್ರೆಗಳಲ್ಲಿ ಒಳರೋಗಿಯಾಗಿ ದಾಖಲಾಗಿ ಚಿಕಿತ್ಸೆ ಪಡೆಯಬೇಕಾದ ಕಾರಣ ಹಣದ ಅನಿವಾರ್ಯತೆ ಉಂಟಾಗುತ್ತಿದ್ದು, ಈ ಕಾರಣದಿಂದಾಗಿ ತಾವು ಈ ರೀತಿ ಸಾಲವನ್ನು ಪಡೆಯಬೇಕಾಯಿತು ಎಂದು ವಾದಿಸುತ್ತಾರೆ. ಆದರೆ, ಇಷ್ಟೆಲ್ಲಾ ಸಾಲದ ವ್ಯವಹಾರವನ್ನು ತನ್ನ ನಿಯಂತ್ರಣಾ ಪ್ರಾಧಿಕಾರಿಗೆ ತಿಳಿಸುವುದು ಆರೋಪಿಯ ಕರ್ತವ್ಯವಾಗಿತ್ತು, ಅದನ್ನು ಮಾಡದ ಕಾರಣ ನಡತೆ ನಿಯಮಗಳ ನಿಯಮ 21 ರ ಉಲ್ಲಂಘನೆಯಾಗಿದೆ. 1ನೇ ಆರೋಪ ಸಾಬೀತಾಗಿದೆ.

ಶಿಸ್ತು ಪ್ರಾಧಿಕಾರದ ಪರ ಸಾಕ್ಷಿ ನುಡಿದ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಮಡಿಕೇರಿ ಶಾಖೆಯ ಮ್ಯಾನೇಜರ್ ಅವರು ಆರೋಪಿಯು ತಮ್ಮಲ್ಲಿ ಉಳಿತಾಯ ಖಾತೆಯನ್ನು ಹೊಂದಿದ್ದು ಈ ಆಧಾರದ ಮೇಲೆ ಅವರಿಗೆ ವಾಹನ ಸಾಲ ಮತ್ತು ವೈಯಕ್ತಿಕ ಸಾಲವನ್ನು ಮಂಜೂರು ಮಾಡಲಾಗಿತ್ತು. ಅದನ್ನು ಅವರು ಮರುಪಾವತಿ ಮಾಡಿದ್ದಾರೆ. ಅಷ್ಟೇ ಅಲ್ಲದೆ ವಾಹನ ಸಾಲದ ಮರುಪಾವತಿಯಲ್ಲಿ ಉಳಿದಿದ್ದ ರೂ. 31,870–00 ಗಳನ್ನು ಉಳಿತಾಯ ಖಾತೆಗೆ ವರ್ಗ ಮಾಡಿರುವುದಾಗಿ ನುಡಿದಿದ್ದಾರೆ. ಆರೋಪಿಯು ತಮ್ಮ ವಾದದಲ್ಲಿ ತಮ್ಮ ಉಳಿತಾಯ ಹಾಗೂ ನ್ಯಾಯಾಂಗ ಅಧಿಕಾರಿಗಳ ಸಹಕಾರ ಸಂಘದಿಂದ ಸಾಲ ಪಡೆದು ಕಾರು ಖರೀದಿಸಲು ಅನುಮತಿ ಪಡೆದಿದ್ದರೂ ಸಹ ಸಂಘವು ಕೇವಲ 3.00 ಲಕ್ಷ ರೂ.ಗಳನ್ನು ನೀಡುವುದಾಗಿ ತಿಳಿಸಿತ್ತು. ಆದರೆ ಕಾರಿನ ಬೆಲೆಯು ರೂ. 5,51,488–00 ಆಗಿತ್ತು, ಅದಕ್ಕೆ ಈಗಾಗಲೇ ತಾನು ಮೈಸೂರು ಮಾಂಡವಿ ಮೋಟಾರ್ಸ್‌ನಲ್ಲಿ ಬುಕ್ಕಿಂಗ್ ಮಾಡಿದ್ದು, ಅದನ್ನು ಖರೀದಿಸಲೇಬೇಕೆಂಬ ಕಾರಣ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಮಡಿಕೇರಿ ಶಾಖೆಯು ವಾಹನ ಸಾಲವನ್ನು ಕೊಡಲು ಒಪ್ಪಿದ್ದ ಕಾರಣ ಅನಿವಾರ್ಯವಾಗಿ ಅದನ್ನು ಪಡೆಯಬೇಕಾಯಿತೆಂದು ತಿಳಿಸಿದ್ದಾರೆ. ಹಾಗಿದ್ದ ಪಕ್ಷದಲ್ಲಿ ಆರೋಪಿಯು ಈ ವಿಷಯವನ್ನು ತನ್ನ ನಿಯಂತ್ರಣಾಧಿಕಾರಿಗೆ ತಿಳಿಸಿ ಪರಿಷ್ಕೃತ ಅನುಮತಿಯನ್ನು ಪಡೆಯಬೇಕಾಗಿತ್ತು. ಅದನ್ನು ಮಾಡಿರುವುದಿಲ್ಲ, ಅದ್ದರಿಂದ 2 ನೇ ಆರೋಪ ಸಾಬೀತಾಗಿದೆ.

ವಿಚಾರಣೆ ಸಂದರ್ಭದಲ್ಲಿ ಹಾಜರುಪಡಿಸಲಾದ ಕಾಗದ ಪತ್ರಗಳಂತೆ ಆರೋಪಿ ಜಿಲ್ಲಾ ನ್ಯಾಯಾಧೀಶರು 10.50 ಲಕ್ಷ ರೂಪಾಯಿಗಳ ಸಾಲವನ್ನು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಕಾರ್ಪೋರೇಷನ್ ಬ್ಯಾಂಕ್ ಹಾಗೂ ಕೆನರಾ ಬ್ಯಾಂಕಿನ ಮಡಿಕೇರಿ ಶಾಖೆಗಳಿಂದ ಪಡೆದಿರುವುದು ಮೂಡಿಬಂದಿದೆ, ಶಿಸ್ತು ಪ್ರಾಧಿಕಾರದ ಪರ ಸಾಕ್ಷ್ಯ ನೀಡಿದ ಅಧಿಕಾರಿಯ ಹೇಳಿಕೆಯಂತೆ ಅವರು ಈ ಎಲ್ಲಾ ಸಾಲದ ವ್ಯವಹಾರವನ್ನು ಉಚ್ಚ ನ್ಯಾಯಾಲಯಕ್ಕೆ ತಿಳಿಸಿಲ್ಲ, ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದ ಕಾವೇರಿ ಭವನ ಹಾಗೂ ಜೀವನ ಭೀಮ ನಗರ ಶಾಖೆಗಳಲ್ಲಿನ ಸಾಲದ ವಿವರವನ್ನು ಮಾತ್ರ ಸಲ್ಲಿಸಿದ್ದಾರೆ. ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಮಡಿಕೇರಿ ಶಾಖೆಯಲ್ಲಿ ಜಮಾ ಮಾಡಲಾದ ಮೊತ್ತಕ್ಕೂ ಹಾಗೂ ಅಧಿಕಾರಿಯು ಆಸ್ತಿ ಮತ್ತು ಹೊಣೆಗಾರಿಕೆ ಪಟ್ಟಿಯಲ್ಲಿ ನೀಡಿರುವ ಮೊತ್ತಕ್ಕೂ ತಾಳೆಯಾಗುತ್ತಿಲ್ಲ. ವಿಚಾರಣೆ ಸಂದರ್ಭದಲ್ಲಿ ಹಾಜರುಪಡಿಸಿದ ಕಾಗದ ಪತ್ರಗಳಿಂದಾಗಿ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಮಡಿಕೇರಿ ಶಾಖೆಯಿಂದ 4 ಸಾಲಗಳನ್ನು, ಕಾರ್ಪೋರೇಷನ್ ಬ್ಯಾಂಕ್ ಹಾಗೂ ಕೆನರಾ ಬ್ಯಾಂಕಿನ ಮಡಿಕೇರಿ ಶಾಖೆಗಳಿಂದ ತಲಾ 1 ಸಾಲವನ್ನು ಆರೋಪಿಯು ಪಡೆದಿರುವುದು ಕಂಡುಬರುತ್ತದೆ.

ಇವುಗಳಿಗೆ ಆರೋಪಿಯು ಪೂರ್ವಾನುಮತಿ ಪಡೆದಿರುವುದಿಲ್ಲ. ಅದು ನಡತೆ ನಿಯಮಗಳ ನಿಯಮ 21 ರ ಉಲ್ಲಂಘನೆ ಆಗಿದ್ದು 3 ನೇ ಆರೋಪ ಸಾಬೀತಾಗಿರುತ್ತದೆ.

ಆರೋಪಿಗೆ 1.00 ಲಕ್ಷ ರೂ.ಗಳ ಸಾಲವನ್ನು ನೀಡಿದ್ದು, ಆರೋಪಿಯು ಅದನ್ನು ದಿನಾಂಕ: 11.7.2005 ರಂದು ಮರುಪಾವತಿ ಮಾಡಿದ್ದಾರೆಂದು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಕಾವೇರಿ ಭವನ ಶಾಖೆಯ ಉಪ ವ್ಯವಸ್ಥಾಪಕರು ನೀಡಿದ ಸಾಕ್ಷ್ಯದಲ್ಲಿ ತಿಳಿಸಿದ್ದಾರೆ. ಆರೋಪಿಯು ತನ್ನ ಸಾಕ್ಷ್ಯದಲ್ಲಿ ತಾನು 30.5.2003 ರಿಂದ 20.5.2005 ರ ವರೆಗಿನ ಅವಧಿಯಲ್ಲಿ ವಿವಿಧ ಮೂಲಗಳಿಂದ ತಾನು ಪಡೆದ ಒಟ್ಟು 5,16,553–00 ರೂ.ಗಳನ್ನು ಖಾತೆಗೆ ಜಮಾ ಮಾಡಿರುವುದಾಗಿ ತಿಳಿಸಿದ್ದಾರೆ. ಸಾಲದ ಕಂತುಗಳನ್ನು ನಗದು ರೂಪದಲ್ಲಿ ಪಾವತಿ ಮಾಡಿದ್ದು, ಈ ಮೊತ್ತವನ್ನು ಗಳಿಸಿದ ಕುರಿತು ಉಚ್ಚ ನ್ಯಾಯಾಲಯಕ್ಕೆ ತಿಳಿಸಿಲ್ಲವೆಂದು ಪಾಟೀ ಸವಾಲಿಗೆ ಉತ್ತರಿಸುವಾಗ ಆರೋಪಿಯು ತಿಳಿಸಿದ್ದಾರೆ. ಇದು ನಡತೆ ನಿಯಮ 23 ರ ಉಲ್ಲಂಘನೆಯಾಗಿದೆ. ಆದ್ದರಿಂದ 4ನೇ ಆರೋಪ ಸಾಬೀತಾಗಿದೆ.

ಪೂಜೆಗಾಗಿ 50,000/– ರೂ.ಗಳನ್ನು (10.5.2004 ರಂದು) ಮಗನ ಹುಟ್ಟು ಹಬ್ಬ ಆಚರಣೆಗಾಗಿ ರೂ. 50,000/– (28.9.2004 ರಂದು) ಹಾಗೂ ರೂ. 25,000/– ಗಳನ್ನು (9.3.2005 ರಂದು) ತನ್ನ ಸಾಮಾನ್ಯ ಭವಿಷ್ಯ ನಿಧಿಯಿಂದ ಹಿಂದಕ್ಕೆ ಪಡೆದಿರುವುದಾಗಿ ಹೇಳಿಕೆ ನೀಡಿದ್ದಾರೆ. ಈ ರೀತಿ ಭಾಗಶಃ ಹಿಂಪಡೆದಿದ್ದಕ್ಕೆ ಬಳಕೆ ಪ್ರಮಾಣ ಪತ್ರ ನೀಡಿಲ್ಲವೆಂದು ಶಿಸ್ತು ಪ್ರಾಧಿಕಾರ ಪರ ಸಾಕ್ಷಿಯೂ ನುಡಿದಿದ್ದಾರೆ. ಹುಟ್ಟು ಹಬ್ಬ ಆಚರಣೆಗೆ ಹಾಗೂ ಪೂಜೆಗೆ ಇಷ್ಟೊಂದು ಹಣ ವೆಚ್ಚವಾಗುತ್ತದೆಯೆಂಬ ಅಂಶವೇ ಆಶ್ಚರ್ಯಕರವಾಗಿದೆ. ಅದು ಹೇಗೆ ಇದ್ದರು ಸಹ ಈ ವಿಷಯವನ್ನು ಆರೋಪಿಯು ಉಚ್ಚ ನ್ಯಾಯಾಲಯಕ್ಕೆ ತಿಳಿಸಿಲ್ಲ, 5 ನೇ ಆರೋಪ ಸಾಬೀತಾಗಿದೆ.

ಆರೋಪಿ ನ್ಯಾಯಾಂಗ ಅಧಿಕಾರಿಯು ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ, ಕಾವೇರಿ ಭವನ ಶಾಖೆ ಮತ್ತು ಜೀವನ ಭೀಮ ನಗರ ಶಾಖೆಗಳಲ್ಲಿ ಬಿಟ್ಟರೇ ಬೇರೆ ಎಲ್ಲೂ ತಾನು ಸಾಲವನ್ನು ಪಡೆದಿಲ್ಲವೆಂದು ಉಚ್ಚ ನ್ಯಾಯಾಲಯಕ್ಕೆ ಮಾಹಿತಿ ನೀಡಿದ್ದಾರೆ, ಆದರೆ ನಾಲ್ಕನೇ ಆರೋಪದಲ್ಲಿ ಚರ್ಚಿಸಿರುವಂತೆ ಬ್ಯಾಂಕ್ ಅಧಿಕಾರಿಗಳು ತಮ್ಮ ಸಾಕ್ಷ್ಯದಲ್ಲಿ ಆರೋಪಿಯು ಮಾಡಿರುವ ಸಾಲದ ವ್ಯವಹಾರದ ವಿವರಗಳನ್ನು ನೀಡಿದ್ದಾರೆ. ಅವುಗಳನ್ನು ಆರೋಪಿಯು ಒಪ್ಪಿಕೊಂಡಿದ್ದಾರೆ. ಹಾಗೂ ಬೆಂಗಳೂರಿನಲ್ಲಿ ತಾನು ಪಡೆದಿರುವ ಸಾಲಕ್ಕೆ ಮಾತ್ರ ಮಾಹಿತಿಯನ್ನು ಸೀಮಿತಗೊಳಿಸಿರುವುದಾಗಿ ತಿಳಿಸಿದ್ದಾರೆ. ಆದರೆ ತಾನು ಪಡೆದ ಎಲ್ಲಾ ಸಾಲಗಳ ವಿವರವನ್ನು ಆರೋಪಿಯು ನೀಡಬೇಕಿತ್ತು, ಸದರಿ ಸಾಲಗಳನ್ನು ಮರುಪಾವತಿಸಲು ತನಗೆ ಇದ್ದ ಆದಾಯದ ಮೂಲ ತಿಳಿಸಲು 2 ದಾಖಲೆಗಳನ್ನು ಹಾಜರು ಪಡಿಸಿದ್ದಾರೆ. ಅದರಲ್ಲಿ 1 ಸೂರ್ಯಕಾಂತಿ ಬೀಜವನ್ನು ರೂ. 1,72,715/– ಗಳಿಗೆ ಮತ್ತೊಂದು ನೆಲಗಡಲೆಯನ್ನು ರೂ. 1,67,900/–ಗಳಿಗೆ ಮಾರಾಟ ಮಾಡಿದ ರಸೀದಿ ಅವುಗಳನ್ನು ಆರೋಪಿಯ ಸಹೋದರನ ಹೆಸರಿಗೆ ನೀಡಲಾಗಿದೆ. ಈ ರಸೀದಿಗಳ ಸಾಛಾತನ ಕುರಿತು ವಾಣಿಜ್ಯ ತೆರಿಗೆ ಇಲಾಖೆಯ ಬೆಳಗಾವಿ ವಿಭಾಗೀಯ ಜಂಟೀ ಆಯುಕ್ತರು ಬರೆದ ಪತ್ರ ಹಾಗೂ ಗೋಕಾಕದ ವ್ಯಾಟ್ ಉಪ ಅಧಿಕಾರಿ ನೀಡಿದ ಪತ್ರದಂತೆ ಯದವಾಡದ ಮೆಸರ್ಸ್ ಮಂಜುನಾಥ ಆಯಿಲ್ ಮಿಲ್ 2003–04 ನೇ ಸಾಲಿನಿಂದಲೇ ತನ್ನ ವಹಿವಾಟನ್ನು ಸ್ಥಗಿತಗೊಳಿಸಿದೆ, ಅದ್ದರಿಂದ ಆರೋಪಿಯು ತನ್ನ ಸ್ವಂತ ಗ್ರಾಮದಲ್ಲಿ ಕೆಲವು ಆಸ್ತಿ, ಚಿನ್ನಾಭರಣ ಇತ್ಯಾದಿಗಳನ್ನು ಹೊಂದಿದ್ದಾರೆ, ಆದರೆ, ಅವುಗಳನ್ನು ನಿಯಂತ್ರಣ ಪ್ರಾಧಿಕಾರಿಗೆ ತಿಳಿಸಬೇಕೆಂಬ ಕರ್ತವ್ಯವನ್ನು ಪಾಲಿಸಲು ವಿಫಲರಾಗಿದ್ದಾರೆ. ಆದ್ದರಿಂದ 6 ನೇ ಆರೋಪ ಸಾಬೀತಾಗಿದೆ.

ಗನ್ ಮತ್ತು ರೈಫಲ್‌ಗಳಿಂದ ಗುಂಡು ಹಾರಿಸಿ ವ್ಯಕ್ತಿಯೊಬ್ಬನನ್ನು ಕೊಂದ ಆರೋಪ ಹೊತ್ತ ವ್ಯಕ್ತಿಗಳು ಆರೋಪಿಯು ನ್ಯಾಯಾಲಯದಲ್ಲಿ ಜಾಮೀನು ಅರ್ಜಿ ಹಾಗೂ ಉಚ್ಚನ್ಯಾಯಾಲಯದಲ್ಲಿ ಕ್ರಿಮಿನಲ್ ಅರ್ಜಿ ಸಲ್ಲಿಸಿದ್ದು 2 ಸಹ ತಿರಸ್ಕೃತಗೊಂಡಿದೆ, ಅನಂತರ ಆರೋಪಿಯು ವೈದ್ಯಕೀಯ ಕಾರಣಗಳ ಮೇಲೆ ಜಾಮೀನು ಅರ್ಜಿ ಸಲ್ಲಿಸಲಾಗಿ ಆರೋಪಿಯು ಅದನ್ನು ಮಂಜೂರು ಮಾಡಿದ್ದಾರೆ. ಆರೋಪಿಯನ್ನು ಮಡಿಕೇರಿಯಿಂದ ಕಾರವಾರಕ್ಕೆ ವರ್ಗಾಯಿಸಿ ಕಾರವಾರಕ್ಕೆ ತೆರಳುವ ಮುನ್ನ ದಿನ ಸದರಿ ಜಾಮೀನಿನ ಅವಧಿಯನ್ನು ವಿಸ್ತರಿಸಿದ್ದಾರೆ, ಸದರಿ ವಿಸ್ತರಣೆಯನ್ನು ಬಾಹ್ಯ ಸನ್ನಿವೇಶಗಳಿಂದ ಹಣಕಾಸಿನ ಲಾಭಕ್ಕಾಗಿ ಮಾಡಲಾಗಿದೆ ಎಂಬುದು ಆರೋಪ, ಈ ಬಗ್ಗೆ ಸಾಕ್ಷ್ಯ ನುಡಿದ ಸಾಕ್ಷಿದಾರರು ಆರೋಪಿಯು ವರ್ಗಾವಣೆಗೊಂಡಿದ್ದು ಮಡಿಕೇರಿಯನ್ನು ಬಿಡುವ ಮುನ್ನ ಅರ್ಜಿಯನ್ನು ವಿಲೇವಾರಿ ಮಾಡುವ ಆತುರದಲ್ಲಿದ್ದರು ಎಂದು ತಿಳಿಸುತ್ತಾರಾದರೂ ಪ್ರಕರಣವು ದಿನಾಂಕ: 28.3.2005 ರಿಂದಲೂ ವಿಚಾರಣೆಯಲ್ಲಿತ್ತು, ಪ್ರತಿದಿನ ವಿಚಾರಣೆ ನಡೆಯುತ್ತಿತ್ತು ಎಂಬುದನ್ನು ಪಾಟೀ ಸವಾಲಿಗೆ ಉತ್ತರಿಸುವಾಗ ಒಪ್ಪಿಕೊಳ್ಳುತ್ತಾರೆ. ಜಾಮೀನು ನೀಡಿದಾಗ ಆರೋಪಿಯು ವರ್ಗಾ ಆಗಿರಲಿಲ್ಲವೆಂದು ಜಾಮೀನಿಗೆ ತಾವು ವಿರೋಧವನ್ನು ಸಲ್ಲಿಸಲಿಲ್ಲ ಹಾಗೂ ಜಾಮೀನನ್ನು ಮೇಲಿನ ನ್ಯಾಯಾಲಯದಲ್ಲಿ ಪ್ರಶ್ನಿಸಲಿಲ್ಲ ಎನ್ನುತ್ತಾರೆ. ಆರೋಪಿಯು ತನ್ನ ಸಾಕ್ಷ್ಯದಲ್ಲಿ ಜಾಮೀನನ್ನು ಆರು ತಿಂಗಳಿಗೆ ವಿಸ್ತರಿಸಲು ಕೋರಲಾಗಿತ್ತು, ಆದರೆ ತಾನು ವೈದ್ಯಕೀಯ ಕಾರಣಕ್ಕಾಗಿ 4 ತಿಂಗಳಿಗೆ ಮಾತ್ರ ವಿಸ್ತರಿಸಿದಾಗಿ ತಿಳಿಸಿದ್ದಾರೆ. ಮಡಿಕೇರಿಯನ್ನು ಬಿಡುವ ಒಂದು ದಿನದ ಮುಂಚೆ ಪ್ರಶ್ನಿತ ಅದೇಶ ಮಾಡಿದ್ದಾಗಿ ಹಾಗೂ ಅನಂತರ ತಮ್ಮ ಬ್ಯಾಂಕ್ ಖಾತೆ ಮೊತ್ತ ಜಮಾ ಮಾಡಿದ್ದಾರೆ ಎಂಬ ಕಾರಣಕ್ಕಾಗಿ ಅದನ್ನು ಸಂಶಯಿಸಲು ಸಾಧ್ಯವಿಲ್ಲ.

ಹಾಗೆಯೇ ಐವರು ತೀವ್ರವಾಗಿ ಗಾಯಗೊಂಡ ಪ್ರಕರಣದಲ್ಲಿ ಹೇಳಿಕೆ ನೀಡಿದ ಸಾಕ್ಷಿಯೂ ಅಪರಾಧಿಗಳ ವಿರುದ್ಧ ತನ್ನ ಮಗ ಪೊಲೀಸರಿಗೆ ಫಿರ್ಯಾದು ನೀಡಿದ್ದಾಗಿ ತಿಳಿಸಿದ್ದಾರೆ. ಆರೋಪಿಗಳು ಒಂದು ವಾರದ ಒಳಗಾಗಿಯೇ ಜಾಮೀನಿನ ಮೇಲೆ ಹೊರ ಬಂದಿದ್ದಾರೆ. ಆರೋಪಿಯಿಂದ ಜಾಮೀನು ನೀಡಿದ್ದನ್ನು ಪ್ರಶ್ನಿಸಿ ಮೇಲ್ಮನವಿ ಸಲ್ಲಿಸಲಿಲ್ಲ, ಪೊಲೀಸ್ ಸಬ್ ಇನ್ಸ್‌ಪೆಕ್ಟರ್ ಸಾಕ್ಷ್ಯ ನೀಡಿ, ಪೊಲೀಸ್ ಡೈರಿಯನ್ನು ನ್ಯಾಯಾಲಯವಾಗಲೀ ಸಾರ್ವಜನಿಕ ಅಭಿಯೋಜರಾಗಲೀ ಪಡೆಯಲಿಲ್ಲ ಎಂದು ತಿಳಿಸುತ್ತಾರೆ.

ಪಬ್ಲಿಕ್ ಪ್ರಾಸಿಕ್ಯೂಟರ್ ತಮ್ಮ ಸಾಕ್ಷ್ಯದಲ್ಲಿ ಆಕ್ಷೇಪಣೆ ಸಲ್ಲಿಸಲು ಸಮಯಾವಕಾಶವನ್ನು ಕೇಳಿದಾಗ್ಯೂ ಸಹ ನಿರೀಕ್ಷಣಾ ಜಾಮೀನಿಗೆ ಅರ್ಜಿ ಸಲ್ಲಿಸಿದ ಮಹಿಳಾ ವಕೀಲರು ಆರೋಪಿಯ ಮನೆಯಲ್ಲಿರುವ ಮಹಿಳೆಯೊಬ್ಬಳು ಸೇರಿದಂತೆ ಮನೆಯ ಎಲ್ಲರನ್ನೂ ಆರೋಪಿಗಳನ್ನಾಗಿ ಮಾಡಿ ಪ್ರತಿ ದಿನವು ಅವರ ಮನೆಗೆ ಎಡತಾಕುತ್ತದ್ದ ಕಾರಣ ಜಾಮೀನನ್ನು ಅಂದೇ ಪಡೆವ ಅನಿವಾರ್ಯವಿತ್ತು, ನ್ಯಾಯಾಧೀಶರು ಅಂದು ಸಂಜೆವರೆವಿಗೂ ಕಾಲಾವಾಕಾಶ ನೀಡಿದ್ದು, ಅಂದೇ ಆಕ್ಷೇಪಣೆ ಸಲ್ಲಿಸಲಾಯಿತು. ಅವೆಲ್ಲವನ್ನು ಪರಿಗಣಿಸಿದ ನಂತರ ಜಾಮೀನು ಮಂಜೂರು ಮಾಡಿದ್ದಾರೆ ಎಂದು ತಿಳಿಸಿದ್ದಾರೆ. ಆದ್ದರಿಂದ ಆರೋಪಿಯ ಕ್ರಮವನ್ನು ಸಂಶಯಿಸಲು ಕಾರಣಗಳಿಲ್ಲ.

ಹಾಗೆಯೇ ಬಾಲ ಕಾರ್ಮಿಕ (ನಿಷೇದ ಮತ್ತು ನಿಯಂತ್ರಣ)ಕಾಯಿದೆ 1986 ರ ಅಡಿಯಲ್ಲಿ ಅಪರಾಧವೆಸಗುವ ವ್ಯಕ್ತಿಗಳು ಮೊಕದ್ದಮೆ ದಾಖಲಿಸಿರುವುದನ್ನು ಪ್ರಶ್ನಿಸಿ ಸಲ್ಲಿಸಿದ್ದ ಕ್ರಿಮಿನಲ್ ಅರ್ಜಿಯನ್ನು ಹಿಂದಕ್ಕೆ ಪಡೆದ ನಂತರವೇ ಅಪರಾಧಿಗಳು ಮರುಪರಿಶೀಲನಾ ಅರ್ಜಿಯನ್ನು ಸಲ್ಲಿಸಿದ್ದಾರೆ ಎಂದು ಶಿಸ್ತು ಪ್ರಾಧಿಕಾರದ ಪರ ಸಾಕ್ಷಿಯು ತಿಳಿಸಿ ಸದರಿ ಅರ್ಜಿ ಮೇಲೆ ಆರೋಪಿಯು ಹೊರಡಿಸಿರುವ ಆದೇಶವನ್ನು ಪ್ರಶ್ನಿಸಿ ಮೇಲ್ಮನವಿ ಸಲ್ಲಿಸಿರುವ ಬಗ್ಗೆ ತಮಗೆ ತಿಳಿದಿಲ್ಲವೆಂದು ಹೇಳುತ್ತಾರೆ. ಈ ಪ್ರಕರಣದ ನಡೆವಳಿಗಳು ಶುದ್ಧ ನ್ಯಾಯಾಂಗ ನಡೆವಳಿಗಳಾಗಿದ್ದು ಕ್ರಿಮಿನಲ್ ಮೊಕದ್ದಮೆಯನ್ನು ಅಸಿಂಧುಗೊಳಿಸಿ ಆರೋಪಿಯು ಹೊರಡಿಸಿದ ಆದೇಶದಲ್ಲಿ ಕಾನೂನಿಗೆ ವ್ಯತಿರಿಕ್ತವಾದ ಅಂಶಗಳು ಇದ್ದಲ್ಲಿ ಸದರಿ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಬಹುದಾಗಿತ್ತು. ಆದೇಶ ಹೊರಡಿಸಿದ ನಂತರ ಆರೋಪಿಯ ಖಾತೆಗೆ ಹಣ ಜಮಾ ಮಾಡಿದೆ ಎಂಬುದು ಪ್ರಾಸಿಕ್ಯೂಷನ್ ವಾದ ಆಗಿದ್ದರೂ ಸಹ ಆರೋಪಿಯು ಹಣ ಪಡೆದು ಆದೇಶ ಮಾಡಿದ್ದಾರೆಂಬುದನ್ನು ಸಾಬೀತು ಪಡಿಸಲು ಸಾಕ್ಷ್ಯಾದಾರಗಳೂ ಹಾಜರುಪಡಿಸಿಲ್ಲ. ಆದ್ದರಿಂದ 7 ರಿಂದ 9 ರವರೆಗಿನ ಆರೋಪಗಳು ಸಾಬೀತಾಗಿಲ್ಲ.

ವಿಚಾರಣಾ ವರದಿಯು ಪ್ರತಿಯನ್ನು ಲಗತ್ತಿಸಿ ಶ್ರೀ ಕೆ.ಬಿ.ಲೆಂಕಣ್ಣವರ್ ಅವರಿಗೆ ಮೇಲೆ (3) ರಲ್ಲಿ ಓದಲಾದ ದಿನಾಂಕ 11–10–2007 ರ ಎರಡನೇ ನೋಟೀಸ್ ನೀಡಿ ವಿಚಾರಣಾ ವರದಿಯ ಬಗ್ಗೆ ಹೇಳುವುದು ಏನಾದರೂ ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ಶ್ರೀ ಕೆ.ಬಿ.ಲೆಂಕಣ್ಣವರ್ ಅವರು ಮೇಲೆ (4) ರಲ್ಲಿ ಓದಲಾದ ದಿನಾಂಕ: 26.10.2007 ರ ಉತ್ತರ ಸಲ್ಲಿಸಿ 1 ರಿಂದ 6 ರವರೆಗಿನ ಆರೋಪಗಳು ಸಾಬೀತಾಗಿವೆ ಎಂಬ ವಿಚಾರಣಾಧಿಕಾರಿಗಳ ನಿರ್ಣಯವನ್ನು ನಿರಾಕರಿಸಿದ್ದಾರೆ ಅವರ ಉತ್ತರವನ್ನು ಪರಿಶೀಲಿಸಲಾಗಿ ಅವರು ಈ ಹಿಂದೆ ವಿಚಾರಣೆ ಸಮಯದಲ್ಲಿ ಮಂಡಿಸಿದ ಅಂಶಗಳೇ ಆಗಿವೆ. ಅವುಗಳಲ್ಲಿ ಪರಿಶೀಲನಾರ್ಹ ಅಂಶಗಳು ಯಾವುವೂ ಇರುವುದಿಲ್ಲ. ಆದ್ದರಿಂದ 1 ರಿಂದ 6 ರ ವರೆಗಿನ ಆರೋಪಗಳು ಸಾಬೀತಾಗಿವೆ ಎಂಬ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 80 ಸೇಲುನ್ಯಾ 2008, ಬೆಂಗಳೂರು, ದಿನಾಂಕ: 28ನೇ ಏಪ್ರಿಲ್ 2008**

ಘನವೆತ್ತ ಕರ್ನಾಟಕ ರಾಜ್ಯಪಾಲರು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957 ರ ನಿಯಮ 9 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಕೆ.ಬಿ.ಲೆಂಕಣ್ಣವರ್, ಜಿಲ್ಲಾ ನ್ಯಾಯಾಧೀಶರು ಅವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಅದೇ ನಿಯಮಾವಳಿಯ ನಿಯಮ 8 (viii) ರ ಅನ್ವಯ ಸೇವೆಯಿಂದ ವಜಾಗೊಳಿಸಿದ್ದಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಾ. ಎಂ.ಟಿ. ರೇಜು**

ಪಿ.ಆರ್. 1198

ಸರ್ಕಾರದ ಉಪ ಕಾರ್ಯದರ್ಶಿ(ಸೇವೆಗಳು),

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ.

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು ರಾಶಿಂಗ್ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿ ಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 05/12/2009ರಂದು ಕೊನೆಗೊಂಡ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/2008–09/62.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು ರಾಶಿಂಗ್ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಹಾರಧನ ಪಾವತಿಸಲು ರೂ.36,25,592–00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕಾಗಿ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 03/101996
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 22/10/1999

ಭೂಸ್ವಾಧೀನಕ್ಕೊಳ್ಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆಯ ಕಲಂ 18(1)ರಡಿ ಹುಕ್ಕೇರಿ ಸಿವಿಲ್ ನ್ಯಾಯಾಲಯ (ಹಿರಿಯ ಶ್ರೇಣಿ)ದಲ್ಲಿ ಭೂಸ್ವಾಧೀನ ಪ್ರಕರಣವನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ತೀರ್ಪುಗಳ ವಿರುದ್ಧ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಸರ್ಕಾರದ ಪರ ದಾಖಲಿಸಿದ್ದ ಎಂಎಫ್ಎ ಪ್ರಕರಣಗಳಲ್ಲಿ ಮಧ್ಯಂತರ ಆದೇಶದಂತೆ ಸಿವಿಲ್ ನ್ಯಾಯಾಲಯದ ತೀರ್ಪಿನಂತೆ ಲೆಕ್ಕ ಹಾಕಿದ ಶೇ.50ರಷ್ಟು ಮೊತ್ತವನ್ನು ನ್ಯಾಯಾಲಯದಲ್ಲಿ ಠೇವಣಿ ಮಾಡಲಾಗಿದೆ. ಎಂಎಫ್ಎ ಪ್ರಕರಣಗಳಲ್ಲಿ ಅಂತಿಮ ತೀರ್ಪು ಆಗಿದ್ದು, ಮೇಲ್ಮನವಿಗಳು ವಜಾಗೊಂಡಿವೆ. ಈ ತೀರ್ಪುಗಳ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಾನೂನು ಇಲಾಖೆಯು ಈ ಕೆಳಕಂಡ ಪತ್ರಗಳಲ್ಲಿ ಅಭಿಪ್ರಾಯ ನೀಡಿದೆ.

| ಎಂಎಫ್ಎ | ಪತ್ರ ಸಂಖ್ಯೆ/ದಿನಾಂಕ |
|---|---|
| 6266/04 | ಲಾ 1476 ಎಲ್‌ಬಿಎಸ್ 2007, ದಿನಾಂಕ 06/09/07 |
| 6265/04 | ಲಾ 1474 ಎಲ್‌ಬಿಎಸ್ 2007, ದಿನಾಂಕ 27/08/07 |
| 6255/04 | ಲಾ 1472 ಎಲ್‌ಬಿಎಸ್ 2007, ದಿನಾಂಕ 06/09/07 |
| 6268/04 | ಲಾ 1473 ಎಲ್‌ಬಿಎಸ್ 2007, ದಿನಾಂಕ 06/09/07 |
| 6267/04 | ಲಾ 1475 ಎಲ್‌ಬಿಎಸ್ 2007, ದಿನಾಂಕ 06/09/07 |

ಸಿವಿಲ್ ನ್ಯಾಯಾಲಯ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ:

| ಕ್ರ. ಸಂ. | ಎಲ್ಎಸಿ ಸಂಖ್ಯೆ | ಎಂಎಫ್ಎ ಸಂಖ್ಯೆ | ಸ.ನಂ. | ವಿಸ್ತೀರ್ಣ ಎ–ಗುಂ. | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 1 | 165/03 | 6267/04 | 299 | 1–10 | 368454 |
| 2 | 04/03 | 6268/04 | 278 | 2–09 | 655849 |
| 3 | 10/03 | 6255/04 | 296/297 | 4–12 | 1267484 |
| 4 | 07/03 | 6265/04 | 290<br>292<br>294 | 0–15<br>1–25<br>0–22 | 751648 |
| 5 | 06/03 | 6266/04 | 280 | 1–39 | 582157 |
| | **ಒಟ್ಟು** | | | | **3625592** |

- ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರೀಶಿಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 80 ಭೂಸ್ವಾಪ್ರ 2008, ಬೆಂಗಳೂರು, ದಿನಾಂಕ: 25ನೇ ಏಪ್ರಿಲ್ 2009.**

ಬೆಳಗಾಂ ಜಿಲ್ಲೆ, ಹುಕ್ಕೇರಿ ತಾಲ್ಲೂಕು ರಾಶಿಂಗ್ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ರಾಶಿಂಗ್ ಗ್ರಾಮಕ್ಕೆ ಸೇರಿದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.36,25,592–00ಳನ್ನು (ಮೂವತ್ತಾರು ಲಕ್ಷದ ಇಪ್ಪತ್ತೈದು ಸಾವಿರದ ಐನೂರ ತೊಂಭತ್ತೆರೆಡು ರೂ.ಗಳು ಮಾತ್ರ)

ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10 ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ:ಎಫ್‌ಡಿ 01 ಟಿಎಫ್‌ಪಿ 2008, ದಿನಾಂಕ 16/05/08ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಪಿ.ಆರ್. 1199 ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ:** ಬೆಳಗಾಂ ಜಿಲ್ಲೆ, ಸೌದತ್ತಿ ತಾಲ್ಲೂಕು ಬೂದಿಗೊಪ್ಪ ಮತ್ತು ಯರಝುರವಿ ಗ್ರಾಮಗಳ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 08/12/2008ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಬಿಜಾ/ಭೂಸ್ವಾಪ್ರ/ 2008–09/6532.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಬೆಳಗಾಂ ಜಿಲ್ಲೆ, ಸೌದತ್ತಿ ತಾಲ್ಲೂಕು ಬೂದಿಗೊಪ್ಪ ಮತ್ತು ಯರಝುರವಿ ಗ್ರಾಮಗಳ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸೌದತ್ತಿ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 05/07/2001.
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 24/02/2003
- ಸ್ವಾಧೀನಕ್ಕೊಳಪಟ್ಟ ಜಮೀನುಗಳ ಕಬ್ಜೆ ಪಡೆದ ದಿನಾಂಕ 29/02/1968.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಸೌದತ್ತಿ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಪ್ರತಿ ಎಕರೆಗೆ ಪರಿಹಾರ ಧನವನ್ನು ರೂ.96,000/–ಗಳಿಗೆ ನಿಗದಿಪಡಿಸಿ, ಪರಿಹಾರ ಧನದ ಮೇಲೆ ಕಬ್ಜೆ ದಿನಾಂಕದಿಂದ ಒಂದು ವರ್ಷದ ಅವಧಿಗೆ ಶೇ.9ರಂತೆ ಮತ್ತು ನಂತರದ ಅವಧಿಗೆ ಶೇ.15ರಂತೆ ಬಡ್ಡಿಯನ್ನು ಪಾವತಿಸುವಂತೆ ತೀರ್ಪು ನೀಡಿದೆ.

ಸಿವಿಲ್ ನ್ಯಾಯಾಲಯದ ಮೇಲ್ಕಂಡ ಆದೇಶದ ವಿರುದ್ಧ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿಗಳನ್ನು (ಎಂಎಫ್‌ಎ) ಸಲ್ಲಿಸಲಾಗಿತ್ತು. ಈ ಮೇಲ್ಮನವಿಗಳಲ್ಲಿ ಇದೇ ಕೆರೆಗೆ ಸ್ವಾಧೀನಪಡಿಸಿಕೊಳ್ಳಲಾಗಿದ್ದ ಬೂದಿಗೊಪ್ಪ ಗ್ರಾಮದ ಸ.ನಂ.216ರ 5–14 ಎಕರೆ ಜಮೀನಿಗೆ ಹೆಚ್ಚಿನ ಪರಿಹಾರ ಪಾವತಿ ವಿಷಯದಲ್ಲಿ ಎಂಎಫ್‌ಎ ಸಂಖ್ಯೆ:811/04ರಲ್ಲಿ ದಿನಾಂಕ 06/02/04ರಂದು ಮಾನ್ಯ ಉಚ್ಚ ನ್ಯಾಯಾಲಯವು ನೀಡಿರುವ ತೀರ್ಪನ್ನು ಉಲ್ಲೇಖಿಸಿ ಸಿವಿಲ್ ನ್ಯಾಯಾಲಯದ ತೀರ್ಪನ್ನು ಪುರಸ್ಕರಿಸಿದೆ.

ಕಾನೂನು ಇಲಾಖೆಯು ಎಂಎಫ್‌ಎ ತೀರ್ಪುಗಳ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕೆಳಕಂಡ ಪತ್ರಗಳಲ್ಲಿ ಅಭಿಪ್ರಾಯ ನೀಡಿರುವುದರಿಂದ, ಸಿವಿಲ್ ನ್ಯಾಯಾಲಯದ ತೀರ್ಪನ್ನು ಜಾರಿಗೊಳಿಸುವುದು ಅನಿವಾರ್ಯವಾಗಿದೆ.

| | |
|---|---|
| 1 | ಲಾ 1329 ಎಲ್‌ಬಿಎಸ್ 2005, ದಿನಾಂಕ 04/02/06 |
| 2 | ಲಾ 1369 ಎಲ್‌ಬಿಎಸ್ 2005, ದಿನಾಂಕ 04/02/06 |
| 3 | ಲಾ 1653 ಎಲ್‌ಬಿಎಸ್ 2005, ದಿನಾಂಕ 04/02/06 |

| | |
|---|---|
| 4 | ಲಾ 486 ಎಲ್‌ಬಿಎಸ್ 2006, ದಿನಾಂಕ 06/03/06 |
| 5 | ಲಾ 1499 ಎಲ್‌ಬಿಎಸ್ 2005, ದಿನಾಂಕ 04/02/06 |
| 6 | ಲಾ 1918 ಎಲ್‌ಬಿಎಸ್ 2005, ದಿನಾಂಕ 04/02/06 |
| 7 | ಲಾ 1368 ಎಲ್‌ಬಿಎಸ್ 2005, ದಿನಾಂಕ 04/02/06 |
| 8 | ಲಾ 359 ಎಲ್‌ಬಿಎಸ್ 2006, ದಿನಾಂಕ 01/03/06 |
| 9 | ಲಾ 351 ಎಲ್‌ಬಿಎಸ್ 2006, ದಿನಾಂಕ 01/03/06 |
| 10 | ಲಾ 1069 ಎಲ್‌ಬಿಎಸ್ 2007, ದಿನಾಂಕ 05/07/07 |

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ಲೆಕ್ಕಾಚಾರ ತ:ಖ್ತೆ ತಯಾರಿಸಿದ್ದು, ಪಾವತಿಸಬೇಕಾಗಿರುವ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರ. ಸಂ. | ಎಲ್‌ಎಸಿ ಸಂಖ್ಯೆ | ಎಂಎಫ್‌ಎ ಸಂಖ್ಯೆ | ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ (ಲಕ್ಷ ರೂ.ಗಳಲ್ಲಿ) |
|---|---|---|---|---|---|
| 1 | 127/03 | 810/04 | 214/2 | 0–28 | 655960 |
| 2 | 121/03 | 120/04 | 219 | 0–19 | 360677 |
| 3 | 123/03 | 1202/04 | 222 | 2–24 | 1973329 |
| 4 | 124/03 | 1203/04 | 153 | 1–30 | 1452008 |
| 5 | 125/03 | 1204/04 | 154/1&2 | 1–12 | 986764 |
| 6 | 126/03 | 1208/04 | 214/1 | 0–37 | 822379 |
| 7 | 128/03 | 1211/04 | 271,272 | 2–34 | 2173593 |
| 8 | 129/03 | 1214/04 | 273/1,2,3 | 4–34 | 4543683 |
| 9 | 130/03 | 1205/04 | 274/B1 | 4–08 | 3934763 |
| 10 | 131/03 | 1207/04 | 274/A | 7–13 | 5561042 |
| 11 | 132/03 | 1210/04 | 275 | 0–21 | 492021 |
| 12 | 133/03 | 1213/04 | 282 | 1–04 | 1030681 |
| 13 | 146/03 | 1206/04 | 215 | 0–29 | 673918 |
| 14 | 147/03 | 1209/04 | 278 | 0–17 | 398341 |
| 15 | 159/03 | 1212/04 | 217&218 | 0–23 | 538861 |
| | **ಒಟ್ಟು** | | | | **25598020** |

- ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 162 ಭೂಸ್ವಾಪ್ರ 2008, ಬೆಂಗಳೂರು, ದಿನಾಂಕ: 24ನೇ ಏಪ್ರಿಲ್ 2009.**

ಬೆಳಗಾಂ ಜಿಲ್ಲೆ, ಸೌದತ್ತಿ ತಾಲ್ಲೂಕು ಬೂದಿಗೊಪ್ಪ ಮತ್ತು ಯರಝುರವಿ ಗ್ರಾಮಗಳ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಾಹಾಕಿದ ಪರಿಹಾರ ಧನ ಮೊತ್ತ ರೂ.2,55,98,020–00 ಗಳನ್ನು (ಎರಡು ಕೋಟಿ ಐವತ್ತೈದು ಲಕ್ಷದ ತೊಂಭತ್ತೆಂಟು ಸಾವಿರದ ಇಪ್ಪತ್ತು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವುಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ:ಲೋಇ 27 ಆಕೋ–1/08, ದಿನಾಂಕ 30/01/2009ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಪಿ.ಆರ್. 1200 ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ:** 2009–10ನೇ ಸಾಲಿನಲ್ಲಿ ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯನ್ನು ಮುಂದುವರಿಸುವ ಬಗ್ಗೆ.

**ಪ್ರಸ್ತಾವನೆ:**

ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿ 2009–10ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2575–60–265–0–02–059 (ಯೋಜನೆ) ಅಡಿಯಲ್ಲಿ ಒಟ್ಟು ರೂ.20000.00 ಲಕ್ಷಗಳನ್ನು ಒದಗಿಸಲಾಗಿದೆ.

ಈ ಯೋಜನೆಯಡಿ ಯಾವುದೇ ಮಾರ್ಪಾಟು ಇಲ್ಲದ್ದಿರುವುದರಿಂದ, ಸರ್ಕಾರಿ ಆದೇಶ ಸಂಖ್ಯೆ:ಪಿಡಿ 17 ಐಎಂಎಂ 2005, ದಿನಾಂಕ: 10.08.2005 ರನ್ವಯ ಹಾಗೂ ದಿನಾಂಕ: 21.04.2009 ರಂದು ಪ್ರಧಾನ ಕಾರ್ಯದರ್ಶಿ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಈ ಯೋಜನೆಯನ್ನು 2009–10 ನೇ ಸಾಲಿನಲ್ಲಿ ಮುಂದುವರೆಸಲು ನಿರ್ಣಯಿಸಲಾಯಿತು. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಯೋಇ 32 ಯೋವಿವಿ 2009, ಬೆಂಗಳೂರು, ದಿನಾಂಕ: 25ನೇ ಏಪ್ರಿಲ್ 2009**

2009–10ನೇ ಸಾಲಿನ ಆಯವ್ಯಯದಲ್ಲಿ ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಗಾಗಿ ಲೆಕ್ಕಶೀರ್ಷಿಕೆ 2575–60–265–0–02–059 (ಯೋಜನೆ) ಅಡಿ ಒದಗಿಸಲಾದ ರೂ.20000.00 ಲಕ್ಷಗಳ ಯೋಜನೆಗೆ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಚಿಕ್ಕರಾಜು**

ಪಿ.ಆರ್. 1201 ಸರ್ಕಾರದ ಅಧೀನ ಕಾರ್ಯದರ್ಶಿ 1 & 2,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಂಖ್ಯಿಕ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಹೊಸದಾಗಿ ರಚಿಸಲಾಗಿರುವ ಆಯೋಗ/ಸಮಿತಿ/ಪ್ರಾಧಿಕಾರ/ಮಿಷನ್/ಕಾರ್ಯಪಡೆಗಳಿಗೆ ಸೌಲಭ್ಯಗಳನ್ನು ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 41 ಶಿಸನೇ 2002, ದಿನಾಂಕ 17.06.2002.

2. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 68 ಶಿವಾನೀ 2008, ದಿನಾಂಕ: 22.08.2008

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಸಚಿವರ ಸ್ಥಾನಮಾನ ಹೊಂದಿರುವ ಕಾರ್ಯನಿರ್ವಾಹಕ ಪ್ರಾಧಿಕಾರಗಳಿಗೆ ನೀಡಬೇಕಾಗಿರುವ ವೇತನ ಭತ್ಯೆ ಇನ್ನಿತರ ಸೌಲಭ್ಯಗಳನ್ನು ನಿಗದಿಪಡಿಸಲಾಗಿದೆ.

ರಾಜ್ಯದ ಸಮಗ್ರ ಅಭಿವೃದ್ಧಿಗಾಗಿ ರಾಜ್ಯದ ಸಂಪೂರ್ಣ ಸಾಮರ್ಥ್ಯವನ್ನು ಸಂಪೂರ್ಣ ಸದ್ಬಳಕೆ ಮಾಡುವ ಉದ್ದೇಶದಿಂದ ವಿವಿಧ ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಗೊಳಿಸಲು ರಾಜ್ಯ ಸರ್ಕಾರವು ವಿವಿಧ ಆಯೋಗ/ಸಮಿತಿ/ಪ್ರಾಧಿಕಾರ/ಮಿಷನ್/ಕಾರ್ಯಪಡೆಗಳನ್ನು ಹೊಸದಾಗಿ ರಚಿಸಿದ್ದು, ಅಧ್ಯಕ್ಷರುಗಳನ್ನು ನೇಮಿಸಿ ಅವರುಗಳಿಗೆ ಸೂಕ್ತ ಸ್ಥಾನಮಾನವನ್ನು ಸಹ ನೀಡಲಾಗಿದೆ. ಅವುಗಳಲ್ಲಿ ಕೆಲವು ಸಂಸ್ಥೆಗಳ ವಿವರ ಕೆಳಕಂಡಂತಿರುತ್ತದೆ.

| ಕ್ರ. ಸಂ. | ಅಧ್ಯಕ್ಷರ ಹೆಸರು | ಸಂಸ್ಥೆಗಳ ಹೆಸರು | ಆಡಳಿತ ಇಲಾಖೆ |
|---|---|---|---|
| 1 | ಶ್ರೀ ನಾಗರಾಜ್ ಶೆಟ್ಟಿ | ಕರ್ನಾಟಕ ಕರಾವಳಿ ಅಭಿವೃದ್ಧಿ ಪ್ರಾಧಿಕಾರ | ನಗರಾಭಿವೃದ್ಧಿ ಇಲಾಖೆ |
| 2 | ಡಾ. ಕಸ್ತೂರಿ ರಂಗನ್ | ಕರ್ನಾಟಕ ಜ್ಞಾನ (ಅರಿವು) ಆಯೋಗ | ಶಿಕ್ಷಣ ಇಲಾಖೆ |
| 3 | ಶ್ರೀ ಶಶಿಲ್ ನಮೋಶಿ | ನಂಜುಡಪ್ಪ ವರದಿಯ ಶಿಫಾರಸ್ಸಿನ ಅನುಷ್ಠಾನ ಸಮಿತಿ | ಯೋಜನಾ ಇಲಾಖೆ |
| 4 | ಪ್ರೊ.ಸಿ.ಎನ್.ಆರ್. ರಾವ್ | ವಿಜ್ಞಾನ ಮತ್ತು ತಂತ್ರಜ್ಞಾನ ದಾರ್ಶನಿಕ ಸಮೂಹ | ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ |
| 5 | ಶ್ರೀ ಆನಂದ್ ಎ.ಎಸ್ | ಸಾವಯವ ಕೃಷಿ ಮಿಷನ್ | ಕೃಷಿ ಇಲಾಖೆ |

| ಕ್ರ. ಸಂ. | ಅಧ್ಯಕ್ಷರ ಹೆಸರು | ಸಂಸ್ಥೆಗಳ ಹೆಸರು | ಆಡಳಿತ ಇಲಾಖೆ |
|---|---|---|---|
| 6 | ಡಾ: ಎಸ್.ಎ. ಪಾಟೀಲ್ | ಕರ್ನಾಟಕ ಕೃಷಿ ಮಿಷನ್ | ಕೃಷಿ ಇಲಾಖೆ |
| 7 | ಶ್ರೀ ಅನಂತ ಹೆಗಡೆ ಅಶೀಸರ | ಪಶ್ಚಿಮ ಘಟ್ಟ (ಸಹ್ಯಾದ್ರಿ) ಕಾರ್ಯಪಡೆ | ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ |
| 8 | ಶ್ರೀ ವೈ. ಬಿ. ರಾಮಕ್ರಿಷ್ಣ | ಜೈವಿಕ ಇಂಧನ ಪಡೆ | ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ |
| 9 | ಶ್ರೀ ಸಿ.ಎಸ್. ವಿಶ್ವನಾಥ್ | ಕಾಮಗಾರಿಗಳ ಗುಣಮಟ್ಟ ನಿಯಂತ್ರಣ ಕಾರ್ಯಪಡೆ | ಲೋಕೋಪಯೋಗಿ ಇಲಾಖೆ |

ಹೊಸದಾಗಿ ರಚಿಸಲಾಗಿರುವ ಆಯೋಗ/ಸಮಿತಿ/ಪ್ರಾಧಿಕಾರ/ಮಿಷನ್/ಕಾರ್ಯಪಡೆಗಳಿಗೆ ಸಂಬಂಧಿಸಿದ ಆಡಳಿತ ಇಲಾಖೆಗಳಿಂದ ವೇತನ ಭತ್ಯೆ ಹಾಗೂ ಇನ್ನಿತರ ಸೌಲಭ್ಯಗಳನ್ನು ನೀಡದಿರುವ ಬಗ್ಗೆ ಸಮಸ್ಯೆಗಳಿರುತ್ತವೆ. ಇವುಗಳ ಅಧ್ಯಕ್ಷರುಗಳಿಗೆ ಸಂಪುಟ ದರ್ಜೆ ಸಚಿವರ/ರಾಜ್ಯ ಸಚಿವರ ಸ್ಥಾನಮಾನ ನೀಡಿರುವುದರಿಂದ ಇವರುಗಳಿಗೆ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 41 ಶಿಸನೇ 2002, ದಿನಾಂಕ 17.06.2002ರಲ್ಲಿ ಕಲ್ಪಿಸಿರುವ ಆರ್ಥಿಕ ಸೌಲಭ್ಯಗಳನ್ನು ಸಂಬಂಧಪಟ್ಟ ಆಡಳಿತ ಇಲಾಖೆಗಳು ನೀಡಬೇಕಾಗುತ್ತದೆ. ಸದರಿ ಅವಕಾಶದಂತೆ ಅವರುಗಳ ವೇತನ, ದಿನ ಭತ್ಯೆ, ಪ್ರವಾಸ ಭತ್ಯೆ, ಮನೆ ಬಾಡಿಗೆ ಭತ್ಯೆ, ವಾಹನ ಸೌಲಭ್ಯ, ಜೊತೆಗೆ ಆಪ್ತ ಸಿಬ್ಬಂದಿಗಳ ವೇತನ ಇತ್ಯಾದಿ ಸೇರಿ ವಾರ್ಷಿಕ ಸುಮಾರು ರೂ. 70.00ರಿಂದ ರೂ 80.00 ಲಕ್ಷಗಳ ವೆಚ್ಚ ಬರುವ ಸಾಧ್ಯತೆ ಇರುತ್ತದೆ. ಈ ವೆಚ್ಚವನ್ನು ಭರಿಸಲು ಸಂಬಂಧಪಟ್ಟ ಆಡಳಿತ ಇಲಾಖೆಗಳು ಆಯವ್ಯಯದಲ್ಲಿ ಸೂಕ್ತ ಹಣಾವಕಾಶವನ್ನು ಕಲ್ಪಿಸಿಕೊಂಡು ಭರಿಸಬೇಕಾಗುತ್ತದೆ.

ಈ ಸಂಸ್ಥೆಗಳ ಅಧ್ಯಕ್ಷರುಗಳಿಗೆ ಸಂಬಂಧಪಟ್ಟ ಆಡಳಿತ ಇಲಾಖೆಗಳಿಂದ ನೀಡುತ್ತಿರುವ ಸೌಲಭ್ಯಗಳ ಬಗ್ಗೆ ಪರಿಶೀಲಿಸಲು ದಿನಾಂಕ:29.01.2009 ರಂದು ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಸಭೆ ನಡೆದಿದ್ದು, ಸದರಿ ಸಭೆಯಲ್ಲಿ ಸಂಬಂಧಪಟ್ಟ ಇಲಾಖೆಗಳ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳು ಪ್ರಸ್ತುತ ಆ ಇಲಾಖೆಗಳಲ್ಲಿ ರಚಿಸಲಾಗಿರುವ ಅಧ್ಯಕ್ಷರುಗಳಿಗೆ ಸೌಲಭ್ಯಗಳನ್ನು ಒದಗಿಸುವಲ್ಲಿ ಎದುರಿಸುತ್ತಿರುವ ಸಮಸ್ಯೆಗಳ ಬಗ್ಗೆ ಮುಖ್ಯ ಕಾರ್ಯದರ್ಶಿಗಳ ಗಮನಕ್ಕೆ ತಂದಿದ್ದು, ಈ ಅಧ್ಯಕ್ಷರುಗಳಿಗೆ ಸಚಿವ ಸ್ಥಾನಮಾನ ನೀಡಿರುವುದರಿಂದ ಸರ್ಕಾರಿ ಆದೇಶ ದಿನಾಂಕ: 17.06.2002 ರಲ್ಲಿ ಕಲ್ಪಿಸಿರುವ ಆರ್ಥಿಕ ಸೌಲಭ್ಯಗಳನ್ನು ನೀಡಲು ಅವಶ್ಯಕ ಕ್ರಮ ಕೈಗೊಳ್ಳುವಂತೆ ತಿಳಿಸಿರುತ್ತಾರೆ. ಈ ಸಂಸ್ಥೆಗಳ ಅಧ್ಯಕ್ಷರುಗಳಿಗೆ ಆಪ್ತ ಸಿಬ್ಬಂದಿ ನೇಮಿಸುವ ಸಂಬಂಧ ಇಲಾಖೆಗಳಲ್ಲಿ ಸಿಬ್ಬಂದಿ ಕೊರತೆಯಿದ್ದು, ಗ್ರೂಪ್–ಸಿ ಮತ್ತು ಗ್ರೂಪ್–ಡಿ ವರ್ಗದ ಸಿಬ್ಬಂದಿಯನ್ನು ಸಚಿವರುಗಳ ಆಪ್ತ ಶಾಖೆಯಲ್ಲಿ ನೇಮಿಸುವಂತೆ ಗುತ್ತಿಗೆ ಆಧಾರದ ಮೇಲೆ ನೇಮಿಸಲು ಅವಕಾಶ ಕಲ್ಪಿಸುವಂತೆ ಕೋರಿದ್ದರ ಹಿನ್ನೆಲೆಯಲ್ಲಿ ಈ ಬಗ್ಗೆ ಪರಿಶೀಲಿಸಿ ಸೂಕ್ತ ಅವಕಾಶವನ್ನು ಕಲ್ಪಿಸುವಂತೆ ಹಾಗೂ ಕಾರ್ಯಪಡೆಗಳ ಅಧಿಕಾರ ಅವಧಿ ಅವುಗಳ ಅಧಿಕಾರ ಮತ್ತು ಕರ್ತವ್ಯಗಳ ಬಗ್ಗೆ ಸಮರ್ಪಕವಾಗಿ ಮಾರ್ಗಸೂಚಿಯನ್ನು ಹೊರಡಿಸಲು ಮುಖ್ಯ ಕಾರ್ಯದರ್ಶಿಯವರು ಸೂಚಿಸಿರುತ್ತಾರೆ.

ಮೇಲೆ ವಿವರಿಸಿರುವ ಕಾರಣ ಹಿನ್ನೆಲೆಯಲ್ಲಿ ಈ ಸಂಸ್ಥೆಗಳ ಅಧ್ಯಕ್ಷರುಗಳಿಗೆ ಸಮರ್ಪಕವಾಗಿ ಕಾರ್ಯನಿರ್ವಹಿಸುವ ದೃಷ್ಟಿಯಿಂದ ಉಲ್ಲೇಖಿತ ಆದೇಶದಲ್ಲಿ ಕಲ್ಪಿಸಿರುವ ಸೌಲಭ್ಯಗಳನ್ನು ಹಾಗೂ ಅಗತ್ಯ ಸಿಬ್ಬಂದಿ ವರ್ಗ, ಕಛೇರಿ ಮತ್ತು ಪೀಠೋಪಕರಣಗಳನ್ನು ಸಂಬಂಧಪಟ್ಟ ಆಡಳಿತ ಇಲಾಖೆಗಳು ಒದಗಿಸುವ ದೃಷ್ಟಿಯಿಂದ ಮಾರ್ಗಸೂಚಿಯನ್ನು ಹೊರಡಿಸುವುದು ಅವಶ್ಯವೆಂದು ಸರ್ಕಾರವು ನಿರ್ಧರಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 06 ಶಿಸನೇ 2009, ದಿನಾಂಕ: 28ನೇ ಏಪ್ರಿಲ್ 2009**

1. ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಹೊಸದಾಗಿ ರಚಿಸಲಾಗಿರುವ ಆಯೋಗ/ಸಮಿತಿ/ಪ್ರಾಧಿಕಾರ/ಮಿಷನ್/ಕಾರ್ಯಪಡೆಗಳ ಅಧ್ಯಕ್ಷರುಗಳಿಗೆ ಸಂಪುಟ ದರ್ಜೆ ಸಚಿವರ/ರಾಜ್ಯ ಸಚಿವರ ಸ್ಥಾನಮಾನ ನೀಡಿರುವುದರಿಂದ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 41 ಶಿಸನೇ 2002, ದಿನಾಂಕ 17.06.2002ರಲ್ಲಿ ಕಲ್ಪಿಸಿರುವ ಸೌಲಭ್ಯಗಳನ್ನು ಯಥಾವತ್ತಾಗಿ ನೀಡಲು ಆದೇಶಿಸಿದೆ.

2. ಈ ಅಧ್ಯಕ್ಷರುಗಳಿಗೆ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ 68 ಶಿವಾನೀ 2008, ದಿನಾಂಕ 22.08.2008ರಲ್ಲಿ ನಿಗಧಿಪಡಿಸಿರುವ ರೂ. 11.00 ಲಕ್ಷ ಆರ್ಥಿಕ ಮಿತಿಯೊಳಗೆ ವಾಹನ ಖರೀದಿ ಒದಗಿಸತಕ್ಕದ್ದು. ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಿಂದ ಈಗಾಗಲೇ ಅಧ್ಯಕ್ಷರುಗಳ ಉಪಯೋಗಕ್ಕೆ ತಾತ್ಕಾಲಿಕವಾಗಿ ನೀಡಿರುವ ವಾಹನವನ್ನು ಆಡಳಿತ ಇಲಾಖೆಯಿಂದ ಹೊಸ ವಾಹನಗಳನ್ನು ಖರೀದಿಸಿದ ನಂತರ ಅತಿಥಿ ಗೃಹಕ್ಕೆ ಹಿಂದಿರುಗಿಸತಕ್ಕದ್ದು.

3. ಮಾನ್ಯ ಮುಖ್ಯ ಮಂತ್ರಿಯವರ ಪೂರ್ವಾನುಮೋದನೆಯೊಂದಿಗೆ ಸಂಬಂಧಪಟ್ಟ ಆಡಳಿತ ಇಲಾಖೆಗಳು ಕೆಳಕಂಡಂತೆ ಕ್ರಮ ವಹಿಸತಕ್ಕದ್ದು.

(1) ಇವುಗಳ ಅಧ್ಯಕ್ಷರುಗಳಿಗೆ ಕಛೇರಿ ಸ್ಥಳಾವಕಾಶ, ಪೀಠೋಪಕರಣ ಲೇಖನ ಸಾಮಗ್ರಿ ಇನ್ನಿತರ ಯಂತ್ರೋಪಕರಣಗಳನ್ನು ಮತ್ತು ಇತ್ಯಾದಿ ಸೌಲಭ್ಯಗಳನ್ನು ಆಡಳಿತ ಇಲಾಖೆಗಳೇ ಒದಗಿಸತಕ್ಕದ್ದು.

(2) ಅಧ್ಯಕ್ಷರುಗಳಿಗೆ ಆಪ್ತ ಸಿಬ್ಬಂದಿಯನ್ನು ಸರ್ಕಾರಿ ಆದೇಶದ ದಿನಾಂಕ: 17.06.2002 ರಲ್ಲಿ ತಿಳಿಸಿರುವಂತೆ ಆಪ್ತ ಕಾರ್ಯದರ್ಶಿ ಹುದ್ದೆಯನ್ನು ಗ್ರೂಪ್–ಎ ಅಥವಾ ಗ್ರೂಪ್–ಬಿ ಶ್ರೇಣಿಯ ಅಧಿಕಾರಿಗಳನ್ನು ನಿಯೋಜನೆ ಮೂಲಕ ಭರ್ತಿ ಮಾಡಿಕೊಳ್ಳತಕ್ಕದ್ದು. ಉಳಿದ ಸಿಬ್ಬಂದಿ ಅಂದರೆ ಗ್ರೂಪ್–ಸಿ ಮತ್ತು ಗ್ರೂಪ್–ಡಿ ವರ್ಗದ ನೌಕರರನ್ನು ಆಡಳಿತ ಹಾಗೂ ಇನ್ನಿತರ ಇಲಾಖೆಗಳಲ್ಲಿ ಸೂಕ್ತ ಸಿಬ್ಬಂದಿ ಇಲ್ಲದಿದ್ದ ಪಕ್ಷದಲ್ಲಿ ಗುತ್ತಿಗೆ ಆಧಾರದ ಮೇಲೆ ಅಧ್ಯಕ್ಷರ ಕಾರ್ಯಾವಧಿವರೆಗೆ ಮಾತ್ರ ನೇಮಿಸಿಕೊಳ್ಳತಕ್ಕದ್ದು.

(3) ಯಾವ ಉದ್ದೇಶಗಳಿಗೆ ಕಾರ್ಯಪಡೆ ರಚನೆಯಾಗಿದೆಯೋ ಆ ಉದ್ದೇಶಗಳನ್ನು ಗಮನದಲ್ಲಿಟ್ಟುಕೊಂಡು ನಿಗಧಿಪಡಿಸಿದ ಅವಧಿಯೊಳಗೆ ಗುರಿ ಸಾಧಿಸಲು ಸಂಬಂಧಪಟ್ಟ ಆಡಳಿತ ಇಲಾಖೆಗಳು ಎಲ್ಲಾ ರೀತಿಯ ಸಹಕಾರ ಮಾಹಿತಿ ಹಾಗೂ ಸೌಲಭ್ಯಗಳನ್ನು ಇವುಗಳಿಗೆ ಒದಗಿಸತಕ್ಕದ್ದು.

(4) ಇವುಗಳ ನಿರ್ವಹಣೆಗಾಗಿ ಬೇಕಾಗುವ ಸಂಪನ್ಮೂಲವನ್ನು ಆಯವ್ಯಯದಲ್ಲಿ ಸೂಕ್ತ ಹಣಾವಕಾಶ ಕಲ್ಪಿಸಿಕೊಂಡು ಆಡಳಿತ ಇಲಾಖೆಗಳು ನಿಯಮಾನುಸಾರ ವೆಚ್ಚವನ್ನು ಭರಿಸತಕ್ಕದ್ದು. ಸರ್ಕಾರವು ಆಗಿಂದ್ದಾಗ್ಗೆ ಹೊರಡಿಸಿರುವ ಮಿತವ್ಯಯ ಆದೇಶವನ್ನು ಪಾಲಿಸಲು ಕ್ರಮ ಕೈಗೊಳ್ಳುವುದು.

(5) ಅಧಿಕಾರೇತ ಸದಸ್ಯರುಗಳಿಗೆ ಪ್ರವಾಸ ಭತ್ಯೆಯನ್ನು ಗ್ರೂಪ್–ಎ ಹಿರಿಯ ಶ್ರೇಣಿಯ ಅಧಿಕಾರಿಯು ಪಡೆಯುವ ದರದಲ್ಲಿ ನೀಡತಕ್ಕದ್ದು. (ಪ್ರಥಮ ದರ್ಜೆ/ಹವಾ ನಿಯಂತ್ರಿತ 2ನೇ ದರ್ಜೆ ರೈಲಿನಲ್ಲಿ ಪ್ರಯಾಣ, ಆದರೆ ವಿಮಾನಯಾನ ದರ ಪಡೆಯುವಂತಿಲ್ಲ First class/Ac-II in train; but not airfare). ಸಭೆಗೆ ಹಾಜರಾಗುವ ಅಧಿಕಾರೇತರ ಸದಸ್ಯರುಗಳಿಗೆ ತಂಗಿದ ಪ್ರಯುಕ್ತ ದಿನ ಭತ್ಯೆಯನ್ನು ಪಡೆದಲ್ಲಿ ಸಭಾ ಭತ್ಯೆಯನ್ನು ರೂ.250/–ಗಳಿಗೆ ಸೀಮಿತಗೊಳಿಸಿದೆ ಹಾಗೂ ಯಾವುದೇ ದಿನ ಭತ್ಯೆಯನ್ನು ಪಡೆಯದಿದ್ದಲ್ಲಿ ಅವರುಗಳಿಗೆ ರೂ.500/– ಗಳ ಸಭಾ ಭತ್ಯೆಯನ್ನು ನೀಡತಕ್ಕದ್ದು.

(6) ಪ್ರಸ್ತುತ ವಿಧಾನಸೌಧ, ವಿಕಾಸ ಸೌಧ ಮತ್ತು ಬಹುಮಹಡಿ ಕಟ್ಟಡಗಳಲ್ಲಿ ಸ್ಥಳಾವಕಾಶ ಲಭ್ಯವಿಲ್ಲದಿದ್ದಲ್ಲಿ ಈ ಸಂಸ್ಥೆಗಳಿಗೆ ಅಗತ್ಯವಾದ ಕಛೇರಿ ಸ್ಥಳಾವಕಾಶವನ್ನು ಸಂಬಂಧಪಟ್ಟ ಇಲಾಖೆಗಳ ವ್ಯಾಪ್ತಿಗೊಳಪಡುವ ಕಛೇರಿ ಕಟ್ಟಡಗಳಲ್ಲಿ ಒದಗಿಸತಕ್ಕದ್ದು.

(7) ಸರ್ಕಾರವು ಈಗಾಗಲೇ ರಚಿಸಲಾಗಿರುವ ಹಾಗೂ ಮುಂದೆ ರಚಿಸಲಿರುವ ಇಂತಹ ಎಲ್ಲಾ ಸಂಸ್ಥೆಗಳಿಗೂ ಮೇಲ್ಕಂಡ ಸೌಲಭ್ಯಗಳು, ಷರತ್ತು ಮತ್ತು ನಿಬಂಧನೆಗಳು ಅನ್ವಯವಾಗುತ್ತವೆ.

4. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 188 ವೆಚ್ಚ–12 2009, ದಿನಾಂಕ:24.04.2009 ರಲ್ಲಿ ನೀಡಿರುವ ಸಹಮತಿರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ತಿಪ್ಪೇಸ್ವಾಮಿ**

ಪಿ.ಆರ್. 1202 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ).

## HEALTH AND FAMILY WELFARE SECRETARIAT

**Sub:** Deputation of Dr. Jayaraju, DPMO,KHSDRP, Tumkur, for the WHO Fellowship-reg.

**Read:** 1) Application of Dr. Jayaraju, DPMO,KHSDRP, Tumkur dt. 02.02.2008

2) Letter from WHO No. FS SE 0540-49/08 dated 23.02.2009.

**Preamble:**

It is necessary that the Officers of the Department of Health and Family Welfare are regularly trained and oriented in better skills that will help improve service delivery. The name of Dr. Jayaraju, DPMO Tumkur was communicated by this Office to the Ministry of Health and Family Welfare. Govt. of India (Ref-1) for recommending the same to the World Health Organisation that is conduting different courses in 2009-10. The World Health Organisation have communicated acceptance of nomination to Dr. Jayaraju vide Letter No. FS SE 0540-49/08 dated 23.2.2009 (ref-2). The WHO will meet all expenses relating to the Fellowship.

Hence, the following order.

**Govt.Order No.HFW(PR) 64 WBA 2009 Bangalore, Dated: 25th April 2009**

Under the circumstances mentioned in the Preamble, the Government are pleased to nominate Dr. Jayaraju Devikoppa, District Project Management Officer, Tumkur as a Fellow for the 4-week

Fellowship by WHO, to study Community Health Care and Research at Khon Kaen University, Department of Community Medicine, 123, Mitrapart Road, Mueang District, Khon Kaen Province, 40002, Thailand from 4.5.2009 to 29.5.2009.

The officer shall get in touch with Associate Professor Dr. Sompong Srisaenpang, Course Co-ordinator for all relevant purposes.

As per the letter received by WHO referred above, the following conditions shall apply to the Fellow selected for the Course.

a) Submission of the Fellowship Termination of Studies Report (FTSR) within one month of the completion of the studies.

b) The Fellowship Termination Allowance (FTA), as applicable under WHO Rules will be released by WHO/SEARO only on receipt of the FTSR from the Fellow, duly endorsed by the Fellow's employer (Head of Department/Institution).

By Order and in the name of Governor of Karnataka,

P.R. 1203

**SUSHAMA GODBOLE**

Deputy Secretary to Govt, KHSDRP, Health and Family Welfare Department.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ:** ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯ ಮುಖ್ಯ ಹಣಕಾಸು ಅಧಿಕಾರಿಯವರಿಗೆ ಎ.ಸಿ. ಬಿಲ್ ಮೂಲಕ ಖಜಾನೆಯಿಂದ ಹಣ ಸೆಳೆಯಲು ಅಧಿಕಾರ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ: ಹೆಚ್‌ಎಫ್‌ಡಬ್ಲ್ಯೂ/ಕೆಹೆಚ್‌ಎಸ್‌ಡಿಆರ್‌ಪಿ/ಎಸ್‌ಇಸಿಟಿ–1/2006 ದಿ:30.12.2006

2. ಸರ್ಕಾರದ ಆದೇಶ ಸಂ: ಹೆಚ್‌ಎಫ್‌ಡಬ್ಲ್ಯೂ/ಕೆಹೆಚ್‌ಎಸ್‌ಡಿಆರ್‌ಪಿ/ಎಸ್‌ಇಸಿಟಿ–1/2007 ದಿ:31.07.2008

3. ಸರ್ಕಾರದ ಆದೇಶ ಸಂ: ಹೆಚ್‌ಎಫ್‌ಡಬ್ಲ್ಯೂ/ ಕೆಹೆಚ್‌ಎಸ್‌ಡಿಆರ್‌ಪಿ/ ಎಸ್‌ಇಸಿಟಿ/ಜಿಓ–1/2007 ದಿ:31.07.2008

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಿಶ್ವಬ್ಯಾಂಕ್ ನೆರವಿನ ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯನ್ನು ಪ್ರಾರಂಭಿಸಲು ಮಂಜೂರಾತಿ ನೀಡಲಾಗಿದೆ. ಯೋಜನೆ ಕಛೇರಿಯಲ್ಲಿ ತುರ್ತು ಸಂದರ್ಭಗಳಲ್ಲಿ ಕಛೇರಿ ವೆಚ್ಚವನ್ನು ಭರಿಸಲು ಸಾಧ್ಯವಾಗುವಂತೆ ರೂ.75,000.00 ಗಳು ಅಥವಾ ಕಡಿಮೆ ಹಣವನ್ನು ಎ.ಸಿ. ಎಲ್ ಮೂಲಕ ಖಜಾನೆಯಿಂದ ಸೆಳೆಯಲು ಯೋಜನೆಯ ಮುಖ್ಯ ಹಣಕಾಸು ಅಧಿಕಾರಿಯವರಿಗೆ ಮೇಲೆ (2) ಮತ್ತು (3)ರಲ್ಲಿ ಓದಲಾದ ಸರ್ಕಾರಿ ಆದೇಶಗಳನ್ವಯ ಕ್ರಮವಾಗಿ 2007–08 ಮತ್ತು 2008–09ನೇ ಸಾಲಿನಲ್ಲಿ ಅಧಿಕಾರ ನೀಡಲಾಗಿತ್ತು. ಪ್ರಸ್ತುತ ವರ್ಷದಲ್ಲಿಯೂ ಸದರಿ ಅಧಿಕಾರವನ್ನು ಮುಂದುವರೆಸುವುದು ಅಗತ್ಯವೆಂದು ಕಂಡುಬಂದಿರುತ್ತದೆ.

ಆದ್ದರಿಂದ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಎಫ್‌ಡಬ್ಲ್ಯೂ(ಪಿಆರ್) 63 ಡಬ್ಲ್ಯೂಬಿಎ 2009, ಬೆಂಗಳೂರು, ದಿನಾಂಕ: 21ನೇ ಏಪ್ರಿಲ್ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಸರ್ಕಾರವು, ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯ ಕಾರ್ಯಚಟುವಟಿಕೆಗಳ ಸಂಬಂಧ ತುರ್ತು ಸಂದರ್ಭಗಳಲ್ಲಿ ವೆಚ್ಚವನ್ನು ಭರಿಸುವ ಸಲುವಾಗಿ 2009–10ನೇ ಸಾಲಿನಲ್ಲಿ ರೂ. 75,000.00 (ಎಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ) ಅಥವಾ ಕಡಿಮೆ ಹಣವನ್ನು ಎ.ಸಿ.ಬಿಲ್ ಮೂಲಕ ಲೆಕ್ಕ ಶೀರ್ಷಿಕೆ "2210–06–800–0–84–051 (ಸಾಮಾನ್ಯ ವೆಚ್ಚಗಳು)" ಅಡಿಯಲ್ಲಿ ಖಜಾನೆಯಿಂದ ಸೆಳೆಯಲು ಯೋಜನಾ ಕಛೇರಿಯ ಮುಖ್ಯ ಹಣಕಾಸು ಅಧಿಕಾರಿ ಇವರಿಗೆ ಅಧಿಕಾರ ನೀಡಿದೆ. ಈ ಸೌಲಭ್ಯವು 31.03.2010 ರವರೆಗೆ ಜಾರಿಯಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಷಮಾ ಗೋಡಬೋಲೆ**

ಪಿ.ಆರ್. 1204

ಸರ್ಕಾರದ ಉಪ ಕಾರ್ಯದರ್ಶಿ, ಕೆಹೆಚ್‌ಎಸ್‌ಡಿಆರ್‌ಪಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ವಿಷಯ:** ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯ ವಾಹನಗಳ ದಿನನಿತ್ಯದ ನಿರ್ವಹಣೆಗೆ ಸಾರಿಗೆ ವಿಭಾಗ, ಕೆಹೆಚ್‌ಎಸ್‌ಡಿಆರ್‌ಪಿ ಇವರಿಗೆ ರೂ. 25,000/– ಮುಂಗಡ ಹಣ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ: ಹೆಚ್‌ಎಫ್‌ಡಬ್ಲ್ಯೂ/ಕೆಹೆಚ್‌ಎಸ್‌ಡಿಆರ್‌ಪಿ/ಎಸ್‌ಇಸಿಟಿ–1/2006 ದಿನಾಂಕ:30.12.2006

2. ಸರ್ಕಾರದ ಆದೇಶ ಸಂ: ಹೆಚ್‌ಎಫ್‌ಡಬ್ಲ್ಯೂ/ಕೆಹೆಚ್‌ಎಸ್‌ಡಿಆರ್‌ಪಿ/ಎಸ್‌ಇಸಿಟಿ–23/2007 ದಿನಾಂಕ:31.07.2007
3. ಸರ್ಕಾರದ ಆದೇಶ ಸಂ: ಹೆಚ್‌ಎಫ್‌ಡಬ್ಲ್ಯೂ/ಕೆಹೆಚ್‌ಎಸ್‌ಡಿಆರ್‌ಪಿ/ಎಸ್‌ಇಸಿಟಿ–23/2007 ದಿನಾಂಕ:16.08.2007
4. ಸರ್ಕಾರದ ಆದೇಶ ಸಂ: ಹೆಚ್‌ಎಫ್‌ಡಬ್ಲ್ಯೂ/ಕೆಹೆಚ್‌ಎಸ್‌ಡಿಆರ್‌ಪಿ/ಎಸ್‌ಇಸಿಟಿ–23/2007 ದಿನಾಂಕ:29.04.2008

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ವಿಶ್ವಬ್ಯಾಂಕ್ ನೆರವಿನ ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯನ್ನು ಪ್ರಾರಂಭಿಸಲು ಮಂಜೂರಾತಿ ನೀಡಲಾಗಿದೆ. ಮೇಲೆ (2) ರಿಂದ (4) ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ ಯೋಜನಾ ಕಛೇರಿಯ ವಾಹನಗಳ ನಿರ್ವಹಣೆ ಹಾಗೂ ದುರಸ್ತಿಯ ವೆಚ್ಚಗಳನ್ನು ಭರಿಸಲು ಒಂದು ಬಾರಿಗೆ ರೂ. 25,000.00 ಗಳ ಮುಂಗಡ ಹಣವನ್ನು ಸಾರಿಗೆ ವಿಭಾಗ, ಕೆಹೆಚ್‌ಎಸ್‌ಡಿಆರ್‌ಪಿ ಇವರಿಗೆ ನೀಡಲು ಹಿಂದಿನ ವರ್ಷಗಳಲ್ಲಿ ಮಂಜೂರಾತಿ ನೀಡಲಾಗಿದೆ. ಸದರಿ ಸೌಲಭ್ಯವನ್ನು 2009–10ನೇ ಸಾಲಿನಲ್ಲಿ ಮುಂದುವರಿಸಲು ಪ್ರಸ್ತಾಪಿಸಲಾಗಿದೆ.

ಆದ್ದರಿಂದ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಎಫ್‌ಡಬ್ಲ್ಯೂ(ಪಿಆರ್) 63(ಎ) ಡಬ್ಲ್ಯೂಬಿಎ 2009, ಬೆಂಗಳೂರು, ದಿನಾಂಕ: 21ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನಾ ಕಛೇರಿಯ ವಾಹನಗಳ ದಿನನಿತ್ಯದ ನಿರ್ವಹಣೆ ಮತ್ತು ದುರಸ್ತಿ ವೆಚ್ಚಗಳನ್ನು ಭರಿಸಲು 2009–10ನೇ ಸಾಲಿನಲ್ಲಿ ರೂ.25,000.00 (ಇಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಮುಂಗಡ ಹಣವಾಗಿ ಸಾರಿಗೆ ವಿಭಾಗ, ಕೆಹೆಚ್‌ಎಸ್‌ಡಿಆರ್‌ಪಿ ಇವರಿಗೆ ಒದಗಿಸಲು ಮಂಜೂರಾತಿ ನೀಡಿದೆ.

ಈ ಮೊತ್ತವನ್ನು ಲೆಕ್ಕ ಶಿರ್ಷಿಕೆ "2210–06–800–0–84 (ಯೋ) 195" (ಸಾರಿಗೆ ವೆಚ್ಚ) ಅಡಿಯಲ್ಲಿ ಎ.ಸಿ. ಬಿಲ್ ಮೂಲಕ ಖಜಾನೆಯಿಂದ ಸೆಳೆಯಲು ಯೋಜನಾ ಕಛೇರಿಯ ಮುಖ್ಯ ಹಣಕಾಸು ಅಧಿಕಾರಿ ಇವರಿಗೆ ಅಧಿಕಾರ ನೀಡಿದೆ. ಈ ಸೌಲಭ್ಯವು 31.03.2010 ರವರೆಗೆ ಜಾರಿಯಲ್ಲಿರುತ್ತದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ ಅಡಿಯಲ್ಲಿ 2009–10ನೇ ಸಾಲಿನಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಷಮಾ ಗೋಡಬೋಲೆ**

ಪಿ.ಆರ್. 1205

ಸರ್ಕಾರದ ಉಪ ಕಾರ್ಯದರ್ಶಿ, ಕೆಹೆಚ್‌ಎಸ್‌ಡಿಆರ್‌ಪಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ವಿಷಯ:** ಡಾ. ಹೆಚ್. ನಾಗರಾಜು, ವೈದ್ಯರು ದರ್ಜೆ–2 (ಅ), ಸರ್ಕಾರಿ ಆಯುರ್ವೇದ ಆಸ್ಪತ್ರೆ, ನಿಂಬೆಗುಂದಿ, ಶಿವಮೊಗ್ಗ ಜಿಲ್ಲೆ ಇವರು ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿ ಆಗಿರುವುದಕ್ಕೆ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ಬಗ್ಗೆ.

**ಓದಲಾಗಿದೆ:** 1. ಕಾರಣ ಕೇಳುವ ನೋಟಿಸ್ ಸಂಖ್ಯೆ : ಆಕುಕ 199 ಪಿಐಎಂ 2007, ದಿನಾಂಕ: 03.10.2007
2. ಆಪಾದಿತರ ಹೇಳಿಕೆ ದಿನಾಂಕ : 08.01.2008.
3. ಸರ್ಕಾರದ ಆದೇಶ ಸಂಖ್ಯೆ: ಆಕುಕ 199 ಪಿಐಎಂ 2007, ದಿನಾಂಕ: 11.04.2008
4. ವಿಚಾರಣಾಧಿಕಾರಿಯವರ ವರದಿ ದಿನಾಂಕ: 18.11.2008
5. ಎರಡನೇ ಕಾರಣ ಕೇಳುವ ಸೂಚನಾ ಪತ್ರ ಸಂಖ್ಯೆ: ಆಕುಕ 199 ಪಿಐಎಂ 2007, ದಿನಾಂಕ:26.12.2008
6. ಡಾ: ಹೆಚ್. ನಾಗರಾಜು ಇವರ ಹೇಳಿಕೆ ದಿನಾಂಕ: 05.03.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1) ರಲ್ಲಿ, ಡಾ: ಹೆಚ್. ನಾಗರಾಜು, ವೈದ್ಯರು ದರ್ಜೆ–2 (ಅ), ಸರ್ಕಾರಿ ಆಯುರ್ವೇದ ಆಸ್ಪತ್ರೆ, ನಿಂಬೆಗುಂದಿ, ಶಿವಮೊಗ್ಗ ಜಿಲ್ಲೆ ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಇವರು ತಮ್ಮ ಕರ್ತವ್ಯದಲ್ಲಿ ಅಸಮರ್ಪಕತೆ, ಅಸಡ್ಡೆ ಮತ್ತು ನಿರ್ಲಕ್ಷತೆ ಹಾಗೂ ಸಾರ್ವಜನಿಕರಿಗೆ ತೊಂದರೆಯನ್ನು ಉಂಟು ಮಾಡಿರುವ ಬಗ್ಗೆ ಮತ್ತು ಸದರಿಯವರು ಸುದೀರ್ಘ ಅವಧಿಗೆ ಅನಧಿಕೃತ ಗೈರುಹಾಜರಿ ಆಗಿರುವ ಬಗ್ಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11 ರಡಿಯಲ್ಲಿ ಕಾರಣ ಕೇಳುವ ಸೂಚನಾ ಪತ್ರವನ್ನು ನೀಡಿ ಅವರಿಂದ ವಿವರಣೆಯನ್ನು ಕೋರಲಾಯಿತು.

ಮೇಲೆ ಓದಲಾದ ಕ್ರ.ಸಂ. (2) ರಲ್ಲಿ, ಡಾ: ಹೆಚ್. ನಾಗರಾಜು, ವೈದ್ಯರು ದರ್ಜೆ–2 (ಅ), ಸರ್ಕಾರಿ ಆಯುರ್ವೇದ ಆಸ್ಪತ್ರೆ, ನಿಂಬೆಗುಂದಿ, ಶಿವಮೊಗ್ಗ ಜಿಲ್ಲೆ ಇವರು ಲಿಖಿತ ಹೇಳಿಕೆಯನ್ನು ಸಲ್ಲಿಸಿ ಆಪಾದನೆಗಳನ್ನು ತಿರಸ್ಕರಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರಲ್ಲಿ ಸದರಿ ಪ್ರಕರಣದಲ್ಲಿ ಈ ಕೆಳಕಂಡ ಆಪಾದನೆಯ ಬಗ್ಗೆ ಸತ್ಯಾಸತ್ಯತೆಯನ್ನು ತಿಳಿಯುವ ಸಲುವಾಗಿ ಇಲಾಖಾ ವಿಚಾರಣೆಯನ್ನು ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 11(2) ರನ್ವಯ ಶ್ರೀ ವಿಜಯಮೂರ್ತಿ, ನಿವೃತ್ತ ನಿಬಂಧಕರು, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಸದರಿ ನಿಯಮಾವಳಿಗಳ ನಿಯಮ 11(5)(ಸಿ) ರನ್ವಯ ಆಯುಷ್ ಇಲಾಖೆಯ ಮುಖ್ಯ ಆಡಳಿತಾಧಿಕಾರಿಯವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶಿಸಲಾಗಿರುತ್ತದೆ.

**ಆರೋಪ:**

ಡಾ: ಹೆಚ್. ನಾಗರಾಜು, ವೈದ್ಯರು ದರ್ಜೆ–2, ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ, ನಿಂಬೆಗುಂದಿ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ ಆದ ನೀವು ಕೆಲಸ ಮಾಡುತ್ತಿದ್ದಾಗ ನಿಮ್ಮ ಅಸಮರ್ಪಕ ಕರ್ತವ್ಯ ನಿರ್ವಹಣೆ, ನಿರ್ಲಕ್ಷತೆಯ ಕಾರಣದಿಂದಾಗಿ ಶಿವಮೊಗ್ಗ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಆದೇಶ ದಿನಾಂಕ: 08.07.1999 ರನ್ವಯ ದಿನಾಂಕ: 08.07.1999 ರ ಅಪರಾಹ್ನ ಕರ್ತವ್ಯದಿಂದ ವಿಮುಕ್ತಿಗೊಳಿಸಿ, ನಿರ್ದೇಶನಾಲಯದಲ್ಲಿ ವರದಿ ಮಾಡಿಕೊಂಡಿದ್ದು, ತದನಂತರ ಮರುನೇಮಕಾತಿ ಆದೇಶ ಬರುವವರೆಗೆ ತಾತ್ಕಾಲಿಕವಾಗಿ ಕೆಲಸ ನಿರ್ವಹಿಸಲು ನಿರ್ದೇಶನಾಲಯದ ಅಧಿಕೃತ ಜ್ಞಾಪನ ದಿನಾಂಕ: 30.07.1999 ರಂದು ಶ್ರೀ ಜಯಚಾಮರಾಜೇಂದ್ರ ಭಾರತೀಯ ವೈದ್ಯಕೀಯ ಸಂಸ್ಥೆಗೆ ನೇಮಕ ಮಾಡಿದ್ದರೂ ಸಹ ಅನಧಿಕೃತವಾಗಿ ಗೈರುಹಾಜರಾಗಿರುತ್ತೀರಿ. ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 441 ಪಿಐಎಂ 1999. ದಿನಾಂಕ: 04.05.2000 ರಲ್ಲಿ ನಿಮ್ಮನ್ನು ಚಿಕ್ಕಮಗಳೂರು ಜಿಲ್ಲೆ, ತರೀಕೆರೆ ತಾಲ್ಲೂಕು, ಹಾದಿಕೆರೆಯಲ್ಲಿರುವ ಸರ್ಕಾರಿ ಆಯುರ್ವೇದ ಚಿಕಿತ್ಸಾಲಯಕ್ಕೆ ವರ್ಗಾವಣೆ ಮಾಡಿದ್ದರೂ, ಸದರಿ ಆದೇಶದಂತೆ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳದೇ ಅನಧಿಕೃತ ಗೈರುಹಾಜರಿಯನ್ನು ಮುಂದುವರೆಸಿದ್ದು, ನಿರ್ದೇಶನಾಲಯದಿಂದ ದಿನಾಂಕ: 25.08.2000, 26.02.2001 ರಂದು ನೋಟೀಸ್‌ನ್ನು ನೋಂದಾಯಿತ ಅಂಚೆ ಮೂಲಕ ಕಳುಹಿಸಿದ್ದರೂ ದಿನಾಂಕ: 04.03.2001 ರಂದು ನಿರ್ದೇಶನಾಲಯದಲ್ಲಿ ವರದಿ ಮಾಡಿಕೊಂಡು ಪುನಃ ಅನಧಿಕೃತ ಗೈರುಹಾಜರಿಯನ್ನು ಮುಂದುವರೆಸಿರುತ್ತೀರಿ. ದಿನಾಂಕ: 16.04.2004 ರಂದು ನಿರ್ದೇಶನಾಲಯದಿಂದ ತಿಳುವಳಿಕೆಯ ನೋಟೀಸ್‌ನ್ನು ನೋದಾಯಿತ ಅಂಚೆ ಮೂಲಕ ಕಳುಹಿಸಿದಾಗ ದಿನಾಂಕ: 27.05.2004 ರಂದು ಇಲಾಖಾ ಮುಖ್ಯಸ್ಥರ ಬಳಿ ಕರ್ತವ್ಯಕ್ಕೆ ವರದಿ ಮಾಡಿಕೊಂಡಿದ್ದು, ಮುಂದಿನ ನೇಮಕಾತಿ ಆದೇಶ ಬರುವವರೆಗೆ ತಾತ್ಕಾಲಿಕವಾಗಿ ಕರ್ತವ್ಯ ನಿರ್ವಹಿಸಲು ದಿನಾಂಕ: 01.06.2004 ರಂದು ಮಾಡಿದ್ದರೂ, ಪುನಃ ಅನಧಿಕೃತ ಗೈರು ಹಾಜರಿಯನ್ನು ಮುಂದುವರಿಸುತ್ತೀರಿ.

ದಿನಾಂಕ: 30.07.1999 ರಿಂದಲೂ ಅನಧಿಕೃತ ಗೈರುಹಾಜರಿಯು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 108 ರ ಮೇರೆಗೆ 4 ತಿಂಗಳಿಗಿಂತ ಮೀರಿ ಅನಧಿಕೃತ ಗೈರುಹಾಜರಿಯಾಗಿರುವುದರಿಂದ ಮತ್ತು ನೀವು ಕೆಲಸದಲ್ಲಿ ಅಸಡ್ಡೆ, ನಿರ್ಲಕ್ಷತೆಯಿಂದ ಹಾಗೂ ದೀರ್ಘ ಅನಧಿಕೃತ ಗೈರು ಹಾಜರಿ ಆಗಿರುತ್ತೀರಿ. ಆ ಎಲ್ಲಾ ನಿಮ್ಮ ವರ್ತನೆಗಳು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966 ರ ನಿಯಮ (3)(i) ಉಪನಿಯಮಗಳನ್ನು ಉಲ್ಲಂಘಿಸಿರುವುದರಿಂದ, ಗಂಭೀರ ಸ್ವರೂಪದ ದುರ್ನಡತೆ ಮಾಡಿರುತ್ತೀರಿ. ಆದ್ದರಿಂದ ಈ ಆರೋಪ

**ಆಪಾದಿತರ ಪರವಾಗಿ ಹೇಳಿಕೆ:**

ವಿಚಾರಣಾ ವೇಳೆಯಲ್ಲಿ ವಿಚಾರಣಾಧಿಕಾರಿಯವರ ಮುಂದೆ ಆಪಾದಿತ ನೌಕರರು ಹಾಜರಾಗದೇ ಅವರ ಪರವಾಗಿ ಅವರ ಮಗಳು ಶ್ವೇತಾ ಎಂಬುವರು ಹಾಜರಾಗಿ ಈ ಕೆಳಕಂಡಂತೆ ತಮ್ಮ ಹೇಳಿಕೆಯನ್ನು ಮಂಡಿಸಿರುತ್ತಾರೆ.

ಡಾ: ಹೆಚ್.ನಾಗರಾಜು ಇವರು ನನ್ನ ತಂದೆಯಾಗಿದ್ದು, ಅವರು ಸರ್ಕಾರಿ ಆಯುರ್ವೇದ ಚಿಕಿತ್ಸಾಲಯ, ನಿಂಬೆಗುಂದಿ, ಭದ್ರಾವತಿ ತಾಲ್ಲೂಕು ಇಲ್ಲಿ ಕೆಲಸ ಮಾಡುತ್ತಿದ್ದರು. ನಂತರ ಇವರಿಗೆ ಉಪಾಧ್ಯಕ್ಷರು, ತಾಲ್ಲೂಕು ಪಂಚಾಯತ್, ಆನವೇರಿ ಕ್ಷೇತ್ರ, ಭದ್ರಾವತಿ ಇವರಿಂದ ಮಾನಸಿಕವಾಗಿ ಹಿಂಸೆಯಾಗುತ್ತಿದೆಯೆಂದು ಮನೆಯಲ್ಲಿ ಹೇಳುತ್ತಿದ್ದರು. ಆನಂತರ, ಇವರ ಮೇಲೆ ವಿಚಾರಣೆ ನಡೆಯುತ್ತಿರುವ ವಿಷಯವು ನಮಗೆ ತಿಳಿದಾಗ ಈ ಬಗ್ಗೆ ವಿಚಾರಿಸಿ ಅವರ ಮನೋಸ್ಥಿತಿ ಬಗ್ಗೆ ಪರಿಶೀಲಿಸಲು ಸ್ಪಂದನಾ ಆಸ್ಪತ್ರೆ, ರಾಜಾಜಿನಗರದಲ್ಲಿ ತೋರಿಸಲಾಗಿ, ಅವರು ಸಿಜೋಫೆನಿಯಾ ಕಾಯಿಲೆಯಿಂದ ಬಳಲುತ್ತಿದ್ದು, ತಕ್ಷಣಕ್ಕೆ ತಮ್ಮ ಕರ್ತವ್ಯವನ್ನು ನಿರ್ವಹಿಸಲು ಅಸಾಧ್ಯವಾಗುವುದೆಂದು ಇವರಿಗೆ ಚಿಕಿತ್ಸೆ ನೀಡುತ್ತಿರುವ ಡಾ: ಶ್ರೀನಿವಾಸ್ ರವರು ತಿಳಿಸಿರುತ್ತಾರೆ. ನನ್ನ ತಂದೆಯವರ ಮಾನಸಿಕ ಸ್ಥಿತಿಯನ್ನು ಪರಿಗಣಿಸಿ ಇಲಾಖಾ ವಿಚಾರಣೆಯನ್ನು ಕೈಬಿಟ್ಟು The persons with (Equal opportunities), protection of Rights and Full Participation Act, 1995 ಇದರ 47ನೇ ಪ್ರಕರಣದ ಅನ್ವಯ ಕ್ರಮ ಜರುಗಿಸುವಂತೆ ಸರ್ಕಾರಕ್ಕೆ ಸಲ್ಲಿಸಲಾಗಿತ್ತು. ಪ್ರಸ್ತುತ ವಿಷಯವು ವಿಚಾರಣೆಯಲ್ಲಿರುವುದರಿಂದ, ವಿಚಾರಣಾಧಿಕಾರಿಗಳ ಮುಂದೆ ಮನವಿ ಸಲ್ಲಿಸಲು ಸರ್ಕಾರವು ತಮ್ಮ ಪತ್ರದಲ್ಲಿ ತಿಳಿಸಿರುತ್ತಾರೆ.

ನನ್ನ ತಂದೆಗೆ ಚಿಕಿತ್ಸೆ ನೀಡುತ್ತಿರುವ ವೈದ್ಯರು ನೀಡಿರುವ ಪ್ರಮಾಣ ಪತ್ರ ದಿನಾಂಕ: 12.06.2008 ಹಾಗೂ ನಾನು ಸರ್ಕಾರಕ್ಕೆ ನೀಡಿರುವ ಮನವಿ ದಿನಾಂಕ: 18.08.2008 ಮತ್ತು ಸರ್ಕಾರದಿಂದ ನನಗೆ ನೀಡಿರುವ ಪತ್ರ ದಿನಾಂಕ: 12.09.2008 ಇವುಗಳನ್ನು ಹಾಜರುಪಡಿಸಿರುತ್ತೇನೆ. ವಿಷಯವನ್ನು ಪರಿಗಣಿಸಿ ನನ್ನ ತಂದೆಯವರಿಗೆ ಕಾನೂನು ರೀತಿಯ ಬರಬೇಕಾದ ಸಲವತ್ತನ್ನು ಒದಗಿಸಿ ಕೊಟ್ಟು ಅವರು ಯಾವುದೇ ದುರ್ನಡತೆ ಎಸಗಿಲ್ಲ ಎಂಬುದನ್ನು ವರದಿ ನೀಡಲು ಕೋರಲಾಗಿದೆ.

ವಿಚಾರಣಾಧಿಕಾರಿಯವರ ಅಪಾದಿತ ನೌಕರರ ವಿರುದ್ಧದ ಅಪಾದನೆಯನ್ನು ಮತ್ತು ಅವರ ಪರವಾಗಿ ನೀಡಿರುವ ಅವರ ಮಗಳ ಹೇಳಿಕೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ತಮ್ಮ ವಿಚಾರಣಾವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

"According to the Section 47 of the Act, no establishment shall dispense with, or reduce in rank, an employee who acquires a disability during his service. Therefore, it is clear that to come within the purview of this Section, the disability should have been acquired during the service of the D.O. As at present, the medical certificate produced is silent on this aspect. Further, it is outside the scope of this Enquiry to give any finding on this point. The provisions of the Act make it amply clear that it is for the Government to consider the claim of the D.O. according to the Act.

The charge is very clear that the D.O. has remained unauthorized absent from the after noon of 08.07.1999. Further, it is also stated in the charge that the D.O. has written letters giving explanations for his absence, which are not satisfactory. Therefore, it has to be presumed that the D.O. was, at that point of time, in a position to put forth his case before the authorities. It is not his case that he has submitted any application seeking any kind of leave it is aso not his case that he was suffering from any mental illness, as sought to be made out now. Further, there is not much force in the contention that conducting an Enquiry against a person who is suffering from disability of mental illness is violative of Section 47 of the Act and also amounts of violation of human rights as the D.O. is not able to understand the proceedings. All that can be said is that the D.O. has appeared in the Enquiry and has denied the charges framed against him, on 04.06.2008. Again he has filed his written arguments in the Enquiry". Further, the charge relates to past conduct and the same is based on documentary evidence, the veracity of which is not questioned by the D.O. at any point of time. Further, it is seen that the D.O. has furnished his reply to Ex. p 3 regarding the unauthorized absence, and the same has been found to be irrelevant. Further the D.O. has furnished his reply dated 28.04.2004 to Ex. P 5 and this reply has also been found to be irrelevant. Thus, it is seen that the D.O. has responded by giving replies to his superior authorities. No such contention regarding his mental illness appears to have been taken up, at any point of time earlier.

Thus, on a thorough consideration of the entire oral and documentary evidence and the arguments submitted by the concerned. I hold that the charge framed against the delinquent official Dr. H. Nagaraju is proved".

ಮೇಲೆ ಓದಲಾದ ಕ್ರಮ ಸಂಖ್ಯೆ(5)ರಲ್ಲಿ ಆಪಾದಿತ ನೌಕರರಿಗೆ ದಂಡನೆಯನ್ನು ವಿಧಿಸುವ ಪೂರ್ವದಲ್ಲಿ ವಿಚಾರಣಾ ವರದಿಯನ್ನು ಲಗತ್ತಿಸಿ ಕಳುಹಿಸಿ ವಿಚಾರಣಾ ವರದಿಯ ಬಗ್ಗೆ, ಅವರ ಹೇಳಿಕೆಯನ್ನು ಕೋರಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರಲ್ಲಿ ಅಪಾದಿತ ನೌಕರರು ಈ ಕೆಳಕಂಡಂತೆ ತಮ್ಮ ಹೇಳಿಕೆಯನ್ನು ನೀಡಿರುತ್ತಾರೆ:–

"ವಿಚಾರಣೆಯನ್ನು ನಡೆಸಿದ ಅಧಿಕಾರಿಗಳು ವಿಷಯವನ್ನು ಪುನಃ ಮಾರ್ಪಾಡಿಸಿದ್ದ ತಿದ್ದುಪಡಿಯೊಂದಿಗೆ ನನಗೆ ಮುಂಬಡ್ತಿ ನಿಯಮದಂತೆ ಹೊಸದಾಗಿ ಸೃಷ್ಟಿಸಿದ ಖಾಲಿ ಇರುವ ಹುದ್ದೆಗೆ ನಿಯೋಜನೆ ಮತ್ತು ವರ್ಗಾವಣೆ ಕೋರಿ ಸಲ್ಲಿಸಿರುತ್ತೇನೆ. ನಾನು ಕರ್ತವ್ಯವನ್ನು ನಿರ್ವಹಿಸಿದ ಎಸ್.ಜೆ.ಐ.ಎಂ. ಬೆಂಗಳೂರು ಇಲ್ಲಿ ಹೊಸದಾಗಿ ಸೃಷ್ಟಿಸಿದ ಹುದ್ದೆಗೆ ಮುಂಬಡ್ತಿ ಅಥವಾ ಶಿವಮೊಗ್ಗ ಜಿಲ್ಲೆಯ ಸರ್ಕಾರಿ ಆಯುರ್ವೇದ ಆಸ್ಪತ್ರೆ ಜಿಲ್ಲಾ ಮಟ್ಟದ ಆಸ್ಪತ್ರೆಯಲ್ಲಿ ಹಾಜರಿ ಮತ್ತು ಕರ್ತವ್ಯ ಪ್ರಾಚಾರ್ಯರಿಂದ ನಿಯಂತ್ರಣ ಮಾಡದೇ, ನಿಯೋಜನೆ ಕೋರಿ ವಿನಂತಿಸಿಕೊಳ್ಳುತ್ತೇನೆ. ಈ ಅವಧಿಯ ಹಾಜರಾತಿಯನ್ನು ಹೊಸದಾಗಿ ಸೃಷ್ಟಿ ಮಾಡುವ ಹುದ್ದೆಯ ಮಂಜೂರಾತಿ ಯೋಜನೆಯ ಅನುಷ್ಠಾನ ಅನುಮತಿ, ಅಂಗೀಕಾರ ಎಂದು ತಿಳಿದು ಮತ್ತು ನಿರೀಕ್ಷಣಾ ಅವಧಿ ಎಂದು ಪರಿಗಣಿಸಿ, ಉಳಿದ ಎರಡು ವರ್ಷಗಳ ಸೇವೆಯನ್ನು ಸರ್ಕಾರದಿಂದ ಆದೇಶ ಕೋರಿ ವೇತನ ಸಹಿತ ಅವಧಿ ಎಂದು ಮತ್ತು ಮಂಜೂರಾತಿಗಾಗಿ ಇತರೇ ಸೇವೆಗಳಲ್ಲಿರುವಂತೆ ಪರಿಶೀಲಿಸಿ ಈ ನನ್ನ ಮನವಿಯನ್ನು ಅಂಗೀಕರಿಸಿ ವೇತನ ಪಡೆಯಲು ಸಹಕರಿಸುತ್ತೀರೆಂದು ನಂಬಿರುತ್ತೇನೆ."

ಆಪಾದಿತ ನೌಕರರ ಮೇಲೆ ಮಾಡಿರುವ ಆಪಾದನೆ ಮತ್ತು ವಿಚಾರಣಾಧಿಕಾರಿಯವರ ವಿಚಾರಣಾ ವರದಿಯನ್ನು ಹಾಗೂ ಆಪಾದಿತ ನೌಕರರು ನೀಡಿರುವ ಅಂತಿಮ ಹೇಳಿಕೆಯನ್ನು ಸರ್ಕಾರವು ಪರಿಶೀಲಿಸಿ ಸೌಕರರು ದಿ: 08.07.1999 ರಿಂದ ಇಲ್ಲಿಯವರೆಗೂ ಸರ್ಕಾರಿ ಕೆಲಸಕ್ಕೆ ಅನಧಿಕೃತ ಗೈರುಹಾಜರಿಯಾಗಿರುವುದು, ಧೃಡಪಟ್ಟಿರುತ್ತದೆ ಮತ್ತು ವಿಚಾರಣೆಯ ಸಂದರ್ಭದಲ್ಲಿ ಇವರಿಗೆ ಮಾನಸಿಕ ಅಸ್ವಸ್ಥತೆ (Mental illness) ಇತ್ತು ಎಂಬ ವಾದವನ್ನು ವಿಚಾರಣಾಧಿಕಾರಿಗಳು ಒಪ್ಪದೆ, ಈ ಅಂಶವನ್ನು ವಿಶ್ಲೇಷಿಸಿ, ಇವರ ಮೇಲಿನ ಆರೋಪವು ಸಾಬೀತಾಗಿದೆಯೆಂದು ವರದಿ ಮಾಡಿರುತ್ತಾರೆ. ಅಲ್ಲದೇ, ಎರಡನೇ ಕಾರಣ ಕೇಳುವ ಸೂಚನಾ ಪತ್ರಕ್ಕೆ ಸ್ವತಃ ಅಪಾದಿತ ನೌಕರರೇ ಉತ್ತರ ನೀಡಿರುವುದನ್ನು ಅವಲೋಕಿಸಿದಾಗ, ಇವರಿಗೆ ಮಾನಸಿಕ ಅಸ್ವಸ್ಥತೆಯನ್ನು ಇತ್ತು ಎಂಬುವುದು ಈಗಲೂ ಧೃಡಪಡುವುದಿಲ್ಲ ಮತ್ತು ಇಂತಹ ಪ್ರಕರಣಗಳಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಮೆಹಮೂದ್ ಕೆ. ವಿರುದ್ಧ ರಾಜ್ಯ ಮತ್ತು ಇತರರು ಪ್ರಕರಣದಲ್ಲಿ (1996) ಕೆ.ಎಸ್.ಎಲ್.ಜಿ 1016 ಅರ್ಜಿ ಸಂಖ್ಯೆ: 3351/94 ರಲ್ಲಿ ದಿನಾಂಕ: 11.09.1996 ರಂದು ನೀಡಿದ ತೀರ್ಪಿನ ಉದ್ಧೃತ ಭಾಗದಲ್ಲಿ ಈ ಕೆಳಕಂಡಂತಿದೆ.

"We are of the view that the relationship between the Government employee nd the State involves mutual rights and obligations. The rights cannot vest in the Government employee without a corresponding obligation to attend to the duties. The service under the State Government is not open house for anybody to walk in and get out as he pleases"

ಮೇಲಿನ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಸದರಿಯವರ ವಿರುದ್ಧ ಮಾಡಲಾದ ಕರ್ತವ್ಯದಲ್ಲಿ ಅಸಮರ್ಪಕತೆ ಹಾಗೂ ಅಸಡ್ಡೆ ಮತ್ತು ನಿರ್ಲಕ್ಷತೆ ಹಾಗೂ ಸಾರ್ವಜನಿಕರಿಗೆ ತೊಂದರೆಯನ್ನು ಉಂಟು ಮಾಡಿರುವುದಲ್ಲದೇ ಸದರಿಯವರ ಸುದೀರ್ಘವಾಗಿ ಕಛೇರಿ ಕೆಲಸಕ್ಕೆ ಅನಧಿಕೃತ ಗೈರು ಹಾಜರಿ ಆಗಿರುವ ಆರೋಪವು ನಿಸ್ಸಂಶಯವಾಗಿ ಸಾಬೀತು ಆಗಿರುವ ಕಾರಣ ಡಾ: ಹೆಚ್. ನಾಗರಾಜ್, ವೈದ್ಯರ ದರ್ಜೆ –2 (ಆಯುರ್ವೇದ) ಇವರನ್ನು ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮಗಳ, ನಿಯಮ 8 (vi)ರನ್ವಯ ಸರ್ಕಾರದ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 199 ಪಿಐಎಂ 2007, ಬೆಂಗಳೂರು, ದಿನಾಂಕ: 24ನೇ ಏಪ್ರಿಲ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಡಾ: ಹೆಚ್.ನಾಗರಾಜ್, ವೈದ್ಯರ ದರ್ಜೆ–2, (ಆಯುರ್ವೇದ) ಸರ್ಕಾರಿ ಆರ್ಯವೇದ ಚಿಕಿತ್ಸಾಲಯ, ನಿಂಬೆಗುಂದಿ, ಶಿವಮೊಗ್ಗ ಜಿಲ್ಲೆ, ಇವರನ್ನು ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 8 (vi)ರನ್ವಯ ಸರ್ಕಾರದ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಮಹಾಲಕ್ಷ್ಮಮ್ಮ**

ಪಿ.ಆರ್. 1206

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯದ ಉದ್ದಗಲಕ್ಕೂ ಕೈಗಾರಿಕಾಭಿವೃದ್ಧಿಗೆ ಸುವರ್ಣ ಕರ್ನಾಟಕ ಅಭಿವೃದ್ಧಿ ಕಾರಿಡಾರ್ ಯೋಜನೆ ಮತ್ತು ಕೈಗಾರಿಕಾ ಕಾರಿಡಾರ್ ಯೋಜನೆಯನ್ನು ಜಾರಿಗೊಳಿಸಲು ಜಿಲ್ಲಾ ಮಟ್ಟದ ಕಾರ್ಯಪಡೆ ಸಮಿತಿ ರಚಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಸಿಐ 194 ಎಸ್‌ಪಿಐ 2008 ದಿನಾಂಕ 2.8.2008.

2. ಮುಖ್ಯ ಕಾರ್ಯನಿರ್ವಹಣಾಧಿಕಾರಿ ಹಾಗೂ ಕಾರ್ಯನಿರ್ವಾಹಕ ಸದಸ್ಯರು, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ರವರ ಪತ್ರ ಸಂಖ್ಯೆ: ಕೆ.ಐ.ಎ.ಡಿ.ಬಿ./ಕೇಂ.ಕ/ಭೂಸ್ವಾ/1976/13082 ದಿನಾಂಕ 13.02.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ.1ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯದ ಉದ್ದಗಲಕ್ಕೂ ಕೈಗಾರಿಕಾಭಿವೃದ್ಧಿಗೆ ಸುವರ್ಣ ಕರ್ನಾಟಕ ಅಭಿವೃದ್ಧಿ ಕಾರಿಡಾರ್ ಯೋಜನೆ ಮತ್ತು ಕೈಗಾರಿಕಾ ಕಾರಿಡಾರ್ ಯೋಜನೆಯನ್ನು ಈ ಕೆಳಕಂಡ ಸ್ಥಳಗಳ ಮತ್ತು ಅವುಗಳ ನಡುವೆ ಬರುವ ಪ್ರದೇಶಗಳಲ್ಲಿ ಅನುಷ್ಠಾನಗೊಳಿಸಲು ತೀರ್ಮಾನಿಸಿ ಯೋಜನೆ ಅನುಷ್ಠಾನಕ್ಕೆ ನುರಿತ ತಜ್ಞ ಸಂಸ್ಥೆಯನ್ನು ಗುರುತಿಸಿ ಅವರಿಂದ ಸಾಧ್ಯತಾ ವರದಿಯನ್ನು ತಯಾರಿಸಲು ಅನುವಾಗುವಂತೆ ಅಧಿಕಾರಿಗಳನ್ನೊಳಗೊಂಡ ಕಾರ್ಯಪಡೆ ಸಮಿತಿ ರಚಿಸಲಾಗಿದೆ.

1. ಬೆಂಗಳೂರು–ಬೆಳಗಾವಿ ವಯಾ ದಾವಣಗೆರೆ, ಹುಬ್ಬಳ್ಳಿ ಕಾರಿಡಾರ್
2. ತುಮಕೂರು–ಹೊನ್ನಾವರ ವಯಾ ಶಿವಮೊಗ್ಗ
3. ಚಿತ್ರದುರ್ಗ–ಮಂಗಳೂರು ವಯಾ ಶಿವಮೊಗ್ಗ–ಉಡುಪಿ
4. ಬೀದರ್–ಬೆಂಗಳೂರು ವಯಾ ಚಿತ್ರದುರ್ಗ

ಈ ಹಿನ್ನೆಲೆಯಲ್ಲಿ ಕರ್ನಾಟಕದ ಮೇಲ್ಕಂಡ ಸ್ಥಳಗಳಲ್ಲಿ ಕೈಗಾರಿಕಾ ಕಾರಿಡಾರ್ ಯೋಜನೆಯನ್ನು ಅನುಷ್ಠಾನಗೊಳಿಸಲು ಜಿಲ್ಲಾಧಿಕಾರಿಗಳು ಗುರುತಿಸಿ ವರದಿ ಮಾಡಿರುತ್ತಾರೆ.

ಗುರುತಿಸಲಾದ ಜಮೀನಿನಲ್ಲಿ ಕೈಗಾರಿಕಾ ಪ್ರದೇಶ ಅಭಿವೃದ್ಧಿಪಡಿಸುವ ಬಗ್ಗೆ ಜಿಲ್ಲಾಮಟ್ಟದಲ್ಲಿ ಕಾರ್ಯಪಡೆ ಸಮಿತಿ ಮೇಲೆ ಓದಲಾದ ಕ್ರ.ಸಂ.2ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಹಾಗೂ ಕಾರ್ಯನಿರ್ವಾಹಕ ಸದಸ್ಯರು, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ರವರು ಕೋರಿರುತ್ತಾರೆ.

ಆದುದರಿಂದ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಸಿಐ 232 ಎಸ್‌ಪಿಐ 2008, ಬೆಂಗಳೂರು, ದಿನಾಂಕ: 24ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ, ಸುವರ್ಣ ಕರ್ನಾಟಕ ಅಭಿವೃದ್ಧಿ ಕಾರಿಡಾರ್ ಯೋಜನೆ ಮತ್ತು ಕೈಗಾರಿಕಾ ಕಾರಿಡಾರ್ ಯೋಜನೆಯನ್ನು ಕಾರ್ಯಗತಗೊಳಿಸಲು ಗುರುತಿಸಲಾದ ಜಮೀನಿನಲ್ಲಿ ಕೈಗಾರಿಕಾ ಪ್ರದೇಶ ಅಭಿವೃದ್ಧಿಪಡಿಸುವ ಬಗ್ಗೆ ಜಿಲ್ಲಾ ಮಟ್ಟದಲ್ಲಿ ಈ ಕೆಳಕಂಡ ಕಾರ್ಯಪಡೆ ಸಮಿತಿಯನ್ನು ರಚಿಸಲಾಗಿದೆ:

1. ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ – ಅಧ್ಯಕ್ಷರು
2. ಜಿಲ್ಲೆಯ ನಗರ ಯೋಜನಾ ಅಧಿಕಾರಿ – ಸದಸ್ಯರು
3. ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ ಅಭಿವೃದ್ಧಿ ಅಧಿಕಾರಿ – ಸದಸ್ಯರು
4. ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ ವಿಶೇಷ ಭೂಸ್ವಾಧೀನಾಧಿಕಾರಿ – ಸದಸ್ಯರು
5. ಕೈಗಾರಿಕಾ ಸಂಘದ ಪ್ರತಿನಿಧಿ – ಸದಸ್ಯರು
6. ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ ಉಪ ಅಭಿವೃದ್ಧಿ ಅಧಿಕಾರಿ – ಸದಸ್ಯ ಕಾರ್ಯದರ್ಶಿ

ಸದರಿ ಸಮಿತಿಯು ಈ ಕೆಳಕಂಡ ಅಂಶಗಳ ಬಗ್ಗೆ ವರದಿಗಳನ್ನು ತಯಾರಿಸಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಗೆ ಸಲ್ಲಿಸುವುದು.

ಅ. ಗುರುತಿಸಲಾಗಿರುವ ಪ್ರದೇಶ ಕೈಗಾರಿಕಾ ಅಭಿವೃದ್ಧಿಗೆ ಸೂಕ್ತವೇ.

ಆ. ಪರಿಸರ ಮಾಲಿನ್ಯ.

ಇ. ಪ್ರದೇಶಕ್ಕೆ ನೀರಿನ ಸೌಕರ್ಯದ ಮೂಲಗಳು.

ಈ. ವಿದ್ಯುತ್ ಸೌಕರ್ಯ.

ಉ. ರಸ್ತೆ ಸಂಪರ್ಕ.

ಊ.ಕೈಗಾರಿಕಾ ಸ್ಥಾಪನೆಗೆ ಉದ್ದಿಮೆಗಳಿಂದ ಬೇಡಿಕೆ.

ಋ. ಯಾವ ಕೈಗಾರಿಕೆಗೆ ಉತ್ತೇಜನವಿರುತ್ತದೆ.

ಎ. ಭೂಮಾಲೀಕರ ಒಪ್ಪಿಗೆ.

**ಜಂಟಿ ನಿರ್ದೇಶಕರುಗಳಿಗೆ ಅನ್ವಯವಾಗುವ ಜಿಲ್ಲೆಗಳು**

ಬೆಂಗಳೂರು ಗ್ರಾಮಾಂತರ, ಕೋಲಾರ, ತುಮಕೂರು, ಚಿತ್ರದುರ್ಗ, ದಾವಣಗೆರೆ, ಹಾವೇರಿ, ಧಾರವಾಡ, ಬೆಳಗಾವಿ, ಬಳ್ಳಾರಿ, ರಾಯಚೂರು, ಗುಲ್ಬರ್ಗಾ, ಬೀದರ

**ಜಿಲ್ಲಾ ನಗರ ಯೋಜನಾ ಅಧಿಕಾರಿಗಳಿಗೆ ಅನ್ವಯವಾಗುವ ಜಿಲ್ಲೆಗಳು.**

ಬೆಂಗಳೂರು ಗ್ರಾಮಾಂತರ, ಕೋಲಾರ, ತುಮಕೂರು, ಚಿತ್ರದುರ್ಗ, ದಾವಣಗೆರೆ, ಹಾವೇರಿ, ಧಾರವಾಡ, ಬೆಳಗಾವಿ, ಬಳ್ಳಾರಿ, ರಾಯಚೂರು, ಗುಲ್ಬರ್ಗಾ, ಬೀದರ

**ಅಭಿವೃದ್ಧಿ ಅಧಿಕಾರಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ರವರುಗಳಿಗೆ ಅನ್ವಯವಾಗುವ ಜಿಲ್ಲೆಗಳು.**

ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ದಾವಣಗೆರೆ, ಧಾರವಾಡ, ಗುಲ್ಬರ್ಗಾ, ಹಾಸನ

**ವಿಶೇಷ ಭೂಸ್ವಾಧೀನಾಧಿಕಾರಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ರವರುಗಳಿಗೆ ಅನ್ವಯವಾಗುವ ಜಿಲ್ಲೆಗಳು.**

ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಧಾರವಾಡ, ಮಂಗಳೂರು

**ಕೈಗಾರಿಕಾ ಸಂಘದ ಪ್ರತಿನಿಧಿಗಳಿಗೆ ಅನ್ವಯವಾಗುವ ಜಿಲ್ಲೆಗಳು.**

ಬೆಂಗಳೂರು ಗ್ರಾಮಾಂತರ, ಕೋಲಾರ, ತುಮಕೂರು, ಚಿತ್ರದುರ್ಗ, ದಾವಣಗೆರೆ, ಹಾವೇರಿ, ಧಾರವಾಡ, ಬೆಳಗಾವಿ, ಬಳ್ಳಾರಿ, ರಾಯಚೂರು, ಗುಲ್ಬರ್ಗಾ, ಬೀದರ

**ಉಪ ಅಭಿವೃದ್ಧಿ ಅಧಿಕಾರಿ, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ ರವರುಗಳಿಗೆ ಅನ್ವಯವಾಗುವ ಜಿಲ್ಲೆಗಳು.**

ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕೋಲಾರ, ತುಮಕೂರು, ಚಿತ್ರದುರ್ಗ, ದಾವಣಗೆರೆ, ಹಾವೇರಿ, ಧಾರವಾಡ, ಬೆಳಗಾವಿ, ಬಳ್ಳಾರಿ, ರಾಯಚೂರು, ಗುಲ್ಬರ್ಗಾ, ಬೀದರ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1207 **ಅಪರ್ಣ ಪಾವಟೆ**

ಪೀಠಾಧಿಕಾರಿ (ತಾಂತ್ರಿಕ ಕೋಶ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬಳ್ಳಾರಿ ಇದರ ಉನ್ನತೀಕರಣ–ಹುದ್ದೆಗಳ ಸೃಜನೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ:ಆಕುಕ 264 ಎಂಪಿಎಸ್ 2009 ದಿನಾಂಕ 29–03–2008

2. ಪತ್ರ ಸಂಖ್ಯೆ:ವಿಮ್ಸ್/ಜಿಎನ್ಎಲ್– II/143/08–09 ದಿನಾಂಕ 29–12–2008.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದನ್ವಯ ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬಳ್ಳಾರಿ ಇದರ ವಾರ್ಷಿಕ ಸ್ನಾತಕ(ಎಂಬಿಬಿಎಸ್) ದಾಖಲಾತಿ ಸಾಮರ್ಥ್ಯವನ್ನು 100 (ಒಂದು ನೂರು ಮಾತ್ರ) ಸೀಟುಗಳಿಂದ 150(ಒಂದು ನೂರು ಐವತ್ತು ಮಾತ್ರ) ಸೀಟುಗಳಿಗೆ ಹೆಚ್ಚಿಸಲು ಸಂಸ್ಥೆಯನ್ನು ರೂ: 25–00(ರೂಪಾಯಿ ಇಪ್ಪತ್ತೈದು ಕೋಟಿ ಮಾತ್ರ) ಕೋಟಿಗಳ ವೆಚ್ಚದಲ್ಲಿ ಮೇಲ್ದರ್ಜೆಗೇರಿಸಲು ಮತ್ತು ಹಣವನ್ನು ಬಿಡುಗಡೆ ಮಾಡಲು ಆಡಳಿತಾತ್ಮಕ ಅನುಮೋದನೆ ನೀಡಲಾಗಿರುತ್ತದೆ.

ನಿರ್ದೇಶಕರು, ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬಳ್ಳಾರಿ ಈ ಸಂಸ್ಥೆಯಲ್ಲಿ ಎಂಬಿಬಿಎಸ್ ಕೋರ್ಸಿಗೆ 100 ವಿದ್ಯಾರ್ಥಿಗಳ ಸಾಮರ್ಥ್ಯವನ್ನು ಹೊಂದಿದ್ದು ಇದನ್ನು 150 ವಿದ್ಯಾರ್ಥಿಗಳ ಸಾಮರ್ಥ್ಯಕ್ಕೆ ಹೆಚ್ಚಿಸಲು ಸಂಬಂಧ ಕೆಳಕಂಡ ಹುದ್ದೆಗಳನ್ನು ಸೃಜಿಸಲು ಕೋರಿರುತ್ತಾರೆ.

| ಕ್ರ.ಸಂ. | ಹುದ್ದೆಯ ಹೆಸರು | ಸೃಜಿಸಬೇಕಾಗಿರುವ ಹುದ್ದೆಗಳು |
|---|---|---|
| 1 | ಪ್ರಾಧ್ಯಾಪಕರು – 1 | ಡೆಂಟಿಸ್ಟ್ರಿ ವಿಭಾಗ–1 |
| 2 | ಸಹ ಪ್ರಾಧ್ಯಾಪಕರು – 12 | 1. ಅನಾಟಮಿ–1<br>2. ಫಿಜಿಯಾಲಜಿ–1<br>3. ಪೇಥಾಲಜಿ–1<br>4. ಮೈಕ್ರೋಬಯಾಲಜಿ–1<br>5. ಫೊರೆನ್ಸಿಕ್ ಮೆಡಿಸಿನ್–1<br>6. ಜನರಲ್ ಮೆಡಿಸಿನ್–1<br>7. ಪೀಡಿಯಾಟ್ರಿಕ್ಸ್–2<br>8. ಜನರಲ್ ಸರ್ಜರಿ–1<br>9. ಆರ್ಥೋಪೆಡಿಕ್ಸ್–1<br>10. ರೇಡಿಯೋ ಡಯಾಗ್ನಿಸಿಸ್–1<br>11. ಡೆಂಟಿಸ್ಟ್ರಿ–1 |
| 3 | ಸಹಾಯಕ ಪ್ರಾಧ್ಯಾಪಕರು – 10 | 1. ಅನಾಟಮಿ–1<br>2. ಪೇಥಾಲಜಿ–1<br>3. ಫಾರ್ಮಕಾಲಜಿ–1<br>4. ಕಮ್ಯುನಿಟಿ ಮೆಡಿಸಿನ್–2<br>5. ಪೀಡಿಯಾಟ್ರಿಕ್ಸ್–1<br>6. ಆರ್ಥೋಪೆಡಿಕ್ಸ್–1<br>7. ರೇಡಿಯೋ ಡಯಾಗ್ನಿಸಿಸ್–1<br>8. ಬಯೋಫಿಜಿಕ್ಸ್–1<br>9. ಎಪಿಡೆಮೊಲಜಿಸ್ಟ್–1 |
| 4 | ಸೀನಿಯರ್ ರೆಸಿಡೆಂಟ್ – 1 | ರೇಡಿಯೋ ಡಯೋಗ್ನೊಸಿಸ್ ವಿಭಾಗ–1 |

| ಕ್ರ.ಸಂ. | ಹುದ್ದೆಯ ಹೆಸರು | ಸೃಜಿಸಬೇಕಾಗಿರುವ ಹುದ್ದೆಗಳು |
|---|---|---|
| 5 | ವಿಶೇಷ ಹುದ್ದೆಗಳು – 4 | 1. ಫಾರ್ಮಾಸ್ಯೂಟಿಕಲ್ ಕೆಮಿಸ್ಟ್–1<br>2. ಸ್ಟ್ಯಾಟಿಸ್ಟಿಯನ್–1<br>3. ಮೆಡಿಕೋ ಸೋಷಿಯಲ್ ವರ್ಕರ್ಸ್–2 |

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಗೆ ಮೇಲ್ಕಂಡ ಹುದ್ದೆಗಳನ್ನು ಸೃಜಿಸಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಶ 14 ಕೆವಿಎಂ 2009, ಬೆಂಗಳೂರು, ದಿನಾಂಕ: 25ನೇ ಏಪ್ರಿಲ್ 2009**

ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬಳ್ಳಾರಿ ಈ ಸಂಸ್ಥೆಯ ಎಂಬಿಬಿಎಸ್ ವ್ಯಾಸಂಗದ ಪ್ರವೇಶ ಸಾಮರ್ಥ್ಯವನ್ನು 100 ರಿಂದ 150 ಸೀಟುಗಳಿಗೆ ಹೆಚ್ಚಿಸಲು ಕೆಳಕಂಡ ಹುದ್ದೆಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ಸೃಜಿಸಲಾಗಿದೆ.

| ಕ್ರ.ಸಂ. | ಹುದ್ದೆಯ ಹೆಸರು | ಸೃಜಿಸಬೇಕಾಗಿರುವ ಹುದ್ದೆಗಳು |
|---|---|---|
| 1 | ಪ್ರಾದ್ಯಾಪಕರು – 1 | ಡೆಂಟಿಸ್ಟ್ರಿ ವಿಭಾಗ–1 |
| 2 | ಸಹ ಪ್ರಾದ್ಯಾಪಕರು – 12 | 1. ಅನಾಟಮಿ–1<br>2. ಫಿಜಿಯಾಲಜಿ–1<br>3. ಪೇಥಾಲಜಿ–1<br>4. ಮೈಕ್ರೋಬಯಾಲಜಿ–1<br>5. ಫೊರೆನ್ಸಿಕ್ ಮೆಡಿಸಿನ್–1<br>6. ಜನರಲ್ ಮೆಡಿಸಿನ್–1<br>7. ಪೀಡಿಯಾಟ್ರಿಕ್ಸ್–2<br>8. ಜನರಲ್ ಸರ್ಜರಿ–1<br>9. ಆರ್ಥೋಪೆಡಿಕ್ಸ್–1<br>10. ರೇಡಿಯೋ ಡಯಾಗ್ನಿಸಿಸ್–1<br>11. ಡೆಂಟಿಸ್ಟ್ರಿ–1 |
| 3 | ಸಹಾಯಕ ಪ್ರಾದ್ಯಾಪಕರು – 10 | 1. ಅನಾಟಮಿ–1<br>2. ಪೇಥಾಲಜಿ–1<br>3. ಫಾರ್ಮಕಾಲಜಿ–1<br>4. ಕಮ್ಯುನಿಟಿ ಮೆಡಿಸಿನ್–2<br>5. ಪೀಡಿಯಾಟ್ರಿಕ್ಸ್–1<br>6. ಆರ್ಥೋಪೆಡಿಕ್ಸ್–1<br>7. ರೇಡಿಯೋ ಡಯಾಗ್ನಿಸಿಸ್–1<br>8. ಬಯೋಫಿಜಿಕ್ಸ್–1<br>9. ಎಪಿಡೆಮೊಲಜಿಸ್ಟ್–1 |
| 4 | ಸೀನಿಯರ್ ರೆಸಿಡೆಂಟ್ – 1 | ರೇಡಿಯೋ ಡಯೋಗ್ನೊಸಿಸ್ ವಿಭಾಗ–1 |
| 5 | ವಿಶೇಷ ಹುದ್ದೆಗಳು – 4 | 1. ಫಾರ್ಮಾಸ್ಯೂಟಿಕಲ್ ಕೆಮಿಸ್ಟ್–1<br>2. ಸ್ಟ್ಯಾಟಿಸ್ಟಿಯನ್–1<br>3. ಮೆಡಿಕೋ ಸೋಷಿಯಲ್ ವರ್ಕರ್ಸ್–2 |

ಮೇಲ್ಕಂಡ ಹುದ್ದೆಗಳ ಸೃಜನೆಯು ಕೆಳಕಂಡ ಷರತ್ತುಗಳಿಗೊಳಪಟ್ಟಿರುತ್ತದೆ:

(1) ಈ ಹುದ್ದೆಗಳನ್ನು ನಿಯಮಾನುಸಾರ ತುಂಬತಕ್ಕದ್ದು.

(2) ಈ ಹುದ್ದೆಗಳನ್ನು ವಿವಿಧ ಹಂತಗಳಲ್ಲಿ ಅವುಗಳ ಅಗತ್ಯಕ್ಕೆ ಅನುಗುಣವಾಗಿ ಮಾತ್ರ ನೇಮಕಾತಿ ಮಾಡಿಕೊಳ್ಳತಕ್ಕದ್ದು

(3) ಈ ಹುದ್ದೆಗಳನ್ನು ಸೃಜನೆ ಮಾಡುವಾಗ ಸಂಸ್ಥೆಯು ಸಂಪನ್ಮೂಲಗಳ ಸಾಮರ್ಥ್ಯತೆಯನ್ನು ಹೆಚ್ಚಿಸಲು ಶುಲ್ಕ ಮತ್ತು ಬಳಕೆದಾರರ ಶುಲ್ಕಗಳನ್ನು ಸೂಕ್ತವಾಗಿ ಪರಿಷ್ಕರಿಸುವ ಸಾಧ್ಯತೆಗಳನ್ನು ಪರಿಶೀಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 332 ವೆಚ್ಚ 5/2009 ದಿನಾಂಕ 17.03.2009ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ. ಶ್ರೀರಾಮರೆಡ್ಡಿ**

ಪಿ.ಆರ್. 1208 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ವೈದ್ಯಕೀಯ ಶಿಕ್ಷಣ.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ಪಿ.ಎಸ್.ಇಟಕಂಪಳ್ಳಿ, ನಿರೂಪಣಾಧಿಕಾರಿ, ಸಹಾಯಕ ನಿರ್ದೇಶಕರ ಕಛೇರಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್, ಇವರ ಅಮಾನತ್ತಿನ ಅವಧಿಯನ್ನು ಕ್ರಮಬದ್ಧಗೊಳಿಸುವ ಬಗ್ಗೆ –ಆದೇಶ

**ಓದಲಾಗಿದೆ:**
1. ಜಿಲ್ಲಾಧಿಕಾರಿಗಳು, ಬೀದರ್, ಕಛೇರಿಯ ಆದೇಶ ಸಂಖ್ಯೆ ಕಂ/ಸಿಬ್ಬಂದಿ/ಸಿ.ಆರ್/ಜಿಎ/2008–09/4770 ದಿ: 16–8–2008.
2. ಜಿಲ್ಲಾಧಿಕಾರಿಗಳು, ಬೀದರ್, ಕಛೇರಿಯ ಆದೇಶ ಸಂಖ್ಯೆ ಕಂ/ಸಿಬ್ಬಂದಿ/ಸಿ.ಆರ್/ಜಿಎ/2008–09/5598 ದಿ: 16–8–2008.
3. ಸರ್ಕಾರದ ಆದೇಶ ಸಂಖ್ಯೆ : ಮಮಇ460 ಎಸ್‌ಜೆಡಿ 2008 ದಿ: 23–12–2008
4. ಸರ್ಕಾರದ ಆದೇಶ ಸಂಖ್ಯೆ : ಮಮಇ460 ಎಸ್‌ಜೆಡಿ 2008 (ಭಾಗ–1) ದಿ: 03–01–2009
5. ಸರ್ಕಾರದ ಆದೇಶ ಸಂಖ್ಯೆ : ಮಮಇ460 ಎಸ್‌ಜೆಡಿ 2008 (ಭಾಗ–1) ದಿ: 18–03–2009
6. ಶ್ರೀ ಪಿ.ಎಸ್.ಇಟಕಂಪಳ್ಳಿ, ನಿರೂಪಣಾಧಿಕಾರಿಗಳು, ಸಹಾಯಕ ನಿರ್ದೇಶಕರ ಕಛೇರಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್‌ರವರ ಮನವಿ ದಿ: 23–9–2009

**ಪ್ರಸ್ತಾವನೆ:**

ಬೀದರ್ ನಗರದಲ್ಲಿ ನಡೆಯುತ್ತಿರುವ ಅಂಗನವಾಡಿ ಕೇಂದ್ರಗಳ ಕಾರ್ಯನಿರ್ವಹಣೆ ಬಗ್ಗೆ ಸಾರ್ವಜನಿಕರಿಂದ ಹಾಗೂ ಚುನಾಯಿತ ಪ್ರತಿನಿಧಿಗಳಿಂದ ಅನೇಕ ಬಾರಿ ದೂರುಗಳು ಬಂದ ಹಿನ್ನೆಲೆಯಲ್ಲಿ, ಅಂಗನವಾಡಿ ಕೇಂದ್ರಗಳ ತಪಾಸಣೆಯನ್ನು ಹಿರಿಯ ಅಧಿಕಾರಿಗಳಿಂದ ನಡೆಸಿ ಕೇಂದ್ರಗಳ ತಪಾಸಣೆ ಬಳಿಕೆ ನ್ಯೂನತೆಗಳು ಇರುವುದು ವರದಿಯಾಗಿರುವ ಕುರಿತು ದಿ:16.8.2008 ರ ಜನಸ್ಪಂದನ ಸಮಿತಿ ಸಭೆಯಲ್ಲಿ ವಿವರವಾಗಿ ಚರ್ಚಿಸಿ ತಪಾಸಣೆ ತಂಡದವರ ಅಭಿಪ್ರಾಯದ ಪ್ರಕಾರ ಅಂಗನವಾಡಿ ಕೇಂದ್ರಗಳ ಕಾರ್ಯನಿರ್ವಹಣೆ ತೃಪ್ತಿಕರವಾಗಿಲ್ಲದಿರುವುದನ್ನು ಮನಗಂಡು, ಅನೇಕ ಅಂಗನವಾಡಿ ಕೇಂದ್ರಗಳಿಗೆ ವರ್ಷ ಕಳೆದರು ಶ್ರೀ ರಾಮಕೃಷ್ಣ ಟಿ. ಪಡಗಣ್ಣನವರ, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್ ಮತ್ತು ಶ್ರೀ ಪಿ.ಎಸ್. ಇಟಕಂಪಳ್ಳಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಬೀದರ್, ಇವರುಗಳು ನಿಯಮಿತವಾಗಿ ಭೇಟಿ ನೀಡಿ ಮೇಲ್ವಿಚಾರಣೆ ಮಾಡದೆ ಇರುವುದರಿಂದ ಕಾರ್ಯಕ್ರಮವು ಒಂದು ಖೋಟಾ ಕಾರ್ಯಕ್ರಮವಾಗಿ ಪರಿಗಣಿಸಿದ್ದು, ಮಕ್ಕಳು ಹಾಗೂ ಸ್ತ್ರೀಯರಿಗಾಗಿ ರೂಪಿಸಿದ ಕಾರ್ಯಕ್ರಮವನ್ನು ಬುಡಮೇಲು ಮಾಡಿದಂತಾಗಿರುವುದು ಮೇಲ್ನೋಟಕ್ಕೆ ಕಂಡು ಬಂದ ಹಿನ್ನೆಲೆಯಲ್ಲಿ ಜಿಲ್ಲಾಧಿಕಾರಿ, ಬೀದರ್‌ರವರು ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿ: 16–8–2008 ರ ಆದೇಶದಲ್ಲಿ ಶ್ರೀ ರಾಮಕೃಷ್ಣ ಟಿ.ಪಡಗಣ್ಣನವರ, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್, ಇವರುಗಳನ್ನು ಅಮಾನತ್ತುಗೊಳಿಸಿ ಆದೇಶ ಹೊರಡಿಸಿರುತ್ತಾರೆ.

ಜಿಲ್ಲಾಧಿಕಾರಿ, ಬೀದರ್ ರವರು ಅಮಾನತ್ತುಗೊಳಿಸಿ ಹೊರಡಿಸಿರುವ ದಿ: 16.08.2008 ರ ಆದೇಶವನ್ನು ಪ್ರಶ್ನಿಸಿ ಶ್ರೀ ರಾಮಕೃಷ್ಣ ಟಿ. ಪಡಗಣ್ಣನವರ, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್ ರವರು ಕರ್ನಾಟಕ ಆಡಳಿತ ನ್ಯಾಯಮಂಡಳಿಯಲ್ಲಿ ಅರ್ಜಿ ಸಂಖ್ಯೆ: 4069/2008 ರಲ್ಲಿ ಮೊಕದ್ದಮೆ ಹೂಡಿ, ಜಿಲ್ಲಾಧಿಕಾರಿ, ಬೀದರ್ ರವರು ಅಮಾನತ್ತುಗೊಳಿಸಿ ಹೊರಡಿಸಿರುವ ದಿ :16.8.2008 ರ ಆದೇಶವನ್ನು ರದ್ದುಗೊಳಿಸುವಂತೆ ಕೋರಲಾಗಿದ್ದು, ಸದರಿ ಪ್ರಕರಣವನ್ನು ಮಾನ್ಯ ನ್ಯಾಯಮಂಡಳಿಯು ದಿ: 13.10.2008 ರಂದು ವಿಚಾರಣೆ ನಡೆಸಿ ಶಿಸ್ತು ಪ್ರಾಧಿಕಾರವಲ್ಲದ ಹಾಗೂ ಜಿಲ್ಲಾಧಿಕಾರಿಗಳಿಗೆ ಗ್ರೂಪ್ 'ಎ' ಅಧಿಕಾರಿಯನ್ನು ಅಮಾನತ್ತುಗೊಳಿಸಲು ಅಧಿಕಾರವಿಲ್ಲದಿದ್ದರೂ ಸಹ ಜಿಲ್ಲಾಧಿಕಾರಿಗಳು, ಬೀದರ್‌ರವರು ದಿ: 16.8.2008 ರಂದು ಅಮಾನತ್ತುಗೊಳಿಸಿ ಹೊರಡಿಸಿರುವ ಆದೇಶವನ್ನು ಗಂಭೀರವಾಗಿ ಪರಿಗಣಿಸಿ ಜಿಲ್ಲಾಧಿಕಾರಿಗಳಿಗೆ ರೂ. 5,000/– ಗಳನ್ನು ದಂಡವನ್ನಾಗಿ ಪಾವತಿಸುವಂತೆ ಹಾಗೂ ಜಿಲ್ಲಾಧಿಕಾರಿಗಳು ಹೊರಡಿಸಿರುವ ಅಮಾನತ್ತಿನ ಆದೇಶವನ್ನು ರದ್ದುಪಡಿಸಿ ತೀರ್ಪನ್ನು ನೀಡಿರುತ್ತದೆ. ಮಾನ್ಯ ನ್ಯಾಯಮಂಡಳಿಯು ದಿ. 13.10.2008 ರಂದು ನೀಡಿರುವ ತೀರ್ಪನ್ನು ಕಾನೂನು ಕೋಶದ ಮುಖ್ಯಸ್ಥರು ಪರಿಶೀಲಿಸಿ ಸದರಿ ತೀರ್ಪು ಮೇಲ್ಮನವಿಗೆ ಅರ್ಹ ಪ್ರಕರಣವಲ್ಲವೆಂದು ತಿಳಿಸಿರುತ್ತಾರೆ. ಸರ್ಕಾರವು ಕರ್ನಾಟಕ ಆಡಳಿತ ನ್ಯಾಯಮಂಡಳಿಯ ದಿ: 13.10.2008 ರ ತೀರ್ಪು ಹಾಗೂ ಕಾನೂನು ಕೋಶದ ಮುಖ್ಯಸ್ಥರು ನೀಡಿರುವ ಅಭಿಪ್ರಾಯ ಹಾಗೂ ಪ್ರಕರಣದ ವಾಸ್ತವಾಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಮೇಲೆ

ಕ್ರಮ ಸಂಖ್ಯೆ (3) ರಲ್ಲಿ ಓದಲಾದ ದಿ: 23.12.2008 ರ ಆದೇಶದಲ್ಲಿ ಜಿಲ್ಲಾಧಿಕಾರಿಗಳು ಬೀದರ್ ರವರು ಶ್ರೀ ರಾಮಕೃಷ್ಣ ಟಿ. ಪಡಗಣ್ಣನವರ, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್ ಇವರನ್ನು ಕಛೇರಿ ಆದೇಶ ಸಂಖ್ಯೆ: ಸಿಬ್ಬಂದಿ/ಸಿ.ಆರ್/ಜಿಎ/2008–09/4770 ದಿ: 16.08.2008 ರಂದು ಅಮಾನತ್ತಿಗೊಳಿಸಿ ಹೊರಡಿಸಿರುವ ಆದೇಶವನ್ನು ರದ್ದುಪಡಿಸಿ ಇವರ ವಿರುದ್ಧ ಇರುವ ಆರೋಪಗಳನ್ನು ಹಿಂಪಡೆದು ಅವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಗೆ ಪುನರ್‌ಸ್ಥಾಪಿಸಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಗುಲ್ಬರ್ಗ ಇಲ್ಲಿನ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ ಖಾಲಿ ಹುದ್ದೆಗೆ ಸ್ಥಳ ನಿಯುಕ್ತಿಗೊಳಿಸಿ ಅವರು ಇನ್ನು ಮುಂದೆ ಅವರ ಕಾರ್ಯನಿರ್ವಹಣೆಯಲ್ಲಿ ಎಚ್ಚರಿಕೆ ವಹಿಸುವಂತೆ ಅವರಿಗೆ ಒಂದು ಆಡಳಿತಾತ್ಮಕ ಎಚ್ಚರಿಕೆಯನ್ನು ನೀಡಿದೆ.

ಶ್ರೀ ಪಿ.ಎಸ್.ಇಟಕಂಪಳ್ಳಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿ ಬೀದರ್, ಹಾಗೂ ಶ್ರೀ ರಾಮಕೃಷ್ಣ ಟಿ.ಪಡಗಣ್ಣನವರ, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್ ಇವರುಗಳ ಪ್ರಕರಣ ಒಂದೇ ಆಗಿದ್ದು ಈ ಇಬ್ಬರು ಅಧಿಕಾರಿಗಳನ್ನು ಜಿಲ್ಲಾಧಿಕಾರಿ, ಬೀದರ್ ರವರು ಅಮಾನತ್ತಿಗೊಳಿಸಿದ್ದು, ಇವರುಗಳ ಪೈಕಿ ಶ್ರೀ ರಾಮಕೃಷ್ಣ ಟಿ. ಪಡಗಣ್ಣನವರ, ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್ ಇವರನ್ನು ಜಿಲ್ಲಾದಿಕಾರಿಗಳು, ಬೀದರ್ ರವರು ದಿನಾಂಕ: 16.8.2008 ರಂದು ಅಮಾನತ್ತುಗೊಳಿಸಿ ಆದೇಶವನ್ನು ರದ್ದು ಪಡಿಸಿ ಇವರ ವಿರುದ್ಧ ಇರುವ ಆರೋಪಗಳನ್ನು ಹಿಂಪಡೆದು ದಿ: 23.12.2008 ರಂದು ಆದೇಶ ಹೊರಡಿಸಿರುವ ಹಿನ್ನೆಲೆಯಲ್ಲಿ, ಮೇಲೆ ಕ್ರಮ ಸಂಖ್ಯೆ (4) ರಲ್ಲಿ ಓದಲಾದ ದಿ: 3.1.2009 ರ ಆದೇಶದಲ್ಲಿ ಜಿಲ್ಲಾಧಿಕಾರಿಗಳು, ಬೀದರ್ ರವರು ಶ್ರೀ ಪಿ.ಎಸ್.ಇಟಕಂಪಳ್ಳಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿ ಬೀದರ್ ಇವರನ್ನು ಆದೇಶ ಸಂಖ್ಯೆ ಸಿಬ್ಬಂದಿ/ಜಿಎ/2008–09/5598 ದಿ: 16–08–2008 ರಲ್ಲಿ ಅಮಾನತ್ತುಗೊಳಿಸಿ ಹೊರಡಿಸಿರುವ ಆದೇಶವನ್ನು ರದ್ದುಪಡಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ದಿ:18.03.2009ರ ಆದೇಶದಲ್ಲಿ ಶ್ರೀ ಪಿ.ಎಸ್.ಇಟಕಂಪಳ್ಳಿ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಬೀದರ್ ಹಾಲಿ ನಿರೂಪಣಾಧಿಕಾರಿ, ಸಹಾಯಕ ನಿರ್ದೇಶಕರ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಬೀದರ್ ಇವರ ವಿರುದ್ಧದ ಆರೋಪಗಳನ್ನು ಹಿಂಪಡೆದು ಸದರಿಯವರು ಇನ್ನು ಮುಂದೆ ಅವರ ಕಾರ್ಯನಿರ್ವಹಣೆಯಲ್ಲಿ ಎಚ್ಚರಿಕೆ ವಹಿಸುವಂತೆ ಸೂಚಿಸಿ ಒಂದು ಆಡಳಿತಾತ್ಮಕ ಎಚ್ಚರಿಕೆಯನ್ನು ನೀಡಿದೆ.

ಮೇಲೆ ಕ್ರಮ ಸಂಖ್ಯೆ (6) ರಲ್ಲಿ ಓದಲಾದ ದಿ: 20.03.2009 ರ ಮನವಿಯಲ್ಲಿ ಶ್ರೀ ಪಿ.ಎಸ್.ಇಟಕಂಪಳ್ಳಿ, ನಿರೂಪಣಾಧಿಕಾರಿಗಳು, ಸಹಾಯಕ ನಿರ್ದೇಶಕರ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಬೀದರ್ ಅವರು ದಿ:01.09.2008 ರಿಂದ ಅವರು ಪುನಃ ದಿನಾಂಕ: 05.01.2009 ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡ ಹಿಂದಿನ ದಿನಾಂಕದವರೆಗೆ ಅಂದರೆ ದಿನಾಂಕ: 04.01.2009 ರವರೆವಿಗೆ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಕರ್ತವ್ಯದ ಅವಧಿಯೆಂದು ಪರಿಗಣಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಸರ್ಕಾರವು ಶ್ರೀ ಪಿ.ಎಸ್.ಇಟಕಂಪಳ್ಳಿ, ನಿರೂಪಣಾಧಿಕಾರಿಗಳು, ಸಹಾಯಕ ನಿರ್ದೇಶಕರ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೀದರ್ ಇವರ ಮನವಿಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಮಇ 460 ಎಸ್‌ಜೆಡಿ 2008, (ಭಾಗ–1), ಬೆಂಗಳೂರು ದಿನಾಂಕ: 30ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಪಿ.ಎಸ್.ಇಟಕಂಪಳ್ಳಿ, ನಿರೂಪಣಾಧಿಕಾರಿಗಳು, ಸಹಾಯಕ ನಿರ್ದೇಶಕರ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಬೀದರ್ ಇವರು ದಿನಾಂಕ: 01.09.2008 ರಿಂದ ಇವರು ಪುನಃ ದಿನಾಂಕ: 05.01.2009 ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡ ಹಿಂದಿನ ದಿನಾಂಕದವರೆಗೆ ಅಂದರೆ ದಿನಾಂಕ: 04.01.2009 ರ ವರೆಗೆ ಅಮಾನತ್ತಿಲ್ಲಿ ಕಳೆದ ಅವಧಿಯನ್ನು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಯ ನಿಯಮ 100 (1) ರ ಅನ್ವಯ ಕರ್ತವ್ಯದಲ್ಲಿ ಕಳೆದ ಅವಧಿಯೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನರಸಿಂಹಯ್ಯ**

ಪಿ.ಆರ್. 1209

ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರಭಾರ),

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ವಿಷಯ:** ಶ್ರೀ ಸಿ.ಪಿ.ರವೀಂದ್ರ ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಮಂಗಳೂರು ಗ್ರಾಮಾಂತರ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಕುರಿತು ಆದೇಶ.

**ಓದಲಾಗಿದೆ:** 1. ಸಹಾಯಕ ಚುನಾವಣಾಧಿಕಾರಿಗಳು ಹಾಗೂ ಸಹಾಯಕ ಆಯುಕ್ತರು, ಮಂಗಳೂರು ರವರ ಕಛೇರಿಯ ಜಿಲ್ಲಾಧಿಕಾರಿಗಳು ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ರವರಿಗೆ ಹೆಸರಿಸಿರುವ ಪತ್ರ ಸಂಖ್ಯೆ ಇ.ಎಲ್.ಎನ್./ಸಿಆರ್.(3)/2009–2010 ದಿ.24–4–2009.

2. ಜಿಲ್ಲಾ ಚುನಾವಣಾಧಿಕಾರಿಗಳು ಹಾಗೂ ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ರವರ ಕಛೇರಿಯ ಪತ್ರ ಸಂಖ್ಯೆ:ಇ.ಎಲ್.ಎನ್.(1) ಸಿ.ಆರ್./15/2008–09 ದಿ: 24–4–2009 ರ ಫ್ಯಾಕ್ಸ್ ಸಂದೇಶ.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿ: 24.4.2009ರ ಸಹಾಯಕ ಚುನಾವಣಾಧಿಕಾರಿಗಳು ಹಾಗೂ ಸಹಾಯಕ ಆಯುಕ್ತರು ಮಂಗಳೂರು ರವರ ಪತ್ರದಲ್ಲಿ 204 ಮಂಗಳೂರು ವಿಧಾನಸಭಾ ಕ್ಷೇತ್ರದಲ್ಲಿ ಕಾರ್ಯನಿರ್ವಹಿಸುತ್ತಿರುವ ಕಂಟ್ರೋಲ್ ರೂಂನಿಂದ ಮತಗಟ್ಟೆ ಸಂಖ್ಯೆ 41 ರ ವಿ.ಎಲ್.ಓ ಆದ ಅಂಗನವಾಡಿ ಕಾರ್ಯಕರ್ತೆ ಶ್ರೀಮತಿ ಶಶಿಕಲಾ ರವರಿಂದ ಮಾಹಿತಿ ಸಂಗ್ರಹಿಸುತ್ತಿರುವ ಸಂದರ್ಭದಲ್ಲಿ ಶ್ರೀಮತಿ ಶಶಿಕಲಾ, ಅಂಗನವಾಡಿ ಕಾರ್ಯಕರ್ತೆ ರವರ ಮೇಲಾಧಿಕಾರಿಯಾದ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ರವರು ಅಂಗನವಾಡಿಗೆ ಸಂಬಂಧಿಸಿದ ಕೆಲಸ ಕಾರ್ಯಗಳನ್ನು ಮೊದಲು ನಿರ್ವಹಿಸಿ ಚುನಾವಣಾ ಕೆಲಸ ಕಾರ್ಯಗಳನ್ನು ನಂತರ ನಿರ್ವಹಿಸಲು ಮತ್ತು ಚುನಾವಣಾ ಕೆಲಸ ನಿರ್ವಹಿಸಲು ನೀಡಿದ ಆದೇಶ ಒದಗಿಸಲು ತಿಳಿಸಿರುವುದಾಗಿ ಮಾಹಿತಿ ಸಂಗ್ರಹಿಸುತ್ತಿರುವ ಶ್ರೀಮತಿ ಚಂದ್ರಕಲಾ ರವರಲ್ಲಿ ಹೇಳಿಕೊಂಡಿರುತ್ತಾರೆಂದು, ಅಂಗನವಾಡಿ ಕಾರ್ಯಕರ್ತೆಯವರಿಗೆ ಸಿ.ಡಿ.ಪಿ.ಓ. ರವರಲ್ಲಿ ಈ ರೀತಿ ಒತ್ತಡ ಹೇರುತ್ತಿರುವುದರಿಂದ ಚುನಾವಣಾ ಕೆಲಸ ಕಾರ್ಯಗಳಿಗೆ ತೊಂದರೆಯಾಗುವ ಸಂದರ್ಭವಿರುವುದರಿಂದ, ಸಂಬಂಧಪಟ್ಟ ಗ್ರಾಮಾಂತರ ಶಿಶು ಅಭಿವೃದ್ಧಿ ಯೋಜನಾಧಿಕಾರಿರವರಿಗೆ ಸೂಕ್ತ ನಿರ್ದೇಶನ ನೀಡಬೇಕೆಂದು ಜಿಲ್ಲಾಧಿಕಾರಿಗಳು ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ರವರನ್ನು ಕೋರಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿ: 24.4.2009ರ ಜಿಲ್ಲಾ ಚುನಾವಣಾಧಿಕಾರಿಗಳು ಹಾಗೂ ಜಿಲ್ಲಾಧಿಕಾರಿಗಳು ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು ರವರ ಫ್ಯಾಕ್ಸ್ ಸಂದೇಶದಲ್ಲಿ ಸಹಾಯಕ ಚುನಾವಣಾಧಿಕಾರಿಗಳು, ಹಾಗೂ ಸಹಾಯಕ ಆಯುಕ್ತರು ಮಂಗಳೂರು ರವರ ಪ್ರಸ್ತಾವನೆಯಂತೆ, ಶ್ರೀ ಸಿ.ಪಿ. ರವೀಂದ್ರ ಶಿಶು ಅಭಿವೃದ್ಧಿ ಯೋಜನಾಧಿಕಾರಿ ಇವರು ಚುನಾವಣೆ ಕೆಲಸಕ್ಕೆ ಆದ್ಯತೆ ನೀಡದೆ ಕರ್ತವ್ಯ ದುರ್ನಡತೆ ಎಸಗಿರುವುದರಿಂದ ಸದರಿಯವರನ್ನು ಅವರ ಮೇಲಿನ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು ಅವರನ್ನು ಕೂಡಲೇ ಸೇವೆಯಿಂದ ಅಮಾನತ್ತುಗೊಳಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಜಿಲ್ಲಾ ಚುನಾವಣಾಧಿಕಾರಿಗಳು ಹಾಗೂ ಜಿಲ್ಲಾಧಿಕಾರಿಗಳು, ದಕ್ಷಿಣ ಕನ್ನಡ ಜಿಲ್ಲೆ ಇವರ ಪ್ರಸ್ತಾವನೆ/ಶಿಫಾರಸ್ಸನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿ ಶ್ರೀ ಸಿ.ಪಿ.ರವೀಂದ್ರ, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು, ಮಂಗಳೂರು ಗ್ರಾಮಾಂತರ ರವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಅವರ ಮೇಲಿನ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು ಸೇವೆಯಿಂದ ಅಮಾನತ್ತುಗೊಳಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 214 ಎಸ್‌ಜೆಡಿ 2009 ಬೆಂಗಳೂರು, ದಿನಾಂಕ: 28ನೇ ಏಪ್ರಿಲ್ 2009**

ಮೇಲೆ ವಿವರಿಸಿರುವ ವಾಸ್ತವಾಂಶಗಳ ಹಿನ್ನಲೆಯಲ್ಲಿ, ಶ್ರೀ ಸಿ.ಪಿ.ರವೀಂದ್ರ, ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು, ಮಂಗಳೂರು ಗ್ರಾಮಾಂತರ ರವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಅವರ ಮೇಲಿನ ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು ಇವರನ್ನು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳು 1957 ರ ನಿಯಮ 10(1)(ಡಿ) ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಲಾಗಿದೆ.

ಅಮಾನತ್ತಿನಲ್ಲಿನ ಅವಧಿಯಲ್ಲಿ ಸದರಿ ಅಧಿಕಾರಿಯು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳೂ 1957ರ ನಿಯಮ 98(1) ರನ್ವಯ ಜೀವನಾಂಶ ಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ. ಅಲ್ಲದೆ ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಲಿಖಿತ ಅನುಮೋದನೆ ಪಡೆಯದೇ ಕೇಂದ್ರ ಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ನರಸಿಂಹಯ್ಯ**

ಪಿ.ಆರ್. 1210

ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರಭಾರ),
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ಕೆ.ಎಸ್. ರವೀಂದ್ರಗೌಡ, ಸಹಾಯಕ ಸರ್ಕಾರಿ ಅಭಿಯೋಜಕರು, 3ನೇ ಅಧಿಕ ಸಿ.ಜೆ.ಎಂ. ನ್ಯಾಯಾಲಯ, ಮೈಸೂರು ಇವರ ವಿರುದ್ಧದ ಲೋಕಾಯುಕ್ತರ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆಗೆ ಆದೇಶಿಸುವ ಕುರಿತು.

**ಓದಲಾಗಿದೆ:** ಉಪ ನಿಬಂಧಕರು ವಿಚಾರಣೆ–4, ಕರ್ನಾಟಕ ಲೋಕಾಯುಕ್ತ ಇವರ ಅರೆಸರ್ಕಾರಿ ಪತ್ರದ ಸಂ: Compt/Uplok/Mys-717/2008/DRE-4, ದಿನಾಂಕ: 20.03.2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಅರೆಸರ್ಕಾರಿ ಪತ್ರದಲ್ಲಿ, ಶ್ರೀ ಬಷೀರ್ ಅಹಮದ್ ಖಾನ್‌ರ ದೂರಿನ ಮೇರೆಗೆ, ಶ್ರೀ ಕೆ.ಎಸ್. ರವೀಂದ್ರಗೌಡ, ಸಹಾಯಕ ಸರ್ಕಾರಿ ಅಭಿಯೋಜಕರು, 3ನೇ ಅಧಿಕ ಸಿ.ಜೆ.ಎಂ. ನ್ಯಾಯಾಲಯ, ಮೈಸೂರು ರವರನ್ನು ದಿನಾಂಕ:10.08.2005ರಂದು ಫಿರ್ಯಾದುದಾರರಿಂದ ರೂ.5000–00ಗಳನ್ನು ಲಂಚವನ್ನಾಗಿ ಸ್ವೀಕರಿಸುತ್ತಿದ್ದಾಗ, ಲೋಕಾಯುಕ್ತರ ವಿಚಾರಣಾ ತಂಡವು ಹಿಡಿದಿರುವುದರಿಂದ ಕರ್ನಾಟಕ ನಾಗರೀಕಾ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 14(ಎ)ರ ಅನುಸಾರ ಇಲಾಖಾ ವಿಚಾರಣೆ ನಡೆಸಲು ಕ್ರಮಕೈಗೊಳ್ಳುವಂತೆ ಮಾನ್ಯ ಉಪ ಲೋಕಾಯುಕ್ತರು ಸರ್ಕಾರಕ್ಕೆ ಶಿಫಾರಸ್ಸನ್ನು ಮಾಡಿರುತ್ತಾರೆ.

ಈ ಹಿನ್ನಲೆಯಲ್ಲಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಆಪಾದಿತ ಸರ್ಕಾರಿ ಅಧಿಕಾರಿಯ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತರು ಇವರಿಗೆ ವಹಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 200 ಪಿಪಿಇ 2009, ಬೆಂಗಳೂರು, ದಿನಾಂಕ: 2ನೇ ಮೇ 2009**

ಪ್ರಸ್ತಾವನೆಯಲ್ಲಿರುವ ಅಂಶಗಳ ಹಿನ್ನಲೆಯಲ್ಲಿ, ಶ್ರೀ ಕೆ.ಎಸ್. ರವೀಂದ್ರಗೌಡ, ಸಹಾಯಕ ಸರ್ಕಾರಿ ಅಭಿಯೋಜಕರು, 3ನೇ ಅಧಿಕ ಸಿ.ಜೆ.ಎಂ. ನ್ಯಾಯಾಲಯ, ಮೈಸೂರು ಇವರ ವಿರುದ್ಧದ ಟ್ರ್ಯಾಪ್ ಪ್ರಕರಣಕ್ಕೆ ಸಂಬಂದಿಸಿದಂತೆ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ 14–(ಎ)ರನ್ವಯ ಇಲಾಖಾ ವಿಚಾರಣೆಯನ್ನು ನಡೆಸಲು ಪ್ರಕರಣವನ್ನು ಮಾನ್ಯ ಉಪ ಲೋಕಾಯುಕ್ತರಿಗೆ ಸರ್ಕಾರವು ವಹಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಪಿ.ಆರ್. 1211

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಬಾಂಬ್ ಬ್ಲಾಸ್ಟ್ ಪ್ರಕರಣಗಳಲ್ಲಿ ವಿಶೇಷ ಸರ್ಕಾರಿ ಅಭಿಯೋಜಕರಾಗಿ ನೇಮಕಗೊಂಡಿದ್ದ ಶ್ರೀ ಹೆಚ್.ಎನ್. ನಿಲೋಗಲ್, ವಕೀಲರು ಇವರಿಗೆ ಸಂಭಾವನೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂ: ಒಇ 510 ಪಿಪಿಇ 2005 ದಿನಾಂಕ: 27.05.2005.

2. ಸರ್ಕಾರದ ತಿದ್ದುಪಡಿ ಸಂ: ಒಇ 510 ಪಿಪಿಇ 2005 ದಿನಾಂಕ: 28.10.2005.

3. ಸರ್ಕಾರದ ಆದೇಶ ಸಂ: ಒಇ 614 ಪಿಪಿಇ 2005 ದಿನಾಂಕ: 18.08.2006.

4. ಸರ್ಕಾರದ ಆದೇಶ ಸಂ: ಒಇ 382 ಪಿಪಿಇ 2006 ದಿನಾಂಕ: 9.02.2007.

5. ಶ್ರೀ ಹೆಚ್.ಎನ್. ನಿಲೋಗಲ್, ವಿಶೇಷ ಸರ್ಕಾರಿ ಅಭಿಯೋಜಕರು ಇವರ ಪತ್ರ ದಿನಾಂಕ: 05.01.2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆ ದಿನಾಂಕ: 27.07.2005ರಲ್ಲಿ ಶ್ರೀ ಹೆಚ್.ಎನ್. ನಿಲೋಗಲ್, ವಕೀಲರು ಇವರನ್ನು ಬಾಂಬ್ ಬ್ಲಾಸ್ಟ್ ಪ್ರಕರಣಗಳಲ್ಲಿ ವಿಶೇಷ ಸರ್ಕಾರಿ ಅಭಿಯೋಜಕರಾಗಿ ನೇಮಿಸಲಾಗಿತ್ತು.

ಮೇಲೆ (3) ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ: 18.08.2006ರಲ್ಲಿ ಅವರಿಗೆ ಈ ಕೆಳಗಿನಂತೆ ಸಂಭಾವನೆಯನ್ನು ನಿಗಧಿಗೊಳಿಸಲಾಗಿತ್ತು.

| | |
|---|---|
| ರೀಡಿಂಗ್ ಫೀ | ರೂ.20,000/– (ಇಪ್ಪತ್ತು ಸಾವಿರ ರೂಪಾಯಿ ಮಾತ್ರ) |
| ಪರಿಣಾಮಕಾರಿ ವಿಚಾರಣೆ | ರೂ.3,000/– (ಎರಡು ಸಾವಿರ ರೂಪಾಯಿ ಮಾತ್ರ) |
| ಪರಿಣಾಮಕಾರಿಯಲ್ಲದ ವಿಚಾರಣೆ | ರೂ.1,000/– (ಒಂದು ಸಾವಿರ ರೂಪಾಯಿ ಮಾತ್ರ) |

ಪ್ರಯಾಣ ಮತ್ತು ದಿನಭತ್ಯೆ: ಕ.ನಾ.ಸೇ.ನಿಯಮಗಳಲ್ಲಿ 1ನೇ ವರ್ಗದ ಅಧಿಕಾರಿಗಳಿಗೆ ಅನುಮತಿಸಿದ ದರದಲ್ಲಿ

ಮೇಲೆ (4)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ: 9.02.2007ರಲ್ಲಿ ಶ್ರೀ ಹೆಚ್.ಎನ್. ನಿಲೋಗಲ್ ಇವರಿಗೆ ಅವರ ಕೋರಿಕೆಯಂತೆ ಮಧ್ಯಂತರ ಸಂಭಾವನೆಯನ್ನು ಪಾವತಿಸಲಾಗಿತ್ತು.

ಈಗ ಮೇಲೆ (5)ರಲ್ಲಿ ಓದಲಾದ ಪತ್ರ ದಿನಾಂಕ: 05.01.2009ರಲ್ಲಿ ಶ್ರೀ ಹೆಚ್.ಎನ್.ನಿಲೋಗಲ್ ಇವರು ಅಂತಿಮ ಬಿಲ್ಲುಗಳನ್ನು ಈ ಕೆಳಗಿನಂತೆ ಪಾವತಿ ಕೋರಿ ಸಲ್ಲಿಸಿದ್ದಾರೆ.

| ಪ್ರಕರಣ ಸಂಖ್ಯೆ | ಪರಿಣಾಮಕಾರಿ ವಿಚಾರಣೆ | ಪರಿಣಾಮಕಾರಿಯಲ್ಲದ ವಿಚಾರಣೆ |
|---|---|---|
| ಎಸ್.ಸಿ.423/01 | 74 | 33 |
| ಎಸ್.ಸಿ.580/03 | 79 | 28 |
| ಎಸ್.ಸಿ.570/03 | 73 | 30 |
| ಎಸ್.ಸಿ.696/05 | 73 | 29 |
| ಒಟ್ಟು | 294 | 120 |

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 532 ಪಿಪಿಇ 2008, ಬೆಂಗಳೂರು, ದಿನಾಂಕ: 29ನೇ ಏಪ್ರಿಲ್ 2009**

ಬಾಂಬ್ ಬ್ಲಾಸ್ಟ್ ಪ್ರಕರಣಗಳಲ್ಲಿ ವಿಶೇಷ ಸರ್ಕಾರಿ ಅಭಿಯೋಜಕರಾಗಿ ನೇಮಕಗೊಂಡಿದ್ದ ಶ್ರೀ ಹೆಚ್.ಎನ್. ನಿಲೋಗಲ್, ವಕೀಲರು ಇವರಿಗೆ ಪ್ರತಿಯೊಂದು ಪ್ರಕರಣಗಳಿಗೆ ಅಂತಿಮ ಬಿಲ್ಲುಗಳ ಸಂಭಾವನೆಯನ್ನು ಈ ಕೆಳಗಿನಂತೆ ಪಾವತಿಸಲು ಮಂಜೂರಾತಿ ನೀಡಲಾಗಿದೆ.

| ಪ್ರಕರಣ ಸಂಖ್ಯೆ | ಪರಿಣಾಮಕಾರಿ ವಿಚಾರಣೆ | ಪರಿಣಾಮಕಾರಿಯಲ್ಲದ ವಿಚಾರಣೆ |
|---|---|---|
| ಎಸ್.ಸಿ.423/01 | 58 | 39 |
| ಎಸ್.ಸಿ.580/03 | 57 | 41 |
| ಎಸ್.ಸಿ.570/03 | 72 | 33 |
| ಎಸ್.ಸಿ.696/05 | 72 | 34 |
| | 259x3,000=7,77,000/– | 147x1,000=1,47,000 |
| **ಒಟ್ಟು** | **ರೂ.9,24,000/– (ಒಂಬತ್ತು ಲಕ್ಷದ ಇಪ್ಪತ್ನಾಲ್ಕು ಸಾವಿರ ರೂಪಾಯಿ ಮಾತ್ರ)** | |

ಇದಕ್ಕೆ ತಗಲುವ ವೆಚ್ಚವನ್ನು "ಲೆಕ್ಕಶೀರ್ಷಿಕೆ 2014–ನ್ಯಾಯಾಡಳಿತ–114–ಲೀಗಲ್ ಅಡ್ವೆಸರ್ಸ್ ಅಂಡ್ ಕೌನ್ಸಿಲ್ಸ್–01–ಅಡ್ವೋಕೇಟ್ ಜನರಲ್ (Payment for Professional and Special Services in the budget)" ರಡಿಯಲ್ಲಿ ಭರಿಸತಕ್ಕದ್ದು.

ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 324 ವೆಚ್ಚ–7/2006 ದಿನಾಂಕ:17.5.2006ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಪಿ.ಆರ್. 1212

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

## FOREST, ECOLOGY AND ENVIRONMENT SECRETARIAT

**Sub:** Diversion of 0.40 ha. of forest land in Dubare Reserve Forest for construction of Government School building in Kushalnagar Range, Madikeri in favour of the Deputy Director of Public Instruction, Kodagu, Madikeri.

**Read:** 1. Letter No. A5(3)GFI.CR.20/07-08 dated: 30/04/2008 of the Principal Chief Conservator of Forests, Bangalore.

**Preamble:**

The Principal Chief Conservator of Forests, Bangalore vide his letter dated: 30.04.2008 read at above has submitted the proposal to obtain the approval under Section 2 of the Forest (Conservation) Act, 1980 for diversion of 0.40 ha. of forest land in Dubare Reserve Forest for construction of Government school building in Kushalnagar Range, Madikeri in favour of the Deputy Director of Public Instruction, Kodagu, Madikeri.

The proposal has been examined in detail and hence the order.

**Government Order No. FEE 109 FLL 2008, Bangalore, Dated: 6th April 2009**

In the circumstances explained in the preamble above, Government are pleased to accord sanction under section (2) of Forest (Conservation) Act 1981) for diversion of 0.40 ha. of forest land in Dubare Reserve Forest for construction of Government school building in Kushalnagar Range, Madikeri in favour of the Deputy Director of Public Instruction, Kodagu, Madikeri subject to the following conditions:

1. The legal status of forest land shall remain unchanged.
2. The land shall be utilized only for the purpose for which it is released.
3. If the land is not required for the purpose for which it is granted the same should be resumed back to the Forest Department by the Conservator of Forests under section 82 of Karnataka Forest Act, 1963.
4. The user agency has to pay the lase rent as fixed by the Government at the time of sanction and any subsequent orders in this regard.
5. The lease is granted for thirty (30) years.
6. The Karnataka Forest Act, 1963 and Rules, 1969 will be applicable for any violation.
7. Any other conditions to be imposed by the Government of India/Government of Karnataka /Principal Chief Conservator of Forests will be abided by the lessee.

By Order and in the name of Governor of Karnataka,

**H.M. MALLIKARJUNA SWAMY**

P.R. 1213

Under Secretary to Government,
Forest, Ecology and Environment Department.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಆರ್.ಡಿ. ಪಾಟೀಲ್, ಹಿಂದಿನ ತಹಶೀಲ್ದಾರ್, ಚಿಕ್ಕೋಡಿ, ಪ್ರಸ್ತುತ ನಿವೃತ್ತರು ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಮಾನ್ಯ ಉಪಲೋಕಾಯುಕ್ತರಿಗೆ ವಹಿಸಿಕೊಡುವ ಬಗ್ಗೆ.

**ಓದಲಾಗಿದೆ:** ಉಪ ನಿಬಂಧಕರು, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ಇವರ ಅ.ಸ.ಪತ್ರ ಸಂ: ಕಂಪ್ಲೇಂಟ್/ಉಪಲೋಕ್/ಬಿಜಿಎಂ–1343/06, ಎಆರ್ಎಲ್ಒ–4, ದಿನಾಂಕ: 22.12.2008.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದೊಂದಿಗೆ ಉಪ ನಿಬಂಧಕರು, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ಇವರು ಚಿಕ್ಕೋಡಿ ತಾಲ್ಲೂಕಿನ ಅಂದಿನ ತಹಶೀಲ್ದಾರರಾದ ಶ್ರೀ ಆರ್.ಡಿ.ಪಾಟೀಲ್, ಇವರ ವಿರುದ್ಧ ಶ್ರೀ ಮಾಳಪ್ಪ ಸಿದ್ರಾಮ ಹಡಕರ್ ಇವರು ಮಾನ್ಯ ಲೋಕಾಯುಕ್ತರಿಗೆ ಸಲ್ಲಿಸಿರುವ ದೂರಿನ ಬಗ್ಗೆ ಪ್ರಾಥಮಿಕ ವಿಚಾರಣೆ ನಡೆಸಿ, ಮಾನ್ಯ ಉಪಲೋಕಾಯುಕ್ತರು ನೀಡಿರುವ ವರದಿಯನ್ನು ಕಳುಹಿಸಿ ವರದಿಯ ಬಗ್ಗೆ ಕ್ರಮ ಕೈಗೊಳ್ಳುವಂತೆ ತಿಳಿಸಿರುತ್ತಾರೆ.

ಸದರಿ ವರದಿಯನ್ನು ಪರಿಶೀಲಿಸಲಾಗಿದೆ. ಶ್ರೀ ಮಾಳಪ್ಪ ಸಿದ್ರಾಮ ಹಡಕರ್, ಅಕ್ಕೋಳ ಪೋಸ್ಟ್, ಚಿಕ್ಕೋಡಿ ತಾಲ್ಲೂಕು, ಬೆಳಗಾವಿ ಜಿಲ್ಲೆ ಇವರು ಮಾನ್ಯ ಲೋಕಾಯುಕ್ತರಿಗೆ ಶ್ರೀ ಆರ್.ಡಿ. ಪಾಟೀಲ್, ಹಿಂದಿನ ತಹಶೀಲ್ದಾರ್, ಚಿಕ್ಕೋಡಿ ತಾಲ್ಲೂಕು ಇವರ ವಿರುದ್ಧ ದೂರು ನೀಡಿರುತ್ತಾರೆ. ಕಾರಣ ಅರ್ಜಿದಾರರಾದ ಶ್ರೀ ಮಾಳಪ್ಪ ಸಿದ್ರಾಮ ಹಡಕರ್, ಇವರು ಶ್ರೀ ಚೇತನ್ ಈರಣ್ಣ ಸ್ವಾಮಿ ಇವರು ಶಾಲಾ ದಾಖಲಾತಿ ಪ್ರಕಾರ ಹಿಂದು–ಲಿಂಗಾಯುತ ಜಾತಿಗೆ ಸೇರಿದವರಾಗಿದ್ದು, ಜಿಲ್ಲಾ ಪರಿಷತ್ ಚುನಾವಣೆ ಸಂದರ್ಭದಲ್ಲಿ 'ಹಿಂದು–ಗುರುವ' ಜಾತಿಗೆ ಸೇರಿದವರೆಂದು ಸುಳ್ಳು ಜಾತಿ ದೃಢೀಕರಣ ಪತ್ರವನ್ನು ನೀಡಲಾಗಿದೆ. ಈ ರೀತಿ ಜಾತಿ ಪ್ರಮಾಣ ಪತ್ರದ ಬಗ್ಗೆ ವಿಚಾರಣೆ ಮಾಡದೇ, ಖೋಟಾ ಸರ್ಟಿಫಿಕೇಟ್ ನೀಡಿರುವುದು ಮೇಲ್ನೋಟಕ್ಕೆ ಕಂಡುಬಂದಿರುತ್ತದೆ.

ಈ ಹಿನ್ನಲೆಯಲ್ಲಿ, ಅರ್ಜಿದಾರರಾದ ಶ್ರೀ ಮಾಳಪ್ಪ ಸಿದ್ರಾಮ ಹಡಕರ್, ಚಿಕ್ಕೋಡಿ ತಾಲ್ಲೂಕು ಇವರು ತಹಶೀಲ್ದಾರರಾದ ಶ್ರೀ ಆರ್.ಡಿ. ಪಾಟೀಲ್ ಇವರ ವಿರುದ್ಧ ಮಾನ್ಯ ಲೋಕಾಯುಕ್ತರಿಗೆ ದೂರು ಸಲ್ಲಿಸಿರುತ್ತಾರೆ ಹಾಗೂ ಈ ರೀತಿ ಕರ್ತವ್ಯಚ್ಯುತಿ ಎಸಗಿರುವ ಸದರಿ ಅಧಿಕಾರಿಯವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಮಾನ್ಯ ಉಪಲೋಕಾಯುಕ್ತರು, ಕರ್ನಾಟಕ ಲೋಕಾಯುಕ್ತ ಕಾಯಿದೆ ಅಧಿನಿಯಮ 12(3) ರನ್ವಯ ಶಿಫಾರಸ್ಸು ಮಾಡಿರುತ್ತಾರೆ ಹಾಗೂ ಅಂತಹ ಕ್ರಮಗಳನ್ನು ಕೈಗೊಂಡ ಬಗ್ಗೆ ಸದರಿ ಕಾಯಿದೆಯ 12(4)ರನ್ವಯ 3 ತಿಂಗಳೊಳಗೆ ಮಾನ್ಯ ಲೋಕಾಯುಕ್ತರಿಗೆ ಮಾಹಿತಿ ನೀಡುವಂತೆ ಕೋರಿರುತ್ತಾರೆ.

ತನಿಖಾ ವರದಿಯಲ್ಲಿನ ಶಿಫಾರಸ್ಸನ್ನು ಪರಿಶೀಲಿಸಿದ ಸರ್ಕಾರವು ಈ ಪ್ರಕರಣದಲ್ಲಿ ಆರೋಪಿತರೆಂದು ಹೇಳಲಾಗಿರುವ ಶ್ರೀ ಆರ್.ಡಿ. ಪಾಟೀಲ್, ಹಿಂದಿನ ತಹಶೀಲ್ದಾರ್, ಚಿಕ್ಕೋಡಿ ತಾಲ್ಲೂಕು, ಪ್ರಸ್ತುತ ನಿವೃತ್ತರು ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1957ರ ನಿಯಮ 214ನ್ನು ಓದಿಕೊಂಡು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 14(ಎ)ರಡಿಯಲ್ಲಿ ಮಾನ್ಯ ಉಪಲೋಕಾಯುಕ್ತರು, ಬೆಂಗಳೂರು ಇವರಿಗೆ ವಹಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಕಂಇ 02 ಎಡಿಇ 2009, ಬೆಂಗಳೂರು, ದಿನಾಂಕ: 30ನೇ ಏಪ್ರಿಲ್ 2009**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಂದ ಶ್ರೀ ಆರ್.ಡಿ. ಪಾಟೀಲ್, ಹಿಂದಿನ ತಹಶೀಲ್ದಾರ್, ಚಿಕ್ಕೋಡಿ ತಾಲ್ಲೂಕು (ಪ್ರಸ್ತುತ ನಿವೃತ್ತರು) ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 214ರಲ್ಲಿ ಪ್ರದತ್ತವಾದ ಅಧಿಕಾರಗಳಂತೆ ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮಾವಳಿಗಳ ನಿಯಮ 11ಎ ರನ್ವಯ ಕೂಲಂಕಷ ವಿಚಾರಣೆ ನಡೆಸುವ ಸಲುವಾಗಿ ಸದರಿ ನಿಯಮಾವಳಿಯ ನಿಯಮ 14(ಎ)ರ ಅಡಿಯಲ್ಲಿ ವಿಚಾರಣೆ ಕೈಗೊಳ್ಳಲು ಮಾನ್ಯ ಉಪಲೋಕಾಯುಕ್ತರು, ಬೆಂಗಳೂರು ಇವರಿಗೆ ವಹಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1214 **ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

## ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ:ಕಸಂವಾಪ್ರ:4ಪ್ರವಾನಿ:2009, ಬೆಂಗಳೂರು, ದಿನಾಂಕ: 5ನೇ ಮೇ 2009**

ಸರ್ಕಾರದ ಅಧಿಸೂಚನೆ ಸಂಖ್ಯೆ:ಕಸಂವಾಪ್ರ 4 ಪ್ರವಾನಿ 2009, ದಿನಾಂಕ:11.02.2009ರ ಅಧಿಸೂಚನೆಯ ಐದನೇ ಪಂಕ್ತಿಯಿಂದ ತಾಜ್ ಕರ್ನಾಟಕ ಹೋಟೆಲ್ ಮತ್ತು ರೆಸಾರ್ಟ್ಸ್ ಸಂಸ್ಥೆಯ ನಿರ್ದೇಶಕರ ಮಂಡಳಿಗೆ ಎಂಬ ಪದಗಳ ನಂತರ "ಶ್ರೀ ಅನಿಲ್ ಕುಮಾರ್ ಝಾ, ಭಾ.ಆ.ಸೇ., ಸರ್ಕಾರದ ಕಾರ್ಯದರ್ಶಿ, ಆರ್ಥಿಕ ಇಲಾಖೆ (ವೆಚ್ಚ) ಇವರ ಸ್ಥಾನದಲ್ಲಿ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾರಾಯಣಪ್ಪ**

ಪಿ.ಆರ್. 1216 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ಹಾಗೂ ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಸೇವೆಗಳು–3)

## FOREST, ECOLOGY AND ENVIRONMENT SECRETARIAT

**Sub:** Diversion of 2.56 ha. of forest land for development of 15 MW Mini Hydel Scheme in Sy.No.66 of Jarkala Villae, Karkala Taluk across Yennehole Stream in Udupi District in favour of M/s GVP Infra Projects Private Limited, Bangaore.

**Read:**
1. Letter No.A5(3)GFL.CR.07/07-08, Dated: 13.03.2008 of Principal Chief Conservator of Forests, Bangalore.
2. State Government letter No. FEE 67 FLL 2008, dated: 28.03.2008.
3. Letter No. 4-KRB486/2008/BAN/2243, dated: 09.04.2008 of Government of India, Ministry of Environment and Forests, Regional Office, Southern Zone, Bangalore.
4. Letter No. A5(3)GFL.CR.7/07-08, Dated:16.10.2008 of Principal Chief Conservator of Forests, Bangalore.
5. State Government letter No. FEE 67 FLL 2008, dated: 31.03.2009.
6. Letter No.4-KRB486/2008-BAN/4287, dated: 20.04.2009 of Government of India, Ministry of Environment and Forests, Regional Office, Southern Zone, Bangalore.

**Preamble:**

The Principal Chief Conservator of Forests, Bangalore vide his letter dated:13.03.2008 read at (1) above has submitted the proposal to obtain the approval of Government of India under Section 2 of the Forest (Conservation) Act, 1980 for diversion of 2.56 ha. of deemed forest land in Sy.No.66 of Jarkala Village, Karkala Taluk across Yennehole Stream in Udupi District for development of 15 MW Mini Hydel Scheme in favour of M/s GVP Infra Projects Private Limited, Bangalore subject to certain conditions.

Accordingly the proposal was recommended to Government of India vide State Government letter date 28.03.2008 read at (2) above.

The Government of India, Ministry of Environment and Forests, Regional office, Bangalore vide their letter dated 09.04.2008 read at (3) above has given its approval in Principle (Stage-I) for diversion of

2.56 ha. of forest land subject to fulfillment of certain conditions and the same was communicated to the Principal Chief Conservator of Forests, Bangalore for compliance.

The Principal Chief Conservator of Forests, Bangalore vide his letter dated: 16.10.2008 furnished the compliance report read at (4) above and the same has been sent to Government of India vide State Government letter dated: 31.03.2008 read at (5) above.

Government of India Ministry of Environment and Forests, Regional Office, South Zone, Bangalore vide their letter dated 29/04/2009 read at (6) above has conveyed its approval (Stage-II) under Section 2 of the Forest (Conservation) Act, 1980 for diversion of 2.56 ha. of deemed forest land in Sy.No.66 of Jarkala Village, Karkala Taluk across Yennehole Stream in Udupi District for development of 15 MW Mini Hydel Scheme in favour of M/s GVP Infra Projects Private Limited, Bangalore subject to certain conditions.

The proposal has been examined in detail and hence the order.

**Government Order No. FEE 67 FLL 2008, Bangalore, Dated: 6th May 2009**

In the circumstances explained in the preamble above, Government are pleased to accord sanction under Section 2 of the Forest (Conservation) Act, 1980 for diversion of 2.56 ha. of deemed forest land in Sy.No.66 of Jarkala Village, Karkala Taluk across Yennehole Stream in Udupi District for development of 15 MW Mini Hydel Scheme in favour of M/s GVP Infra Projects Private Limited, Bangalore subject to the following conditions:-

1. The legal Status of the forest land shall remain unchanged.
2. The Compensatory Afforestation shall be raised over 5.12 ha.of degraded forest land at the cost of user agency.
3. The Catchment Area Treatment Plan shall be executed at the cost of user agency as per the plan under supervision of State Forest Department.
4. The funds received from the user agency towards Net Present Value and Catchment Area Treatment Plan and Compensatory afforestation under this project shall be transferred to Ad-hoc CAMPA in account number CA 1582 of Corporation Bank, Block-II, CGO Complex, Phase-I, Lodhi Road, New Dehi-110 003.
5. The additional amount of the Net Present Value (NPV) of the diverted forest land if any, due as per the orders of the Hon'ble Supreme Court dated: 28.03.2008 and 09.05.2008 in IA Nos. 826 in 566 with related IA's in W.P.(Civil) No.202/1995 shall be realised from the user agency and transferred to Ad-hoc CAMPA in account number CA-1582 of Corporation Bank, Block-II, CGO Complex, Phase-I, Lodhi Road, New Delhi-110 003 under intimation to the Government of India.
6. Adequate fire protection measures, measures, including employment of fire watchers and maintenance of the fire line, etc., shall be undertaken by the user agency in and around the project area at its own cost.
7. The total forest are utilised for the project shall not exceed 2.56 ha. The forest area shall be utilised only for the purpose for which it is diverted. In case the land is not taken over by the user agency or the same is not used for the stipulated purpose within a period of two years, then the area shall be taken back by the Forest Department.
8. The lease period is for a period of 20 years.
9. The user agency has to pay the lease rent as fixed by the Government at the time of sanction and any subsequent orders in this regard.
10. The Karnataka Forest Act 1963 and Rules 1969 will be applicable for any violation.
11. If the land is not utilized for the purpose with in 2 years, and also is any violation is found of the stipulated conditions, the forest land shall be forfeited to Department after due approval from

Government by the Conservator of Forests under section 82 of (read with section 69 of Karnataka Forest Rules) of the Karnataka Foest Act 1963.

12. Only minimum number of trees shall be cut based on actual requirement for laying the KV line.
13. The user agency shall pay the extraction and transportation charges of trees as estimated by the Deputy Conservator of Forests from the proposed land.
14. The user agency shall pay the cost of raising compensatory afforestation over an extent of 5.25 ha. of forest land at the rate prevailing at the time of approval (at present it is Rs. 84,000.00 per ha.)
15. The user agency shall pay the Net present vaue (NPV) as per the Government Notification dated: 17.1.2004 at Rs.5.80 lakhs to Rs. 9.20 lakhs per ha. depending upon the quantity and density of the land as determined by the Deputy Conservator of Forests, Kundapur Division, Kundapur.
16. Any other condition imposed by the Government of India/Government of Karnataka and Principal Chief Conservator of Forests will have to be abided by the lessee.

By Order and in the name of Governor of Karnataka,

**H.M. MALLIKARJUNA SWAMY**

P.R. 1217

Under Secretary to Government,

Forest, Ecology and Environment Department.

## ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

### ತಿದ್ದೋಲೆ

**ಸಂಖ್ಯೆ: ಕಸಂವಾಪ್ರ 159 ಸ್ವೀಮರ 2008, ಬೆಂಗಳೂರು, ದಿನಾಂಕ: 4ನೇ ಮೇ 2009**

ಸಚಿವಾಲಯದ ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಗೆ ವಾರ್ಷಿಕವಾಗಿ ಬೇಕಾಗುವ ಲೇಖನ ಸಾಮಗ್ರಿ ಮತ್ತು ಪೀಠೋಪಕರಣಗಳ ಖರೀದಿಯ ಬಗ್ಗೆ ಹೊರಡಿಸಿರುವ ಸರ್ಕಾರದ ಆದೇಶ ಸಂಖ್ಯೆ ಕಸಂವಾಪ್ರ 159 ಸ್ವೀಮರ 2008 ದಿನಾಂಕ: 19.03.2009 ಮತ್ತು 04.04.2009ರ ಆದೇಶ ಭಾಗದಲ್ಲಿ ನಮೂದಿಸಿಲಾದ ಈ ಕೆಳಕಂಡ ವಾಕ್ಯವನ್ನು ಆದೇಶ ಹೊರಡಿಸಿದ ದಿನದಿಂದಲೇ ಜಾರಿಗೆ ಬರುವಂತೆ ತೆಗೆದು ಹಾಕಲಾಗಿದೆ.

"ಈ ವೆಚ್ಚವನ್ನು ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ಡಿಎಸ್‌ವೈ 2008 ದಿನಾಂಕ: 10.10.2008ರಲ್ಲಿ ತಿಳಿಸಿರುವ"

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 1218

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

## ವಸತಿ ಸಚಿವಾಲಯ

**ವಿಷಯ:** ನಿರ್ಮಲಜ್ಯೋತಿ ಯೋಜನೆಯಡಿಯಲ್ಲಿ ದಾವಣಗೆರೆ ನಗರದ ಕೊಳಚೆ ಪ್ರದೇಶಗಳಲ್ಲಿ ಉನ್ನತೀಕರಣ ಮತ್ತು ಅಭಿವೃದ್ಧಿ ಪಡಿಸುವ ಕಾಮಗಾರಿಗಳಲ್ಲಿ ವರ್ಕ್‌ಸ್ಲಿಪ್‌ಗೆ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಮತ್ತು ತಿದ್ದುಪಡಿ ಸಂಖ್ಯೆ:ವಇ 23 ಕೊಮಂಲೆ 04, ದಿನಾಂಕ: 19.10.2006.

2. ಆಯುಕ್ತರು, ಕಕೊನಿಮ, ಬೆಂಗಳೂರು ಇವರ ಪತ್ರ ಸಂಖ್ಯೆ:ಕಕೊನಿಮ/ಆಯುಕ್ತರು/ನಿಜ್ಯೋ/ದಾವಣಗೆರೆ/2008–09/1016, ದಿನಾಂಕ:27.02.2009.

**ಪ್ರಸ್ತಾವನೆ:**

ಮೇಲೆ ಉಲ್ಲೇಖ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ದಾವಣಗೆರೆ ನಗರದ ವ್ಯಾಪ್ತಿಯಲ್ಲಿ ಬರುವ ಕೊಳಚೆ ಪ್ರದೇಶಗಳಲ್ಲಿನ ಕೊಳಚೆ ನಿವಾಸಿಗಳಿಗೆ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ನಿರ್ಮಲಜ್ಯೋತಿ ಯೋಜನೆಯಡಿಯಲ್ಲಿ ರೂ.322.81 ಲಕ್ಷಗಳು ಸಕ್ರಮ ಪ್ರಾಧಿಕಾರದಿಂದ ತಾಂತ್ರಿಕ ಹಾಗೂ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿರುತ್ತದೆ. ಈ ಕಾಮಗಾರಿಯನ್ನು ನಿರ್ವಹಿಸಲು ಟೆಂಡರ್ ಕರೆಯಲಾಗಿ ರೂ.333.51 ಲಕ್ಷಗಳಿಗೆ ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಯ ಟೆಂಡರ್ ಅಧಿಸೂಚನೆ ದಿನಾಂಕ: 14.03.2006ರಲ್ಲಿ ಟೆಂಡರ್ ಷೆಡ್ಯೂಲ್‌ಗಳ ಷರತ್ತುಗಳಂತೆ ಕಾಮಗಾರಿಗಳನ್ನು ನಿರ್ವಹಿಸಲು ಗುತ್ತಿಗೆದಾರರಾದ ಮೆ: ಪ್ರಕಾಶ್ ಕನ್‌ಸ್ಟ್ರಕ್ಷನ್ ಇವರಿಗೆ ನೀಡಲು ಸರ್ಕಾರ ಮಂಜೂರಾತಿ ನೀಡಿರುತ್ತದೆ.

ಮೇಲೆ ಕ್ರಮ ಸಂಖ್ಯೆ 2ರಲ್ಲಿ ಓದಲಾದ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ ಇವರ ಪ್ರಸ್ತಾವನೆಯಲ್ಲಿ ನಿರ್ಮಲ ಜ್ಯೋತಿ 2ನೇ ಹಂತದಲ್ಲಿ ದಾವಣಗೆರೆ ನಗರದ 14 ಕೊಳಚೆ ಪ್ರದೇಶಗಳಲ್ಲಿ ಸಮಗ್ರವಾಗಿ ಅಭಿವೃದ್ಧಿ ಕಾಮಗಾರಿಗಳನ್ನು ರೂ. 333.51 ಲಕ್ಷಗಳಲ್ಲಿ ತೆಗೆದುಕೊಳ್ಳಲಾಗಿದ್ದು, ಕಾಮಗಾರಿಯು ಪೂರ್ಣಗೊಳ್ಳುವ ಹಂತದಲ್ಲಿದ್ದು, ಪ್ರಾಯೋಜನಾ ವ್ಯವಸ್ಥಾಪಕರು (ತಾಂ) ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ದಾವಣಗೆರೆ ವಿಭಾಗದವರು ಕಾಮಗಾರಿಯು ಪ್ರಗತಿಯಲ್ಲಿರುವಂತೆ ಟೆಂಡರ್ ಷೆಡ್ಯೂಲ್–ಬಿ ನಲ್ಲಿರುವ ಕೆಲವು ಕಾಮಗಾರಿಗಳ ಪರಿಮಾಣಗಳಲ್ಲಿ ಅಗತ್ಯಕ್ಕೆ ಮತ್ತು ಸ್ಥಳಕ್ಕನುಗುಣವಾಗಿ ಸಿ.ಸಿ. ನೆಲಹಾಸು, ಸಿ.ಸಿ.ಬ್ಲಾಕ್ ಚರಂಡಿ ಹಾಗೂ ಮಣ್ಣುಸಾಗಣೆ ನಿರ್ಮಾಣದಲ್ಲಿ ಹೆಚ್ಚುವರಿ ಪರಿಮಾಣಗಳನ್ನು ನಿರ್ವಹಿಸಬೇಕಾಗಿದ್ದರಿಂದ ಪ್ರಸ್ತಾಪಿತ ಹೆಚ್ಚುವರಿ ಕಾಮಗಾರಿಗಳನ್ನು ಇಲ್ಲಿನ ಜನಪ್ರತಿನಿಧಿಗಳು ಹಾಗೂ ಕೊಳಚೆ ನಿವಾಸಿಗಳ ಒತ್ತಾಯದ ಹಿನ್ನೆಲೆಯಲ್ಲಿ ದಿನಾಂಕ:19.12.2007ರಂದು ಪ್ರಾಯೋಜನ ವ್ಯವಸ್ಥಾಪಕರು, ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ದಾವಣಗೆರೆ ರವರು ಪ್ರಸ್ತಾಪಿತ ಕಾಮಗಾರಿಗಳ ಸ್ಥಳದ ಅಗತ್ಯತೆಗಳಿಗನುಗುಣವಾಗಿ ಕಾಮಗಾರಿಗಳಲ್ಲಿ ಹೆಚ್ಚುವರಿ ಮತ್ತು ಕಡಿಮೆ ಪರಿಮಾಣಗಳು ಅಥವಾ ಬದಲಾವಣೆಗಳು ಆಗಿರುವ ಬಗ್ಗೆ ಸ್ಥಳಪರಿಶೀಲನೆ ವರದಿ ಮಾಡಿರುತ್ತಾರೆ. ಅದರಂತೆ ಪ್ರಸ್ತುತ ತಯಾರಿಸಿರುವ ರೂ. 1,58,42,640/– ರ ವರ್ಕ್‌ಸ್ಲಿಪ್‌ನ ಮೊತ್ತವು ಅಂದಾಜು ಮೊತ್ತ ರೂ.322.88 ಲಕ್ಷಗಳಿಗೆ ಹೋಲಿಸಿದಾಗ ಶೇಕಡ 49.07 ರಷ್ಟು ಹೆಚ್ಚಾಗಿರುತ್ತದೆ.

ಈ ಹೆಚ್ಚುವರಿ ಮೊತ್ತವನ್ನು ಉಳಿತಾಯವಾಗಲಿರುವ ರೂ. 159.00 ಲಕ್ಷಗಳಲ್ಲಿ ಭರಿಸಲಾಗುವುದೆಂದು ಹಾಗೂ ಈ ಯೋಜನೆ ಪೂರ್ಣಗೊಂಡಾಗ ಗುತ್ತಿಗೆದಾರರಿಗೆ ವಹಿಸಿರುವ ಈಗಾಗಲೇ ಅನುಮೋದನೆಯಾಗಿರುವ ಟೆಂಡರ್ ಮೊತ್ತ ರೂ.333.51 ಲಕ್ಷಗಳಿಗಿಂತ ಹೆಚ್ಚುವರಿಯಾಗದಂತೆ ನೋಡಿಕೊಳ್ಳಲಾಗುವುದರಿಂದ ಮಂಡಳಿಗೆ ಯಾವುದೇ ಹೆಚ್ಚಿನ ಆರ್ಥಿಕವು ಹೊರೆಯಾಗುವುದಿಲ್ಲವೆಂದು ಪ್ರಾಯೋಜನಾ ವ್ಯವಸ್ಥಾಪಕರು (ತಾಂ) ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ, ದಾವಣಗೆರೆ ವಿಭಾಗದವರು ತುಲಾನಾತ್ಮಕ ಪಟ್ಟಿಯೊಂದಿಗೆ ವರದಿ ಮಾಡಿರುತ್ತಾರೆ. ಸದರಿ ವರ್ಕ್‌ಸ್ಲಿಪ್‌ನ್ನು ದಿನಾಂಕ: 10.02.2009ರಂದು ನಡೆದ ಮಂಡಳಿ ಸಭೆಯ ಹೆಚ್ಚುವರಿ ವಿಷಯ ಸಂಖ್ಯೆ 28ರಲ್ಲಿ ಪ್ರಸ್ತಾವನೆ ಅನುಮೋದಿಸಿ, ಪ್ರಸ್ತಾವನೆಯನ್ನು ಸರ್ಕಾರದ ಅನುಮೋದನೆಗಾಗಿ ಸಲ್ಲಿಸಿರುತ್ತಾರೆ. ಪ್ರಸ್ತುತ ತಯಾರಿಸಿರುವ ರೂ. 1,58,42,640/– ವರ್ಕ್‌ಸ್ಲಿಪ್‌ನ ಮೊತ್ತವು ಪ್ರಸ್ತುತ ಅಂದಾಜು ಮೊತ್ತ ರೂ.322.88 ಲಕ್ಷಗಳಿಗೆ ಹೋಲಿಸಿದಾಗಿ ಶೇಕಡ 49.07 ರಷ್ಟು ಹೆಚ್ಚುವರಿಯಾಗಿದ್ದು, ಈ ಹೆಚ್ಚುವರಿ ಅಧಿಕಾರವು ಸರ್ಕಾರದ ವ್ಯಾಪ್ತಿಗೆ ಬರುವುದರಿಂದ ಮಂಜೂರಾತಿ ನೀಡಲು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 5 ಕೊಮಂಲೆ 2009, ಬೆಂಗಳೂರು, ದಿನಾಂಕ: 2ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ ದಾವಣಗೆರೆ ನಗರದಲ್ಲಿ ನಿರ್ಮಲ್ ಜ್ಯೋತಿ ಯೋಜನೆಯಡಿಯಲ್ಲಿ ರೂ.333.51 ಲಕ್ಷಗಳ ಟೆಂಡರ್ ಪಟ್ಟಿಯ ಕಾಮಗಾರಿಗಳಿಗೆ ಮಂಜೂರಾತಿ ನೀಡಿದ್ದು, ಪ್ರಸ್ತಾಪಿತ ಕಾಮಗಾರಿಗಳಲ್ಲಿ ಹೆಚ್ಚುವರಿ ಪರಿಮಾಣಗಳ ವರ್ಕ್‌ಸ್ಲಿಪ್‌ನ್ನು ಟೆಂಡರ್ ಗುತ್ತಿಗೆ ಕರಾರಿನ ಕಂಡಿಕೆ 3,12,3ರನ್ವಯ (ಪಿ.ಡಬ್ಲ್ಯು.ಜಿ 13ಎ) ಸ್ಥಳದ ಅಗತ್ಯತೆ ಮತ್ತು ಅವಶ್ಯಕತೆಗನುಗುಣವಾಗಿ ಕಾಮಗಾರಿಗಳಲ್ಲಿ ಹೆಚ್ಚುವರಿ ಪರಿಮಾಣಗಳು, ಕಡಿಮೆ ಪರಿಮಣಗಳು ಅಥವಾ ಬದಲಾವಣೆ ಅಂಶಗಳನ್ನು ಕೈಗೊಳ್ಳಲು ಅವಕಾಶವಿರುವುದರಿಂದ, ಈ ಕಾಮಗಾರಿಯಲ್ಲಿ ಉಳಿತಾಯವಾಗಲಿರುವ ಹಣದಿಂದ ಕಾಮಗಾರಿಗಳನ್ನು ಕೈಗೊಳ್ಳಲು ಉದ್ದೇಶಿಸಲಾಗಿರುವುದರಿಂದ, ಕಾಮಗಾರಿ ಇತರೆ ಬಾಬ್ತುಗಳಿಂದ ಪೂರ್ಣಗೊಂಡಾಗ ಒಟ್ಟಾರೆ ಗುತ್ತಿಗೆದಾರರಿಗೆ ವಹಿಸಿರುವ ಮೊತ್ತಕ್ಕಿಂತ ಯಾವುದೇ ಆರ್ಥಿಕ ಹೆಚ್ಚುವರಿಯಾಗದಂತೆ ನಿರ್ವಹಿಸುವ ಕಾಮಗಾರಿಗೆ ತಯಾರಿಸಿರುವ ವರ್ಕ್‌ಸ್ಲಿಪ್‌ನ ಮೊತ್ತ ರೂ.1,58,42,640/– ಗಳಾಗಿದ್ದು, ಇದು ಮೂಲ ಅಂದಾಜು ಮೊತ್ತಕ್ಕೆ ಹೋಲಿಸಿದಾಗ ಪ್ರಸ್ತುತ ಅಂದಾಜು ಮೊತ್ತವಾದ ರೂ.322.88 ಲಕ್ಷಗಳಿಗೆ ಶೇ. 49.07 ರಷ್ಟು ಹೆಚ್ಚುವರಿಯಾಗಿದ್ದು, ಮಂಡಳಿಯ ಅಧಿಕಾರ ವ್ಯಾಪ್ತಿ ಮೀರಿರುವುದರಿಂದ ಹಾಗೂ ಇದು ಒಟ್ಟಾರೆ ಗುತ್ತಿಗೆದಾರರಿಗೆ ವಹಿಸುವ ಮೊತ್ತಕ್ಕೆ ಮೀರದೇ ಇರುವುದರಿಂದ ಹಾಗೂ ದಿನಾಂಕ: 19.10.2006ರ ಆದೇಶದಲ್ಲಿ ವಿಧಿಸಿರುವ ಷರತ್ತುಗಳನ್ನು ಕಟ್ಟುನಿಟ್ಟಾಗಿ ಪಾಲಿಸುವ ಷರತ್ತಿಗೆ ಒಳಪಟ್ಟು ರೂ.1,58,42,640/– ಗಳ ವರ್ಕ್‌ಸ್ಲಿಪ್‌ಗೆ ಸರ್ಕಾರ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 08, ದಿನಾಂಕ: 16.05.2008ರಲ್ಲಿ ಆಡಳಿತ ಇಲಾಖೆಯ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದಂತೆ ಹಾಗೂ ಅಂತರಿಕ ಆರ್ಥಿಕ ಸಲಹೆಗಾರರ ಹಿಂಬರಹ ಸಂಖ್ಯೆ: ವನಇ 113 ಅಂಆಸ 2009, ದಿನಾಂಕ: 23.03.2009ರಲ್ಲಿ ನೀಡಿರುವ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1219

**ಜಿ.ಆರ್. ನಾಗರಾಜ**

ಪೀಠಾಧಿಕಾರಿ–4, ವಸತಿ ಇಲಾಖೆ.

**HEALTH AND FAMILY WELFARE SECRETARIAT**

**CORRIGENDUM**

**No.HFW 52 IMM 2009, Bangalore, Dated: 30th April 2009**

In partial modifications of Notification-I, III, and IV bearing No. HFW/152/IMM/07, dated: 12.2.2008, in Column No. 3 of Sl.No. 22 the words appearing as "Area comprising the entire Bangalore Rural District including Anekal Taluk" shall be read as **"Area comprising the entire Bangalore Rural District".**

This is deemed to have come into effect from 16.06.2008 i.e., The date of the earlier Notifications (I,III & IV) No. HFW 53 IMM 2008 date: 16.06.2008.

By Order and in the name of Governor of Karnataka,

**N. MAHALAKSHMAMMA**

P.R. 1220

Under Secretary to Government,

Health & Family Welfare Department (Indian Medicine Department)

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಆಕುಕ 199 ಪಿಐಎಂ 2007, ಬೆಂಗಳೂರು, ದಿನಾಂಕ: 12ನೇ ಮೇ 2009**

ಸರ್ಕಾರದ ಆದೇಶ ಸಂಖ್ಯೆ: ಆಕುಕ 199 ಪಿಐಎಂ 2007, ದಿನಾಂಕ: 24.04.2008 ಎಂಬುದರ ಬದಲಾಗಿ ಸರ್ಕಾರದ ಆದೇಶ ಸಂಖ್ಯೆ:ಆಕುಕ 199 ಪಿಐಎಂ 2007, ದಿನಾಂಕ: 24.04.2009 ಎಂದು ತಿದ್ದಿ ಓದಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಮಹಾಲಕ್ಷ್ಮಮ್ಮ**

ಪಿ.ಆರ್. 1221

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಭಾರತೀಯ ವೈದ್ಯ ಪದ್ಧತಿ)

**ಆರ್ಥಿಕ ಸಚಿವಾಲಯ**

**ವಿಷಯ:** ಶ್ರೀ ಬಿ. ಗಂಗಣ್ಣ, ಮುಖ್ಯ ಲೆಕ್ಕಾಧಿಕಾರಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಇವರ ಪತ್ರ ಸಂ:ಲೋಕ್/ಐಎನ್‌ವಿ(ಜಿ)/ಸಿಟಿ/ಕ್ರೈಂ.15/2009, ದಿ:6.3.09.

**ಪ್ರಸ್ತಾವನೆ:**

ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಶ್ರೀ ಗಂಗಣ್ಣ, ಮುಖ್ಯ ಲೆಕ್ಕಾಧಿಕಾರಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಪ್ರಧಾನ ಕಚೇರಿ, ಬೆಂಗಳೂರು ಇವರು ಗುತ್ತಿಗೆದಾರರಿಂದ ಎಲ್.ಓ.ಸಿ.ಗಳನ್ನು ನೀಡುವ ಬಗ್ಗೆ ಅಪಾರ ಪ್ರಮಾಣದಲ್ಲಿ ಲಂಚದ ಹಣವನ್ನು ಸ್ವೀಕರಿಸುತ್ತಿದ್ದಾರೆಂಬ ದಿ:20.2.2009ರಂದು ದೊರೆತ ಖಚಿತ ಮಾಹಿತಿಯನ್ನಾಧರಿಸಿ, ಶ್ರೀ ಬಿ.ಪರಮೇಶ್ವರಪ್ಪ, ಪೊಲೀಸ್ ಉಪಾಧೀಕ್ಷಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು ನಗರ ಪೊಲೀಸ್ ಠಾಣೆ ಇವರು ಶ್ರೀ ಬಿ.ಗಂಗಣ್ಣ, ಮುಖ್ಯ ಲೆಕ್ಕಾಧಿಕಾರಿ, ಬಿ.ಬಿ.ಎಂ.ಪಿ. ಬೆಂಗಳೂರು ಹಾಗೂ ಶ್ರೀ ಹೊಂಬೇಗೌಡ, ಗುತ್ತಿಗೆದಾರರು ಬೆಂಗಳೂರು ಇವರುಗಳ ವಿರುದ್ಧ ಭ್ರಷ್ಟಾಚಾರ ನಿರೋಧ ಕಾಯ್ದೆ – 1988ರ ಕಲಂ 7, 12, 13(1)(ಡಿ)ಸಹವಾಚನ ಕಲಂ 13(2)ರ ರೀತ್ಯ, ದಿ:20.2.09ರಂದು ಬೆಂಗಳೂರು ನಗರ ಲೋಕಾಯುಕ್ತ ಪೊಲೀಸ್ ಠಾಣೆಯ ಮೊಕದ್ದಮೆ ಸಂ:15/2009ರಲ್ಲಿ ಪ್ರಕರಣವನ್ನು ದಾಖಲಿಸಿಕೊಂಡು ತನಿಖೆಯನ್ನು ಕೈಗೊಂಡಿದ್ದು, ಔಚಿತ್ಯ ಪೂರ್ವ ಕಾರ್ಯಗಳನ್ನು ನೆರವೇರಿಸಿದ ನಂತರ, ಲೋಕಾಯುಕ್ತದ ತನಿಖಾಧಿಕಾರಿಗಳು ತಮ್ಮ ಸಿಬ್ಬಂದಿ ಹಾಗೂ ಪಂಚ ಸಾಕ್ಷಿಗಳ ಸಮೇತ ದಿ:20.2.09ರಂದು ಬೆಂಗಳೂರು ಮಹಾನಗರ ಪಾಲಿಕೆಯ ಕೇಂದ್ರ ಕಚೇರಿಯ ಆವರಣದೊಳಗೆ ವಾಹನ ನಿಲುಗಡೆ ಸ್ಥಳದಲ್ಲಿ ಗೋಲ್ಡ್ ಕಲರಿನ ಜೆನ್ ಕಾರ್ ನೋಂದಣಿ ಸಂ:ಕೆಎ–012–ಜೆಡ್–4448 ನಿಂತಿದ್ದು, ಸದರಿ ಕಾರಿನ ಬಳಿ ಬರುವ ಮತ್ತು ಕಾರಿನೊಳಗೆ ಪ್ರವೇಶಿಸುವ ವ್ಯಕ್ತಿಗಳ ಬಗ್ಗೆ ನಿಗಾವಹಿಸಿ ಕಾಯುತ್ತಿರುವಾಗ, ಸುಮಾರು 1–45 ಗಂಟೆ ಮಧ್ಯಾಹ್ನದ ಸಮಯದಲ್ಲಿ ಆರೋಪಿತರಾದ ಶ್ರೀ ಬಿ.ಗಂಗಣ್ಣ ಮುಖ್ಯ ಲೆಕ್ಕಾಧಿಕಾರಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಪ್ರಧಾನ ಕಚೇರಿ, ಬೆಂಗಳೂರು ಹಾಗೂ ಅವರ ವಾಹನ ಚಾಲಕ ಶ್ರೀ ಗೋಪಾಲಕೃಷ್ಣಾಚಾರಿ ರವರುಗಳು ಮೇಲೆ ತಿಳಿಸಿದ ಕಾರಿನೊಳಗೆ ಪ್ರವೇಶಿಸಿ, ಹಿಂಬದಿಯ ಸೀಟಿನಲ್ಲಿ ಕುಳಿತುಕೊಂಡು ಮುಂಭಾಗದ ಸೀಟಿನ ಹಿಂದೆ ಅಳವಡಿಸಲಾಗಿದ್ದ ರೆಕ್ಸಿನ್ ಬ್ಯಾಗ್‌ನಲ್ಲಿ

ಕೈಹಾಕಿ ಒಂದು ಪ್ಲಾಸ್ಟಿಕ್ ಬ್ಯಾಗ್‌ನ್ನು ಹೊರಗೆ ತೆಗೆದು, ಸದರಿ ಬ್ಯಾಗ್‌ನ್ನು ಪರಿಶೀಲಿಸುತ್ತಿದ್ದ ಆರೋಪಿ ಶ್ರೀ ಗಂಗಣ್ಣನವರನ್ನು ಕಾರ್ ಬಾಗಿಲಿನ ಗ್ಲಾಸ್‌ಗಳನ್ನು ತೆರೆದಿದ್ದುದರಿಂದ ಗಮನಿಸಿದ ತನಿಖಾಧಿಕಾರಿಯವರು ಸದರಿ ಕಾರಿನಲ್ಲಿ ಸಂಗ್ರಹಿಸಿದ್ದ ಲಂಚದ ಹಣ ರೂ.5,03,000/–ಗಳ ಸಮೇತ ಆರೋಪಿತರಾದ ಶ್ರೀ ಗಂಗಣ್ಣ ರವರನ್ನು ಪಂಚಸಾಕ್ಷಿಗಳೊಂದಿಗೆ ಸುತ್ತುವರೆದು ಹಿಡಿದಿರುತ್ತಾರೆ. ಸದರಿ ಕಾರಿನಲ್ಲಿದ್ದ ಚಾಲಕ ಶ್ರೀ ಗೋಪಾಲಕೃಷ್ಣಾಚಾರಿಯವರನ್ನು ತನಿಖಾಧಿಕಾರಿಯವರು ವಿಚಾರಣೆ ಮಾಡಿದಾಗ, ಅವರು ಸದರಿ ಲಂಚ ಹಣವನ್ನು ಕಾರಿನಲ್ಲಿಡಲು ಆರೋಪಿ ಶ್ರೀ ಗಂಗಣ್ಣರವರು ತಮಗೆ ತಿಳಿಸಿದ್ದಾಗಿ ಹೇಳಿರುತ್ತಾರೆ. ಲಂಚದ ಹಣವನ್ನು ತನಿಖಾಧಿಕಾರಿಯವರು ಪಂಚರ ಸಮಕ್ಷಮ ಅಮಾನತ್ತುಪಡಿಸಿಕೊಂಡಿರುತ್ತಾರೆ.

ಆರೋಪಿ–1 ಶ್ರೀ ಗಂಗಣ್ಣ, ಮುಖ್ಯ ಲೆಕ್ಕಾಧಿಕಾರಿ ಯವರನ್ನು ಲಂಚ ಸ್ವೀಕಾರದ ಆರೋಪದ ಮೇಲೆ ಭ್ರಷ್ಟಾಚಾರ ನಿರೋಧ ಕಾಯ್ದೆ – 1988ರ ಕಲಂ 7, 12, 13(1) (ಡಿ) ಸಹವಾಚನ 13(2) ರೀತ್ಯ ತನಿಖಾಧಿಕಾರಿಯವರು ದಿ:20.2.2009ರಂದು ದಸ್ತಗಿರಿ ಮಾಡಿ, ಘನ ನ್ಯಾಯಾಧೀಶರ ಮುಂದೆ ಹಾಜರುಪಡಿಸಿದ್ದು, ಘನ ನ್ಯಾಯಾಲಯವು ಅವರನ್ನು ನ್ಯಾಯಾಂಗ ಬಂಧನಕ್ಕೆ ಒಪ್ಪಿಸಿದ್ದು, ಹಾಲಿ ಆರೋಪಿ–1 ರವರು ದಿ:25.2.2009ರಂದು ಜಾಮೀನಿನ ಮೇಲೆ ಬಿಡುಗಡೆ ಹೊಂದಿರುವುದಾಗಿ ತಿಳಿಸಿರುತ್ತಾರೆ.

ಮೇಲೆ ವಿವರಿಸಿದಂತೆ, ಆರೋಪಿ–1 ಶ್ರೀ ಗಂಗಣ್ಣರವರು ಭ್ರಷಾಚಾರ ನಿರೋಧ ಕಾಯ್ದೆ – 1988ರ ಕಲಂ 7, 12, 13(1)ಡಿ ಜೊತೆಗೆ 13(2)ರ ರೀತ್ಯ ಶಿಕ್ಷಾರ್ಹ ಅಪರಾಧವೆಸಗಿರುವುದು ಪ್ರಾಥಮಿಕ ತನಿಖಾ ಸಮಯದಲ್ಲಿ ದೊರೆತ ಸಾಕ್ಷ್ಯಾಧಾರಗಳಿಂದ ದೃಢಪಟ್ಟಿರುತ್ತದೆ.

ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು 1957ರ ನಿಯಮ 10ರನ್ವಯ ಆರೋಪಿ–1 ಶ್ರೀ ಗಂಗಣ್ಣನವರನ್ನು ದಸ್ತಗಿರಿಯಾದ ದಿನಾಂಕದಿಂದ ಅಂದರೆ, 20.2.2009 ರಿಂದಲೇ ಅಮಾನತ್ತಿನಲ್ಲಿಟ್ಟಿರುವಂತೆ ಪರಿಗಣಿಸಬಹುದಾಗಿರುತ್ತದೆ ಎಂದು ತಿಳಿಸಿರುತ್ತಾರೆ. ಕರ್ನಾಟಕ ಲೋಕಾಯುಕ್ತರ ಶಿಫಾರಸ್ಸನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆಇ 89 ರಾಲೆಪ 2009, ಬೆಂಗಳೂರು, ದಿನಾಂಕ: 14ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಬಿ.ಗಂಗಣ್ಣ, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಖೆ ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ & ಮೇಲ್ಮನವಿ) ನಿಯಮಗಳು 1957ರ ನಿಯಮ 10(2)(a) ರನ್ವಯ ದಿನಾಂಕ:20.2.2009ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಅಮಾನತ್ತಿನಲ್ಲಿಡಲಾಗಿದೆ.

ಅಮಾನತ್ತಿನಲ್ಲಿರುವ ಅವಧಿಯಲ್ಲಿ ಶ್ರೀ ಬಿ.ಗಂಗಣ್ಣ, ಜಂಟಿ ನಿಯಂತ್ರಕರು ಇವರಿಗೆ ನಿಯಮಾನುಸಾರ ಜೀವನಾಧಾರ ಭತ್ಯೆಯನ್ನು ಸಂದಾಯ ಮಾಡತಕ್ಕದ್ದು. ಅಮಾನತ್ತಿನಲ್ಲಿರುವ ಅವಧಿಯಲ್ಲಿ ಇವರು ನಿಯಮಗಳ ಪ್ರಕಾರ ಸಕ್ಷಮ ಪ್ರಾಧಿಕಾರಿಯ ಲಿಖಿತ ಅನುಮತಿಯಿಲ್ಲದೆ ತಮ್ಮ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1222

**ಎನ್. ಶ್ರೀನಿವಾಸ ಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

## HOME SECRETARIAT

**Sub:** General Elections to Loksabha, 2009 from the State of Karnataka – dereliction of duty on the part of D.S.P, Channapatna – suspension of Sri Prakash Gowda, Dy.SP, Channapatna.

**Read:** Letter No.437/KT-HP/2009, dated 04.05.2009 from Sri Tapas Kumar, Principal Secretary, Election Commission of India, New Delhi, addressed to Chief Secretary to Government of Karnataka.

**Preamble:**

In the letter read at (1) above, Principal Secretary, Election Commission of India has stated that the Commission has come to know that Sri Prakash Gowda, D.S.P. Channapatna and Police Sub-Inspector, Channapatna were handed over search warrants under section 94 of the Cr. P.C. by SDM, Ramanagara for carrying out search of house of one Mr.Dinesh against whom there was a credible information that more than Rs.1.5 Crores was stored at his house for distribution in the electorate, including some counterfeit money also. The officer delayed the search warrants and even told that he will not do the search as the search involved breaking up of the door of the said premises and he also stated

that he could not do the search even if he is placed under suspension or departmental action is initiated against him. The Commission is of the considered view that refusal to carry out lawful directions of the Magistrate amounts to gross negligence of duties. The Commission has also reiterated that under Section 28A of the Representation of People's Act, 1951 all officers of the State, civil and police departments, are under deputation with Election Commission of India till completion of poll.

The Commission has directed that the officer should be placed under suspension forth with and compliance report be sent to the Commission by 3.00 PM of 04.05.2009 and disciplinary action under the rules governing the services of the officer should also be initiated immediately under intimation to the Commission.

**Government Order No. OE 194 POSIPA 2009, Bangalore, Dated: 4th May 2009**

In the circumstances explained above, Sri Prakash Gowda, Deputy Superintendent of Police (civil), Channapatna Sub-division is placed under suspension with immediate effect s per rule 5 of the Karnataka State Police (Disciplinary proceedings) Rules, 1965 pending institution of disciplinary enquiry under rule 6 of the Karnataka State Police (Disciplinary proceedings) Rules, 1965.

During the period of suspension the officer is eligible for subsistence allowance as per rules.

Sri Prakash Gowda, Dy.SP should not leave head quarters during the period of suspension without permission of higher officers.

By Order and in the name of Governor of Karnataka

P.R. 1223

**T.N. RAVIPRAKASH**

Under Secretary to Government, Home Department (Police services)

**ಇಂಧನ ಸಚಿವಾಲಯ**

**ವಿಷಯ:** ಮೆ:: ಬಳ್ಳಾರಿ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆ ಮಾಡಲಾಗಿರುವ 24.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಇಂಇ 243 ಎನ್‌ಸಿಇ 2002 ದಿನಾಂಕ: 5.3.2003 ಮತ್ತು 13.7.2005.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/Vol IV/2008/2028 ದಿನಾಂಕ: 2/3.12.2008.

3) ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಎನ್ 465 ಎನ್‌ಸಿಇ 2008 ದಿನಾಂಕ: 27.12.2008.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ :: ಬಳ್ಳಾರಿ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಬಳ್ಳಾರಿ ಜಿಲ್ಲೆಯ ಗುರುಸಿದ್ದಾಪುರ ಹಳ್ಳಿಯಲ್ಲಿ 10.00 ಮೆಗಾ ವ್ಯಾಟ್, ಗೊಲ್ಲರಹಟ್ಟಿ ಮತ್ತು ಜರಮಲೈನಲ್ಲಿ 6.00 ಮೆಗಾ ವ್ಯಾಟ್, ಮುನಿರಾಬಾದ್‌ನಲ್ಲಿ 8.00 ಮೆಗಾ ವ್ಯಾಟ್ ಒಟ್ಟು 24.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಒಡಂಬಡಿಕೆ ಮಾಡಿಕೊಂಡ ದಿನಾಂಕದಿಂದ 4 ವರ್ಷಗಳ ಅವಧಿಯಲ್ಲಿ ಅನುಷ್ಠಾನಗೊಳಿಸಲು ಮಂಜೂರು ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಸದರಿ ಅಭಿವೃದ್ಧಿದಾರರಿಗೆ ಯೋಜನೆ ಹಂಚಿಕೆಯಾಗಿ 6 ವರ್ಷ ಕಳೆದರೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿ ಸಾಧಿಸಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ಯೋಜನೆಯ ಹಂಚಿಕೆ ಆದೇಶವನ್ನು ರದ್ದು ಪಡಿಸುವಂತೆ ಹಾಗೂ ಒಡಂಬಡಿಕೆಯನ್ನು ಮುಕ್ತಾಯಗೊಳಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಯೋಜನೆಯ ಅನುಷ್ಠಾನಕ್ಕಾಗಿ ಅನುಮತಿ ನೀಡಿ 6 ವರ್ಷ ಕಳೆದರೂ ಇದುವರೆಗೂ ಅನುಷ್ಠಾನದ ನಿಟ್ಟಿನಲ್ಲಿ ಮೆ:: ಬಳ್ಳಾರಿ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯು ಯಾವುದೇ ಕ್ರಮ ಕೈಗೊಳ್ಳದೇ ಇರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದೆಂಬುದಕ್ಕೆ ಸಮಜಾಯಿಷಿಯನ್ನು ನೀಡುವಂತೆ ನೋಂದಾಯಿತ ಅಂಚೆ ಮೂಲಕ ತಿಳಿಸಲಾಗಿತ್ತು. ಆದರೆ, ಕಾರಣ ಕೇಳುವ ನೋಟೀಸು ಲಕೋಟೆಯು 'No such firm in this address, return to sender' ಎಂದು ವಾಪಸ್ ಬಂದಿರುತ್ತದೆ. ಇದರಿಂದಾಗಿ ಅಭಿವೃದ್ಧಿದಾರರು ಸದರಿ ವಿಳಾಸದಲ್ಲಿ ವಾಸ್ತವ್ಯ ಇಲ್ಲದಿರುವುದು ಹಾಗೂ ಸುಮಾರು 6 ವರ್ಷಗಳಿಂದ ಯೋಜನೆಯ

ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಮೆ:: ಬಳ್ಳಾರಿ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರು ಯಾವುದೇ ಪ್ರಗತಿ ಸಾಧಿಸಿಲ್ಲದಿರುವುದು ಸ್ಪಷ್ಟವಾಗುತ್ತದೆ.

ಸದರಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 465 ಎನ್‌ಸಿಇ 2008, ಬೆಂಗಳೂರು, ದಿನಾಂಕ: 8ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರಿ ಆದೇಶ ಸಂಖ್ಯೆ: ಇಂಇ 243 ಎನ್‌ಸಿಇ 2002 ದಿನಾಂಕ: 5.3.2003 ಮತ್ತು 13.7.2005 ರಲ್ಲಿ ಮೆ :: ಬಳ್ಳಾರಿ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಬಳ್ಳಾರಿ ಜಿಲ್ಲೆಯ ಗುರುಸಿದ್ದಾಪುರ ಹಳ್ಳಿಯಲ್ಲಿ 10.00 ಮೆಗಾ ವ್ಯಾಟ್, ಗೊಲ್ಲರಹಟ್ಟಿ ಮತ್ತು ಜರಮಲೈನಲ್ಲಿ 6.00 ಮೆಗಾ ವ್ಯಾಟ್, ಮುನಿರಾಬಾದ್‌ನಲ್ಲಿ 8.00 ಮೆಗಾ ವ್ಯಾಟ್ ಒಟ್ಟು 24.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1224 **ಎಸ್.ಜಿ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ,

**ವಿಷಯ:** ಮೆ:: ಕ್ರಾಂತಿ ಎನರ್ಜಿ ಸಿಸ್ಟಮ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆ ಮಾಡಲಾಗಿರುವ 0.7 ಮೆಗಾ ವ್ಯಾಟ್ ಸಾಮರ್ಥ್ಯದ ಸಿಂಧನೂರ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಡಿಇ 5 ಎನ್‌ಸಿಇ 2002 ದಿನಾಂಕ: 15.7.2002.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ಎಸ್‌ಹೆಚ್‌ಪಿ/08/2029 ದಿನಾಂಕ: 2/3.12.2008.

3) ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಎನ್ 525 ಎನ್‌ಸಿಇ 2008 ದಿನಾಂಕ: 27.12.2008.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ :: ಕ್ರಾಂತಿ ಎನರ್ಜಿ ಸಿಸ್ಟಮ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಟಿ.ಎಲ್.ಬಿ.ಸಿ. ಡಿ–36, ಬಸಪುರ, ಸಿಂಧನೂರು ತಾಲ್ಲೂಕು, ರಾಯಚೂರು ಜಿಲ್ಲೆಯಲ್ಲಿ 0.7 ಮೆಗಾ ವ್ಯಾಟ್ ಸಾಮರ್ಥ್ಯದ ಸಿಂಧನೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಒಡಂಬಡಿಕೆ ಮಾಡಿಕೊಂಡ ದಿನಾಂಕದಿಂದ 3 ವರ್ಷಗಳ ಅವಧಿಯಲ್ಲಿ ಅನುಷ್ಠಾನಗೊಳಿಸಲು ಮಂಜೂರು ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಸದರಿ ಅಭಿವೃದ್ಧಿದಾರರಿಗೆ ಯೋಜನೆ ಹಂಚಿಕೆಯಾಗಿ 6 ವರ್ಷ ಕಳೆದರೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿ ಸಾಧಿಸಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ಯೋಜನೆಯ ಹಂಚಿಕೆ ಆದೇಶವನ್ನು ರದ್ದು ಪಡಿಸುವಂತೆ ಹಾಗೂ ಒಡಂಬಡಿಕೆಯನ್ನು ಮುಕ್ತಾಯಗೊಳಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಯೋಜನೆಯ ಅನುಷ್ಠಾನಕ್ಕಾಗಿ ಅನುಮತಿ ನೀಡಿ 6 ವರ್ಷ ಕಳೆದರೂ ಇದುವರೆಗೂ ಅನುಷ್ಠಾನನಿಟ್ಟಿನಲ್ಲಿ ಮೆ:: ಕ್ರಾಂತಿ ಎನರ್ಜಿ ಸಿಸ್ಟಮ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯು ಯಾವುದೇ ಕ್ರಮ ಕೈಗೊಳ್ಳದೇ ಇರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಕಾರಣ ಕೇಲುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದೆಂಬುದಕ್ಕೆ ಸಮಜಾಯಿಷಿಯನ್ನು ನೀಡುವಂತೆ ನೋಂದಾಯಿತ ಅಂಚೆ ಮೂಲಕ ತಿಳಿಸಲಾಗಿತ್ತು. ಆದರೆ, ಕಾರಣ ಕೇಳುವ ನೋಟೀಸು ಲಕೋಟೆಯು 'No such addressee, not known' ಎಂದು ವಾಪಸ್ ಬಂದಿರುತ್ತದೆ. ಇದರಿಂದಾಗಿ ಅಭಿವೃದ್ಧಿದಾರರು ಸದರಿ ವಿಳಾಸದಲ್ಲಿ ವಾಸ್ತವ್ಯ ಇಲ್ಲದಿರುವುದು ಹಾಗೂ ಸುಮಾರು 6 ವರ್ಷಗಳಿಂದ ಯೋಜನೆಯ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಮೆ:: ಕ್ರಾಂತಿ ಎನರ್ಜಿ ಸಿಸ್ಟಮ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರು ಯಾವುದೇ ಪ್ರಗತಿಯನ್ನು ಸಾಧಿಸುವ ನಿಟ್ಟಿನಲ್ಲಿ ಕ್ರಮ ಕೈಗೊಂಡಿಲ್ಲದಿರುವುದು ಸ್ಪಷ್ಟವಾಗುತ್ತದೆ.

ಸದರಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 525 ಎನ್‌ಸಿಇ 2008, ಬೆಂಗಳೂರು, ದಿನಾಂಕ: 8ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರಿ ಆದೇಶ ಸಂಖ್ಯೆ: ಡಿಇ 5 ಎನ್‌ಸಿಇ 2002 ದಿನಾಂಕ:15.7.2002 ರಲ್ಲಿ ಮೆ:: ಕ್ರಾಂತಿ ಎನರ್ಜಿ ಸಿಸ್ಟಮ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಟಿ.ಎಲ್.ಬಿ.ಸಿ. ಡಿ–36, ಬಸಪುರ, ಸಿಂಧನೂರು ತಾಲ್ಲೂಕು, ರಾಯಚೂರು ಜಿಲ್ಲೆಯಲ್ಲಿ 0.7 ಮೆಗಾ ವ್ಯಾಟ್ ಸಾಮರ್ಥ್ಯದ ಸಿಂಧನೂರು ಕಿರು ಜಲ ವಿದ್ಯುತ್

ಯೋಜನೆಯ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1225 **ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ,

**ವಿಷಯ:** ಮೆ:: ಎಸ್.ಕೆ. ಫಾರ್ಮ್ಸ್ ಲಿಮಿಟೆಡ್ ಕಂಪನಿಗೆ ಹಂಚಿಕೆ ಮಾಡಲಾಗಿರುವ 3.5 ಮೆಗಾ ವ್ಯಾಟ್ ಸಾಮರ್ಥ್ಯದ ಹೊರಿಅಬ್ಬೆ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಡಿಇ 182 ಎನ್‌ಸಿಇ 2001 ದಿನಾಂಕ: 19.11.2001.

2) ಸರ್ಕಾರಿ ಆದೇಶ ಸಂಖ್ಯೆ: ಡಿಇ 165 ಎನ್‌ಸಿಇ 2003 ದಿನಾಂಕ : 10.10.2003.

3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ಎಸ್‌ಹೆಚ್‌ಪಿ/08/2029 ದಿನಾಂಕ: 2/3.12.2008.

4) ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಎನ್ 515 ಎನ್‌ಸಿಇ 2008 ದಿನಾಂಕ: 27.12.2008.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ :: ಎಸ್.ಕೆ. ಫಾರ್ಮ್ಸ್ ಲಿಮಿಟೆಡ್ ಕಂಪನಿಗೆ ಉಡುಪಿ ಜಿಲ್ಲೆಯ, ಕುಂದಾಪುರ ತಾಲ್ಲೂಕಿನ ವರಾಹಿ ನದಿಗೆ ಅಡ್ಡಲಾಗಿ 3.5 ಮೆಗಾ ವ್ಯಾಟ್ ಸಾಮರ್ಥ್ಯದ ಹೊರಿಅಬ್ಬೆ ಕಿರು ಜಲ ವಿದ್ಯುತ್ ಯೋಜನೆಯನ್ನು ಒಡಂಬಡಿಕೆ ಮಾಡಿಕೊಂಡ ದಿನಾಂಕದಿಂದ 3 ವರ್ಷಗಳ ಅವಧಿಯಲ್ಲಿ ಅನುಷ್ಠಾನಗೊಳಿಸಲು ಮಂಜೂರು ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಸದರಿ ಅಭಿವೃದ್ಧಿದಾರರಿಗೆ ಯೋಜನೆ ಹಂಚಿಕೆಯಾಗಿ 7 ವರ್ಷ ಕಳೆದರೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿ ಸಾಧಿಸಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ಯೋಜನೆಯ ಹಂಚಿಕೆ ಆದೇಶವನ್ನು ರದ್ದು ಪಡಿಸುವಂತೆ ಹಾಗೂ ಒಡಂಬಡಿಕೆಯನ್ನು ಮುಕ್ತಾಯಗೊಳಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಯೋಜನೆಯ ಅನುಷ್ಠಾನಕ್ಕಾಗಿ ಅನುಮತಿ ನೀಡಿ 7 ವರ್ಷ ಕಳೆದರೂ ಇದುವರೆಗೂ ಅನುಷ್ಠಾನನಿಟ್ಟಿನಲ್ಲಿ ಮೆ:: ಎಸ್.ಕೆ. ಫಾರ್ಮ್ಸ್ ಲಿಮಿಟೆಡ್ ಕಂಪನಿಯು ಯಾವುದೇ ಕ್ರಮ ಕೈಗೊಳ್ಳದೇ ಇರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದೆಂಬುದಕ್ಕೆ ಸಮಜಾಯಿಷಿಯನ್ನು ನೀಡುವಂತೆ ನೋಂದಾಯಿತ ಅಂಚೆ ಮೂಲಕ ತಿಳಿಸಲಾಗಿತ್ತು. ಆದರೆ, ಕಾರಣ ಕೇಳುವ ನೋಟೀಸು ಲಕೋಟೆಯು 'Adress insufficient, Return to sender' ಎಂದು ವಾಪಸ್ ಬಂದಿರುತ್ತದೆ. ಇದರಿಂದಾಗಿ ಅಭಿವೃದ್ಧಿದಾರರು ಸದರಿ ವಿಳಾಸದಲ್ಲಿ ವಾಸ್ತವ್ಯ ಇಲ್ಲದಿರುವುದು ಹಾಗೂ ಸುಮಾರು 7 ವರ್ಷಗಳಿಂದ ಯೋಜನೆಯ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಮೆ:: ಎಸ್.ಕೆ. ಫಾರ್ಮ್ಸ್ ಲಿಮಿಟೆಡ್ ಕಂಪನಿಯವರು ಯಾವುದೇ ಪ್ರಗತಿ ಸಾಧಿಸಿಲ್ಲದಿರುವುದು ಸ್ಪಷ್ಟವಾಗುತ್ತದೆ.

ಸದರಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 515 ಎನ್‌ಸಿಇ 2008, ಬೆಂಗಳೂರು, ದಿನಾಂಕ: 8ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರಿ ಆದೇಶ ಸಂಖ್ಯೆ: ಡಿಇ 182 ಎನ್‌ಸಿಇ 2001 ದಿನಾಂಕ:19.11.2001 ಹಾಗೂ ಸಂಖ್ಯೆ: ಡಿಇ 165 ಎನ್‌ಸಿಇ 2003 ದಿನಾಂಕ : 10.10.2003 ರಲ್ಲಿ ಮೆ :: ಎಸ್.ಕೆ. ಫಾರ್ಮ್ಸ್ ಲಿಮಿಟೆಡ್ ಕಂಪನಿಗೆ ಉಡುಪಿ ಜಿಲ್ಲೆಯ, ಕುಂದಾಪುರ ತಾಲ್ಲೂಕಿನ ವರಾಹಿ ನದಿಗೆ ಅಡ್ಡಲಾಗಿ 3.5 ಮೆಗಾ ವ್ಯಾಟ್ ಸಾಮರ್ಥ್ಯದ ಹೊರಿಅಬ್ಬೆ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1226 **ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ,

**ವಿಷಯ:** ಮೆ:: ಫ್ಲಾಕ್ಸ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆ ಮಾಡಲಾಗಿರುವ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಅರೆಮಾದನಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಡಿಇ 122 ಎನ್‌ಸಿಇ 2001 ದಿನಾಂಕ: 29.11.2001.

2) ಸರ್ಕಾರಿ ಆದೇಶ ಸಂಖ್ಯೆ: ಡಿಇ 180 ಎನ್‌ಸಿಇ 2004 ದಿನಾಂಕ : 4.6.2004.

3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/08/ಎಸ್‌ಹೆಚ್‌ಪಿ/08/2029 ದಿನಾಂಕ: 2/3.12.2008.

4) ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಎನ್ 517 ಎನ್‌ಸಿಇ 2008 ದಿನಾಂಕ: 27.12.2008.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ :: ಫ್ಲಾಕ್ಸ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಾಸನ ಜಿಲ್ಲೆಯ ಅರಕಲಗೂಡು ತಾಲ್ಲೂಕಿನಲ್ಲಿ 1.00 ಮೆಗಾ ವ್ಯಾಟ್ ಸಾಮರ್ಥ್ಯದ ಅರೆಮಾದನಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಒಡಂಬಡಿಕೆ ಮಾಡಿಕೊಂಡ ದಿನಾಂಕದಿಂದ 3 ವರ್ಷಗಳ ಅವಧಿಯಲ್ಲಿ ಅನುಷ್ಠಾನಗೊಳಿಸಲು ಮಂಜೂರು ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಆದೇಶದಲ್ಲಿ ಸದರಿ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 1.00 ಮೆಗಾ ವ್ಯಾಟ್‌ನಿಂದ 1.5 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಅನುಷ್ಠಾನಗೊಳಿಸಲು ಅನುಮತಿ ನೀಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಸದರಿ ಅಭಿವೃದ್ಧಿದಾರರಿಗೆ ಯೋಜನೆ ಹಂಚಿಕೆಯಾಗಿ 8 ವರ್ಷ ಕಳೆದರೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿ ಸಾಧಿಸಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ಯೋಜನೆಯ ಹಂಚಿಕೆ ಆದೇಶವನ್ನು ರದ್ದು ಪಡಿಸುವಂತೆ ಹಾಗೂ ಒಡಂಬಡಿಕೆಯನ್ನು ಮುಕ್ತಾಯಗೊಳಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಯೋಜನೆಯ ಅನುಷ್ಠಾನಕ್ಕಾಗಿ ಅನುಮತಿ ನೀಡಿ 8 ವರ್ಷ ಕಳೆದರೂ ಇದುವರೆಗೂ ಅನುಷ್ಠಾನನಿಟ್ಟಿನಲ್ಲಿ ಮೆ:: ಫ್ಲಾಕ್ಸ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಯು ಯಾವುದೇ ಕ್ರಮ ಕೈಗೊಳ್ಳದೇ ಇರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದೆಂಬುದಕ್ಕೆ ಸಮಜಾಯಿಷಿಯನ್ನು ನೀಡುವಂತೆ ನೋಂದಾಯಿತ ಅಂಚೆ ಮೂಲಕ ತಿಳಿಸಲಾಗಿತ್ತು. ಆದರೆ, ಕಾರಣ ಕೇಳುವ ನೋಟೀಸು ಲಕೋಟೆಯು 'No such office in this address, R/S' ಎಂದು ವಾಪಸ್ ಬಂದಿರುತ್ತದೆ. ಇದರಿಂದಾಗಿ ಅಭಿವೃದ್ಧಿದಾರರು ಸದರಿ ವಿಳಾಸದಲ್ಲಿ ವಾಸ್ತವ್ಯ ಇರುವುದಿಲ್ಲವೆಂದು ಸ್ಪಷ್ಟವಾಗುತ್ತದೆ. ಈಗಾಗಲೇ ಸುಮಾರು 8 ವರ್ಷಗಳಿಂದ ಯೋಜನೆಯ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಮೆ:: ಫ್ಲಾಕ್ಸ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಯವರು ಯಾವುದೇ ಪ್ರಗತಿ ಸಾಧಿಸಿಲ್ಲದಿರುವುದು ಸ್ಪಷ್ಟವಾಗುತ್ತದೆ.

ಸದರಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 517 ಎನ್‌ಸಿಇ 2008, ಬೆಂಗಳೂರು, ದಿನಾಂಕ: 8.5.2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರಿ ಆದೇಶ ಸಂಖ್ಯೆ: ಡಿಇ 122 ಎನ್‌ಸಿಇ 2001 ದಿನಾಂಕ:29.11.2001 ಹಾಗೂ ಡಿಇ 180 ಎನ್‌ಸಿಇ 2004 ದಿನಾಂಕ: 4.6.2004 ರಲ್ಲಿ ಮೆ:: ಫ್ಲಾಕ್ಸ್ ಹೈಡ್ರೊ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಾಸನ ಜಿಲ್ಲೆಯ ಅರಕಲಗೂಡು ತಾಲ್ಲೂಕಿನಲ್ಲಿ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಅರೆಮಾದನಹಳ್ಳಿ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1227

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ,

## ಸಹಕಾರ ಸಚಿವಾಲಯ

**ವಿಷಯ:** ಅರಸೀಕೆರೆ ತಾಲ್ಲೂಕು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ, ಇದರ 2007–08ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ಕಾಲಾವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಕೇಂದ್ರ ಕಛೇರಿ, ಬೆಂಗಳೂರು, ಇವರ ಪತ್ರ ಸಂಖ್ಯೆ:ಎಲ್‌ಡಿಬಿ–2/102/ವಾಮಸಭೆ/2008–09 ದಿನಾಂಕ: 30.03.2009.

**ಪ್ರಸ್ತಾವನೆ:**

ಅರಸೀಕೆರೆ ತಾಲ್ಲೂಕು ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ, ಅರಸೀಕೆರೆ ಇದರಲ್ಲಿ ಸುಮಾರು 12,000 ಸದಸ್ಯರಿದ್ದು ಮಾರ್ಚ್, ಏಪ್ರಿಲ್ ಮತ್ತು ಮೇ 2009ರಲ್ಲಿ ಲೋಕಸಭಾ ಚುನಾವಣೆ ಇರುವುದರಿಂದ ಬ್ಯಾಂಕಿನ ವಸೂಲಾತಿಗೆ ತೀವ್ರ ಹಿನ್ನೆಡೆಯಾಗಿದ್ದು, ಸದರಿ ಬ್ಯಾಂಕಿನ 2007–08ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ಸೆಪ್ಟೆಂಬರ್

2009ರ ಅಂತ್ಯದಲ್ಲಿ ನಡೆಸಲು ಅನುಮತಿಯನ್ನು ನೀಡುವಂತೆ ಮೇಲೆ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ಅಪರ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಓ 65 ಸಿಎಲ್‌ಎಂ 2009, ಬೆಂಗಳೂರು, ದಿನಾಂಕ: 7ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ನಿ, ಅರಸೀಕೆರೆ ತಾಲ್ಲೂಕು, ಇದರ 2007–08ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ:30.09.2009 ವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27 ಸದರಿ ಸಂಸ್ಥೆಗೆ ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ ಎಂದರೆ:

**27ರ ಪ್ರಕರಣದಲ್ಲಿ:**

27ನೇ ಪ್ರಕರಣ ಉಪಪ್ರಕರಣ (1)ರ ಪರಂತುಕದಲ್ಲಿನ **"ಆರು ತಿಂಗಳು"** ಎಂಬ ಪದಗಳಿಗೆ ಬದಲಾಗಿ **"ಹನ್ನೆರಡು ತಿಂಗಳು"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:**

ಪ್ರಕರಣ 27(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 30.09.2009 ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 27(1)ರ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ.

ಪಿ.ಆರ್. 1228

**ಒಳಾಡಳಿತ ಸಚಿವಾಲಯ**

**ತಿದ್ದುಪಡಿ**

**ನಂ. ಒಇ 21 ಪಿಪಿಇ 2009, ಬೆಂಗಳೂರು, ದಿನಾಂಕ: 13ನೇ ಮೇ 2009**

ಸರ್ಕಾರದ ಆದೇಶ ನಂ. ಒಇ 21 ಪಿಪಿಇ 2009, ದಿನಾಂಕ: 09.04.2009ರ ಆದೇಶ ಭಾಗದ ಕ್ರಮ ಸಂಖ್ಯೆ 13ರ ಅಂಕಣ 3ರಲ್ಲಿ "15.03.2007 ಪೂರ್ವಹ್ನ," ಅಂಕಣ 4ರಲ್ಲಿ "14.03.2008" ಎಂದೂ ಮತ್ತು ಅಂಕಣ 5ರಲ್ಲಿ "15.03.2008" ಎಂಬುದರ ಬದಲಾಗಿ ಅಂಕಣ 3ರಲ್ಲಿ "15.02.2007 ಪೂರ್ವಾಹ್ನ", ಅಂಕಣ 4ರಲ್ಲಿ "14.02.2008" ಎಂದೂ ಹಾಗೂ ಅಂಕಣ 5ರಲ್ಲಿ '15.02.2008" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳುವುದು. ಉಳಿದಂತೆ ದಿನಾಂಕ: 09.04.2009ರ ಸರ್ಕಾರದ ಆದೇಶದಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿ.ಆರ್. 1229

**ವಿಷಯ:** ನಕಲಿ ಛಾಪಾಕಾಗದದ ಹಗರಣಗಳಿಗೆ ಸಂಬಂಧಿಸಿದಂತೆ ಕರ್ತವ್ಯ ಲೋಪವೆಸಗಿರುವ ಪೊಲೀಸ್ ಅಧಿಕಾರಿಗಳ ವಿರುದ್ಧ ವಿಚಾರಣಾಧಿಕಾರಿಗಳನ್ನು ಬದಲಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಒಇ 23 ಪೊಸಿಪ 2004 ದಿನಾಂಕ: 23.01.2004, 07.01.2005.
2. ಸರ್ಕಾರದ ಆದೇಶ ಸಂಖ್ಯೆ:ಒಇ 23 ಪೊಸಿಪ 2004 ದಿನಾಂಕ ಮತ್ತು 11.12.2006.
3. ಪೊಲೀಸ್ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ರವರ ಕಚೇರಿ ಪತ್ರ ಸಂಖ್ಯೆ:ಸಿಬಿ(5)24.03.04 ದಿನಾಂಕ: 02.02.2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ರಾಘವೇಂದ್ರ ಔರಾದ್‌ಕರ್, ಡಿ.ಐ.ಜಿ. ಇಂಟೆಲಿಜೆನ್ಸ್ ರವರು ರಾಜ್ಯದಲ್ಲಿನ ನಕಲಿ ಛಾಪಾ ಕಾಗದದ ಹಗರಣಕ್ಕೆ ಸಂಬಂಧಿಸಿದಂತೆ ಪೊಲೀಸ್ ಇಲಾಖೆಯ ಅಧಿಕಾರಿಗಳು ಎಸಗಿರುವ ಕರ್ತವ್ಯಲೋಪಗಳು ಮೇಲ್ನೋಟಕ್ಕೆ ಸಾಭೀತಾಗುವಂತೆ ಕಂಡು ಬಂದಿರುವ ಕಾರಣ ಈ ಕೆಳಕಂಡ ಅಧಿಕಾರಿಗಳ ವಿರುದ್ಧ ಕೆ.ಎಸ್.ಪಿ (ಡಿ.ಪಿ)

ನಿಯಮಗಳು, 1965ರ ನಿಯಮ 6 ಮತ್ತು 8ರಡಿಯಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ತೀರ್ಮಾನಿಸಿ ಎ.ಡಿ.ಜಿ.ಪಿ. (ನೇಮಕಾತಿ ಮತ್ತು ತರಬೇತಿ) ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

1. ಶ್ರೀ ಟಿ.ಜಿ. ಸಂಗ್ರಾಮ್ ಸಿಂಗ್, ಎ.ಸಿ.ಪಿ, ಹಲಸೂರು ಉಪ ವಿಭಾಗ, ಬೆಂಗಳೂರು ನಗರ.
2. ಶ್ರೀ ವಾಲಿ ಬಾಷಾ, ಪೊಲೀಸ್ ಇನ್ಸ್‌ಪೆಕ್ಟರ್, ಸಿ.ಸಿ.ಬಿ. ಬೆಂಗಳೂರು.
3. ಶ್ರೀ ವಜೀರ್ ಅಹಮ್ಮದ್ ಖಾನ್, ಪಿ.ಎಸ್.ಐ, ಕೆ.ಜಿ.ಹಳ್ಳಿ, ಬೆಂಗಳೂರು.
4. ಶ್ರೀ ಕೆ.ಎಂ. ಮುದ್ದಯ್ಯ, ಡಿವೈ.ಎಸ್.ಪಿ.
5. ಶ್ರೀ ಜಿ.ಎ.ಬಾವ, ಎ.ಸಿ.ಪಿ, ಸಿ.ಸಿ.ಬಿ, ಬೆಂಗಳೂರು.
6. ಶ್ರೀ ಮರಿಸ್ವಾಮಿ ಗೌಡ, ಪೊಲೀಸ್ ಇನ್ಸ್‌ಪೆಕ್ಟರ್, ಅಶೋಕನಗರ ಪೊಲೀಸ್ ಠಾಣೆ, ಬೆಂಗಳೂರು ನಗರ.
7. ಶ್ರೀ ಕೆ. ನಂಜುಂಡೇಗೌಡ, ಪೊಲೀಸ್ ಇನ್ಸ್‌ಪೆಕ್ಟರ್, ಸಿ.ಸಿ.ಬಿ, ಬೆಂಗಳೂರು.
8. ಶ್ರೀ ಎಂ.ಎಂ. ಸೌದಾಗರ, ಡಿವೈ.ಎಸ್.ಪಿ, ಸಿ.ಓ.ಡಿ, ಬೆಂಗಳೂರು.

ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಪೊಲೀಸ್ ಮಹಾನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ರವರು ವಿಚಾರಣಾಧಿಕಾರಿಯವರು ರಾಜ್ಯ ಗುಪ್ತಚರದಳದ ಮುಖ್ಯಸ್ಥನಾಗಿದ್ದ ಸಮಯದಲ್ಲಿ ಈ ಪ್ರಕರಣದ ಬಗ್ಗೆ ಸರ್ಕಾರಕ್ಕೆ ಹಲವಾರು ಗೌಪ್ಯ ಮಾಹಿತಿಗಳನ್ನು ನೀಡಿದ್ದು ವಿಚಾರಣೆಯನ್ನು ನಡೆಸಿದರೆ ದೋಷಿತ ಅಧಿಕಾರಿಗಳು ಆಕ್ಷೇಪಣೆ ಮಾಡುವ ಸಂಭವವಿರುವುದರಿಂದ ಎ.ಡಿ.ಜಿ.ಪಿ ಮತ್ತು ಐ.ಜಿ (ಪ್ರಿಸನ್ಸ್) ಬೆಂಗಳೂರು ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸುವಂತೆ ಕೋರಿದ್ದರ ಮೇರೆಗೆ ದಿನಾಂಕ: 11.12.2006ರ ಆದೇಶದಲ್ಲಿ ಶ್ರೀ ಎಸ್.ಟಿ.ರಮೇಶ್, ಎ.ಡಿ.ಜಿ.ಪಿ ಮತ್ತು ಡಿ.ಜಿ (ಪ್ರಿಸನ್ಸ್) ಬೆಂಗಳೂರು ರವರನ್ನು ವಿಶೇಷ ಅಧಿಕಾರ ಹೊಂದಿದ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ದಿನಾಂಕ: 10.02.2005ರ ಆದೇಶದಲ್ಲಿನ ಉಳಿದ ಇತರೆ ಅಂಶಗಳ ಬಗ್ಗೆ ಯಥಾವತ್ತಾಗಿ ಮುಂದುವರಿಸಲಾಗಿತ್ತು. ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಆದೇಶ ಸಂಖ್ಯೆ:ಡಿಪಿಎಆರ್ 76:ಎಸ್‌ಪಿಎಸ್ 08 ದಿನಾಂಕ: 10.07.2008 ರನ್ವಯ ಎ.ಡಿ.ಜಿ.ಪಿ, ಅಪರಾಧ ಮತ್ತು ತಾಂತ್ರಿಕ ಸೇವೆಗಳು ಇಲ್ಲಿಗೆ ವರ್ಗಾವಣೆಯಾಗಿದ್ದರಿಂದ ಹಾಗೂ ಪ್ರಸ್ತುತ ಹುದ್ದೆಯಲ್ಲಿನ ಅಧಿಕ ಕೆಲಸದ ಒತ್ತಡದಿಂದ ಸದರಿ ಪ್ರಕರಣಕ್ಕೆ ಸಂಬಂಧಿಸಿದ ಇಲಾಖೆ ವಿಚಾರಣೆಯ ಕಡತವನ್ನು ಅವರ ಉತ್ತರಾಧಿಕಾರಿಯವರಿಂದ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರ ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ರವರಿಗೆ ಹಸ್ತಾಂತರ ಮಾಡಿ ಅವರೊಂದಿಗೆ ಪತ್ರ ವ್ಯವಹಾರ ನಡೆಸುವಂತೆ ಕೋರುತ್ತಾ ಪ್ರಕರಣದಲ್ಲಿ ಶ್ರೀ ಪ್ರಭಾಕರ ಗಣಪತಿ ಕುಲಕರ್ಣಿ (ನಿ) ನ್ಯಾಯಾಧೀಶರು, ಬೆಳಗಾಂ ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ. ಈ ಇಲಾಖಾ ವಿಚಾರಣೆಯಲ್ಲಿ ಇನ್ನೂ ಮಾಡಬೇಕಾದ ಕೆಲಸದ ಗಾತ್ರವನ್ನು ಗಮನಿಸಿದರೆ ಸೇವೆಯಲ್ಲಿರುವ ಮತ್ತೊಬ್ಬ ಅಧಿಕಾರಿಯನ್ನು ಶ್ರೀ ಎಸ್.ಟಿ. ರಮೇಶ್ ಅವರ ಜಾಗದಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಿದರೆ ತನ್ನ ಕೆಲಸದ ಜೊತೆಗೆ ಈ ಇಲಾಖಾ ವಿಚಾರಣೆಯನ್ನು ಕಾಲಮಿತಿಯೊಳಗಾಗಿ ಪೂರ್ಣಗೊಳಿಸಿ ವಿಚಾರಣಾ ವರದಿಯನ್ನು ಸಲ್ಲಿಸುವುದು ಕಷ್ಟಸಾಧ್ಯವಾಗಿರುತ್ತದೆ. ಆದ್ದರಿಂದ ಡಿ.ಜಿ.ಪಿ ಯವರ ಶಿಫಾರಸ್ಸಿನಂತೆ ಒಬ್ಬ ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯಾಗಿ ನೇಮಿಸಿದರೆ ಅವರು ಈ ಇಲಾಖಾ ವಿಚಾರಣೆಯನ್ನು on a day-to-day basis ಮೇಲೆ ನಡೆಸಿ ಬೇಗನೆ ವಿಚಾರಣಾ ವರದಿಯನ್ನು ಸಲ್ಲಿಸಬಹುದು. ಅದೂ ಅಲ್ಲದೆ ಇಂತಹ ಜಟಿಲವಾದ ವಿಚಾರಣೆಗಳಲ್ಲಿ ಉಪಯೋಗಿಸಿಕೊಳ್ಳುವ ಉದ್ದೇಶದಿಂದಲೇ ಸಿ.ಆ.ಸು ಇಲಾಖೆ ವಿಚಾರಣಾ ಅಧಿಕಾರಿಯನ್ನಾಗಿ ನೇಮಿಸಿಕೊಳ್ಳಬಹುದಾದ ನಿವೃತ್ತ ಜಿಲ್ಲಾ ನ್ಯಾಯಾಧೀಶರುಗಳ ಪಟ್ಟಿಯನ್ನು ಹೊರಡಿಸಿದೆ.

ನಕಲಿ ಛಾಪಾ ಕಾಗದಗಳ ಪ್ರಕರಣದಲ್ಲಿ ಶ್ರೀ ಎಸ್.ಟಿ. ರಮೇಶ್, ಎ.ಡಿ.ಜಿ.ಪಿ ರವರ ಬದಲಾಗಿ ಶ್ರೀ ಕೆ. ರಾಮಕೃಷ್ಣ ಭಟ್ (ನಿ) ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲು ತೀರ್ಮಾನಿಸಿದೆ. ಕಾರಣ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಒಇ 23 ಪೊಸಿಪ 2004, ಬೆಂಗಳೂರು, ದಿನಾಂಕ: 13ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ:ಒಇ 23 ಪೊಸಿಪ 2004 ದಿನಾಂಕ: 11.12.2006ರಲ್ಲಿ ನಕಲಿ ಛಾಪಾ ಕಾಗದಗಳ ಪ್ರಕರಣದಲ್ಲಿ ವಿಚಾರಣೆಯನ್ನು ನಡೆಸಲು ಶ್ರೀ ಎಸ್.ಟಿ. ರಮೇಶ್, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾ ನಿರೀಕ್ಷಕರು ಇವರನ್ನು ನೇಮಿಸಲಾಗಿದ್ದು ಈಗ ಇವರ ಬದಲಾಗಿ ಈ ಪ್ರಕರಣದ ವಿಚಾರಣೆಯನ್ನು ನಡೆಸಲು ಶ್ರೀ ಕೆ.ರಾಮಕೃಷ್ಣ ಭಟ್ (ನಿವೃತ್ತ) ನ್ಯಾಯಾಧೀಶರು, ಸಂಜಯನಗರ, ಬೆಂಗಳೂರು ಇವರನ್ನು ವಿಶೇಷ ಅಧಿಕಾರ ಹೊಂದಿದ ನಕಲಿ ಛಾಪಾಕಾಗದಗಳ ಪ್ರಕರಣದ ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಸರ್ಕಾರ ಆದೇಶಿಸಿದೆ. ದಿನಾಂಕ: 10.02.2005ರ ಆದೇಶದಲ್ಲಿನ ಉಳಿದ ಇತರೆ ಆದೇಶಗಳು ಯಥಾವತ್ತಾಗಿ ಮುಂದುವರೆಯುತ್ತದೆ.

ವಿಚಾರಣಾಧಿಕಾರಿಗಳಿಗೆ ವಿಚಾರಣೆ ನಡೆಸಲು ಅನುಕೂಲವಾಗುವಂತೆ ಸೂಕ್ತ ಸ್ಥಳಾವಕಾಶ/ಕಟ್ಟಡ/ಪೀಠೋಪಕರಣಗಳು ಮತ್ತು ಪೂರಕ ಸಿಬ್ಬಂದಿ ಇತ್ಯಾದಿ ಮೂಲ ಸೌಲಭ್ಯಗಳನ್ನು ಒದಗಿಸಲು ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಇವರಿಗೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1230 **ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ಇಂಧನ ಸಚಿವಾಲಯ**

**ವಿಷಯ:** ಮೆ:: ವಿಜಯನಗರ ಶುಗರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ **31.5** ಮೆಗಾ ವ್ಯಾಟ್ **(gross) ಮತ್ತು 18.5 ಮೆಗಾ ವ್ಯಾಟ್ (exportable)** ಸಾಮರ್ಥ್ಯದ Co-generation ಯೋಜನೆ ಸ್ಥಾಪನೆಗೆ ನಿರಾಕ್ಷೇಪಣೆ ನೀಡುವ ಬಗ್ಗೆ.

**ಓದಲಾಗಿದೆ:** ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/04/ವಿಜಯನಗರ/09/895 ದಿನಾಂಕ: 16/19.2.2009.

**ಪ್ರಸ್ತಾವನೆ:–**

ಮೇಲೆ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ವಿಜಯನಗರ ಶುಗರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗದಗ ಜಿಲ್ಲೆಯ ಮುಂಡರಗಿ ತಾಲ್ಲೂಕಿನ ಶಿರನಹಳ್ಳಿ ಮತ್ತು ಗಂಗಾನಗರ ಗ್ರಾಮಗಳಲ್ಲಿ **31.5** ಮೆಗಾ ವ್ಯಾಟ್ **(gross) ಮತ್ತು 18.5 ಮೆಗಾ ವ್ಯಾಟ್ (exportable)** ಸಾಮರ್ಥ್ಯದ Co-generation ಯೋಜನೆ ಸ್ಥಾಪನೆಗೆ ಅಭಿವೃದ್ಧಿದಾರರು ಉತ್ಪಾದಿಸಿದ ವಿದ್ಯುತ್ತನ್ನು ರಾಜ್ಯ ವಿದ್ಯುತ್ ಜಾಲಕ್ಕೆ ಪೂರೈಸತಕ್ಕದೆಂಬ ಷರತ್ತಿಗೊಳಪಟ್ಟು ನಿರಾಕ್ಷೇಪಣೆ ನೀಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 189 ಎನ್‌ಸಿಇ 2009, ಬೆಂಗಳೂರು, ದಿನಾಂಕ: 11ನೇ ಮೇ 2009.**

ಮೆ:: ವಿಜಯನಗರ ಶುಗರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಗದಗ ಜಿಲ್ಲೆಯ ಮುಂಡರಗಿ ತಾಲ್ಲೂಕಿನ ಶಿರನಹಳ್ಳಿ ಮತ್ತು ಗಂಗಾನಗರ ಗ್ರಾಮಗಳಲ್ಲಿ **31.5** ಮೆಗಾ ವ್ಯಾಟ್ **(gross) ಮತ್ತು 18.5 ಮೆಗಾ ವ್ಯಾಟ್ (exportable)** ಸಾಮರ್ಥ್ಯದ Co-generation ಯೋಜನೆ ಸ್ಥಾಪನೆಗೆ ಈ ಕೆಳಗಿನ ಷರತ್ತಿಗೊಳಪಟ್ಟು ನಿರಾಕ್ಷೇಪಣೆಯನ್ನು ನೀಡಿದೆ:–

1. The company shall obtain separate clearance from Karnataka Power Transmission Corporation Limited in respect of evacuation of power.
2. The company shall enter into power purchase agreement for selling of power to Karnataka Power Transmission Corporation Limited.
3. The company shall obtain necessary statutory clearance wherever required from the respective Departments / Organizations such as Forest Department, Revenue Department, & Karnataka State Pollution Control Board, etc. for the Power plant.
4. The Detailed Project Report (D.P.R.) for the power plant shall be got approved by Karnataka Renewable Energy Development Limited, before the commencement of the power plant.
5. The Company shall supply the power to state grid.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1231 **ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ,

**ವಿಷಯ:** ಮೆ:: ಸ್ಮಾರ್ಟ್ ಬೈ ಇನ್‌ಕಾರ್ಪೊರೇಷನ್ ಕಂಪನಿಗೆ ಹಂಚಿಕೆ ಮಾಡಲಾಗಿರುವ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಡಿಇ 26 ಎನ್‌ಸಿಇ 99 ದಿನಾಂಕ: 13.5.1999.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/Vol IV/2008/2028 ದಿನಾಂಕ: 2/3.12.2008.

3) ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಎನ್ 493 ಎನ್‌ಸಿಇ 2008 ದಿನಾಂಕ: 27.12.2008.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ:: ಸ್ಮಾರ್ಟ್ ಬೈ ಇನ್‌ಕಾರ್ಪೋರೇಷನ್ ಕಂಪನಿಗೆ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಚಿತ್ರದುರ್ಗ ಜಿಲ್ಲೆಯ, ಕಣವಹಟ್ಟಿ ಎಂಬಲ್ಲಿ ಒಡಂಬಡಿಕೆ ಮಾಡಿಕೊಂಡ ದಿನಾಂಕದಿಂದ 3 ವರ್ಷಗಳ ಅವಧಿಯಲ್ಲಿ ಅನುಷ್ಠಾನಗೊಳಿಸಲು ಮಂಜೂರು ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಸದರಿ ಅಭಿವೃದ್ಧಿದಾರರಿಗೆ ಯೋಜನೆ ಹಂಚಿಕೆಯಾಗಿ 9 ವರ್ಷ ಕಳೆದರೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿ ಸಾಧಿಸಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ಯೋಜನೆಯ ಹಂಚಿಕೆ ಆದೇಶವನ್ನು ರದ್ದು ಪಡಿಸುವಂತೆ ಹಾಗೂ ಒಡಂಬಡಿಕೆಯನ್ನು ಮುಕ್ತಾಯಗೊಳಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಯೋಜನೆಯ ಅನುಷ್ಠಾನಕ್ಕಾಗಿ ಅನುಮತಿ ನೀಡಿ 9 ವರ್ಷ ಕಳೆದರೂ ಇದುವರೆಗೂ ಅನುಷ್ಠಾನನಿಟ್ಟಿನಲ್ಲಿ ಮೆ:: ಸ್ಮಾರ್ಟ್ ಬೈ ಇನ್‌ಕಾರ್ಪೋರೇಷನ್ ಕಂಪನಿಯು ಯಾವುದೇ ಕ್ರಮ ಕೈಗೊಳ್ಳದೇ ಇರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದೆಂಬುದಕ್ಕೆ ಸಮಜಾಯಿಷಿಯನ್ನು ನೀಡುವಂತೆ ನೋಂದಾಯಿತ ಅಂಚೆ ಮೂಲಕ ತಿಳಿಸಲಾಗಿತ್ತು.

ಆದರೆ, ಕಾರಣ ಕೇಳುವ ನೋಟೀಸು ಲಕೋಟೆಯು 'Door lock, No such company in this address return to sender' ಎಂದು ವಾಪಸ್ ಬಂದಿರುತ್ತದೆ. ಇದರಿಂದಾಗಿ ಅಭಿವೃದ್ಧಿದಾರರು ಸದರಿ ವಿಳಾಸದಲ್ಲಿ ವಾಸ್ತವ್ಯ ಇಲ್ಲದಿರುವುದು ಹಾಗೂ ಸುಮಾರು 9 ವರ್ಷಗಳಿಂದ ಯೋಜನೆಯ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಮೆ:: ಸ್ಮಾರ್ಟ್ ಬೈ ಇನ್‌ಕಾರ್ಪೋರೇಷನ್ ಕಂಪನಿಯವರು ಯಾವುದೇ ಪ್ರಗತಿ ಸಾಧಿಸಿಲ್ಲದಿರುವುದು ಸ್ಪಷ್ಟವಾಗುತ್ತದೆ.

ಸದರಿ ವಿಷಯವನ್ನು ಸರ್ಕಾರದ ಮಟ್ಟದಲ್ಲಿ ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 493 ಎನ್‌ಸಿಇ 2008, ಬೆಂಗಳೂರು, ದಿನಾಂಕ: 8ನೇ ಮೇ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರಿ ಆದೇಶ ಸಂಖ್ಯೆ: ಡಿಇ 26 ಎನ್‌ಸಿಇ 99 ದಿನಾಂಕ: 13.5.1999 ರಲ್ಲಿ ಮೆ:: ಸ್ಮಾರ್ಟ್ ಬೈ ಇನ್‌ಕಾರ್ಪೋರೇಷನ್ ಕಂಪನಿಗೆ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಚಿತ್ರದುರ್ಗ ಜಿಲ್ಲೆಯ ಕಣವಹಟ್ಟಿಯಲ್ಲಿ ಮಾಡಿರುವ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1232 **ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ,

**ವಿಷಯ:** ಮೆ:: ವಾಲ್‌ಡೆಲ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆ ಮಾಡಲಾಗಿರುವ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಇಂಇ 246 ಎನ್‌ಸಿಇ 2003 ದಿನಾಂಕ: 12.6.2003.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/Vol IV/2008/2028 ದಿನಾಂಕ: 2/3.12.2008.

3) ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಎನ್ 497 ಎನ್‌ಸಿಇ 2008 ದಿನಾಂಕ: 27.12.2008.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ:: ವಾಲ್‌ಡೆಲ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ತುಮಕೂರು ಜಿಲ್ಲೆಯ ಮಾಲೇನಹಳ್ಳಿಯಲ್ಲಿ ಒಡಂಬಡಿಕೆ ಮಾಡಿಕೊಂಡ ದಿನಾಂಕದಿಂದ 3 ವರ್ಷಗಳ ಅವಧಿಯಲ್ಲಿ ಅನುಷ್ಠಾನಗೊಳಿಸಲು ಮಂಜೂರು ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಸದರಿ ಅಭಿವೃದ್ಧಿದಾರರಿಗೆ ಯೋಜನೆ ಹಂಚಿಕೆಯಾಗಿ 6 ವರ್ಷ ಕಳೆದರೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿ ಸಾಧಿಸಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ಯೋಜನೆಯ ಹಂಚಿಕೆ ಆದೇಶವನ್ನು ರದ್ದು ಪಡಿಸುವಂತೆ ಹಾಗೂ ಒಡಂಬಡಿಕೆಯನ್ನು ಮುಕ್ತಾಯಗೊಳಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಯೋಜನೆಯ ಅನುಷ್ಠಾನಕ್ಕಾಗಿ ಅನುಮತಿ ನೀಡಿ 6 ವರ್ಷ ಕಳೆದರೂ ಇದುವರೆಗೂ ಅನುಷ್ಠಾನನಿಟ್ಟಿನಲ್ಲಿ ಮೆ:: ವಾಲ್‌ಡೆಲ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯು ಯಾವುದೇ ಕ್ರಮ ಕೈಗೊಳ್ಳದೇ ಇರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದೆಂಬುದಕ್ಕೆ ಸಮಜಾಯಿಷಿಯನ್ನು ನೀಡುವಂತೆ ನೋಂದಾಯಿತ ಅಂಚೆ ಮೂಲಕ ತಿಳಿಸಲಾಗಿತ್ತು.

ಆದರೆ, ಕಾರಣ ಕೇಳುವ ನೋಟೀಸು ಲಕೋಟೆಯು ಅಭಿವೃದ್ಧಿದಾರರಿಗೆ ತಲುಪದೆ ವಾಪಸ್ ಬಂದಿರುತ್ತದೆ. ಇದರಿಂದಾಗಿ ಅಭಿವೃದ್ಧಿದಾರರು ಸದರಿ ವಿಳಾಸದಲ್ಲಿ ವಾಸ್ತವ್ಯ ಇಲ್ಲದಿರುವುದು ಹಾಗೂ ಸುಮಾರು 6 ವರ್ಷಗಳಿಂದ ಯೋಜನೆಯ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಮೆ:: ವಾಲ್‌ಡೆಲ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರು ಯಾವುದೇ ಪ್ರಗತಿ ಸಾಧಿಸಿಲ್ಲದಿರುವುದು ಸ್ಪಷ್ಟವಾಗುತ್ತದೆ.

ಸದರಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 497 ಎನ್‌ಸಿಇ 2008, ಬೆಂಗಳೂರು, ದಿನಾಂಕ: 8ನೇ ಮೇ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರಿ ಆದೇಶ ಸಂಖ್ಯೆ: ಇಂಇ 246 ಎನ್‌ಸಿಇ 2003 ದಿನಾಂಕ: 12.6.2003 ರಲ್ಲಿ ಮೆ:: ವಾಲ್‌ಡೆಲ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ತುಮಕೂರು ಜಿಲ್ಲೆಯ ಮಾಲೇನಹಳ್ಳಿಯಲ್ಲಿ ಮಾಡಿರುವ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1233

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ,

**ವಿಷಯ:** ಮೆ:: ಮಂಗಳಂ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆ ಮಾಡಲಾಗಿರುವ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಡಿಇ 48 ಎನ್‌ಸಿಇ 2002 ದಿನಾಂಕ : 20.6.2002.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/Vol IV/2008/2028 ದಿನಾಂಕ: 2/3.12.2008.

3) ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಎನ್ 453 ಎನ್‌ಸಿಇ 2008 ದಿನಾಂಕ: 27.12.2008.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ:: ಮಂಗಳಂ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 10.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಚಿಕ್ಕಮಗಳೂರು ಜಿಲ್ಲೆಯ ಲಿಂಗದಹಳ್ಳಿ ಗ್ರಾಮದಲ್ಲಿ ಒಡಂಬಡಿಕೆ ಮಾಡಿಕೊಂಡ ದಿನಾಂಕದಿಂದ 3 ವರ್ಷಗಳ ಅವಧಿಯಲ್ಲಿ ಅನುಷ್ಠಾನಗೊಳಿಸಲು ಮಂಜೂರು ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಸದರಿ ಅಭಿವೃದ್ಧಿದಾರರಿಗೆ ಯೋಜನೆ ಹಂಚಿಕೆಯಾಗಿ 6 ವರ್ಷ ಕಳೆದರೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿ ಸಾಧಿಸಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ಯೋಜನೆಯ ಹಂಚಿಕೆ ಆದೇಶವನ್ನು ರದ್ದು ಪಡಿಸುವಂತೆ ಹಾಗೂ ಒಡಂಬಡಿಕೆಯನ್ನು ಮುಕ್ತಾಯಗೊಳಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಯೋಜನೆಯ ಅನುಷ್ಠಾನಕ್ಕಾಗಿ ಅನುಮತಿ ನೀಡಿ 6 ವರ್ಷ ಕಳೆದರೂ ಇದುವರೆಗೂ ಅನುಷ್ಠಾನನಿಟ್ಟಿನಲ್ಲಿ ಮೆ:: ಮಂಗಳಂ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಯು ಯಾವುದೇ ಕ್ರಮ ಕೈಗೊಳ್ಳದೇ ಇರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದೆಂಬುದಕ್ಕೆ ಸಮಜಾಯಿಷಿಯನ್ನು ನೀಡುವಂತೆ ನೋಂದಾಯಿತ ಅಂಚೆ ಮೂಲಕ ತಿಳಿಸಲಾಗಿತ್ತು. ಆದರೆ, ಕಾರಣ ಕೇಳುವ ನೋಟೀಸು ಲಕೋಟೆಯು 'Addresse left return to sender' ಎಂದು ವಾಪಸ್ ಬಂದಿರುತ್ತದೆ. ಇದರಿಂದಾಗಿ ಅಭಿವೃದ್ಧಿದಾರರು ಸದರಿ ವಿಳಾಸದಲ್ಲಿ ವಾಸ್ತವ್ಯ ಇಲ್ಲದಿರುವುದು ಹಾಗೂ ಸುಮಾರು 6 ವರ್ಷಗಳಿಂದ ಯೋಜನೆಯ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಮೆ:: ಮಂಗಳಂ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಯವರು ಯಾವುದೇ ಪ್ರಗತಿ ಸಾಧಿಸಿಲ್ಲದಿರುವುದು ಸ್ಪಷ್ಟವಾಗುತ್ತದೆ.

ಸದರಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 453 ಎನ್‌ಸಿಇ 2008, ಬೆಂಗಳೂರು, ದಿನಾಂಕ: 8ನೇ ಮೇ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರಿ ಆದೇಶ ಸಂಖ್ಯೆ: ಡಿಇ 48 ಎನ್‌ಸಿಇ 2002 ದಿನಾಂಕ:20.6.2002 ರಲ್ಲಿ ಮೆ:: ಮಂಗಳಂ ಎನರ್ಜಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 10.00 ಮೆಗಾ ವ್ಯಾಟ್ ಸಾಮರ್ಥ್ಯದ

ಪವನ ವಿದ್ಯುತ್ ಯೋಜನೆಯನ್ನು ಚಿಕ್ಕಮಗಳೂರು ಜಿಲ್ಲೆಯ ಲಿಂಗದಹಳ್ಳಿ ಗ್ರಾಮದಲ್ಲಿ ಮಾಡಿರುವ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1234 **ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ,

**ವಿಷಯ:** ಮೆ:: ಶ್ರೀ ಸ್ವರ್ಣ ಎನರ್ಜಿ ಲಿಮಿಟೆಡ್ ಕಂಪನಿಗೆ ಹಂಚಿಕೆ ಮಾಡಲಾಗಿರುವ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಡಿಇ 64 ಎನ್‌ಸಿಇ 2002 (1) ದಿನಾಂಕ: 4.6.2002.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ಎಸ್‌ಹೆಚ್‌ಪಿ/08/2029 ದಿನಾಂಕ: 2/3.12.2008.

3) ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಎನ್ 523 ಎನ್‌ಸಿಇ 2008 ದಿನಾಂಕ: 27.12.2008.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ :: ಶ್ರೀ ಸ್ವರ್ಣ ಎನರ್ಜಿ ಲಿಮಿಟೆಡ್ ಕಂಪನಿಗೆ ಉತ್ತರ ಕನ್ನಡ ಜಿಲ್ಲೆಯ ಕುಂಭಾರವಾಡ ಗ್ರಾಮದ ಬಳಿ ಅಪ್ಪರ್ ಕೆನೇರಿ ಮತ್ತು ಸುಪಾ ಜಲಾಶಯದ ಮಧ್ಯೆ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಅಪ್ಪರ್ ಕೆನೇರಿ ಕಿರು ಜಲ ವಿದ್ಯುತ್ ಯೋಜನೆಯನ್ನು ಒಡಂಬಡಿಕೆ ಮಾಡಿಕೊಂಡ ದಿನಾಂಕದಿಂದ 3 ವರ್ಷಗಳ ಅವಧಿಯಲ್ಲಿ ಅನುಷ್ಠಾನಗೊಳಿಸಲು ಮಂಜೂರು ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಸದರಿ ಅಭಿವೃದ್ಧಿದಾರರಿಗೆ ಯೋಜನೆ ಹಂಚಿಕೆಯಾಗಿ 6 ವರ್ಷ ಕಳೆದರೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿ ಸಾಧಿಸಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ಯೋಜನೆಯ ಹಂಚಿಕೆ ಆದೇಶವನ್ನು ರದ್ದು ಪಡಿಸುವಂತೆ ಹಾಗೂ ಒಡಂಬಡಿಕೆಯನ್ನು ಮುಕ್ತಾಯಗೊಳಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಯೋಜನೆಯ ಅನುಷ್ಠಾನಕ್ಕಾಗಿ ಅನುಮತಿ ನೀಡಿ 6 ವರ್ಷ ಕಳೆದರೂ ಇದುವರೆಗೂ ಅನುಷ್ಠಾನದ ನಿಟ್ಟಿನಲ್ಲಿ ಮೆ:: ಶ್ರೀ ಸ್ವರ್ಣ ಎನರ್ಜಿ ಲಿಮಿಟೆಡ್ ಕಂಪನಿಯು ಯಾವುದೇ ಕ್ರಮ ಕೈಗೊಳ್ಳದೇ ಇರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದೆಂಬುದಕ್ಕೆ ಸಮಜಾಯಿಷಿಯನ್ನು ನೋಂದಾಯಿತ ಅಂಚೆ ಮೂಲಕ ತಿಳಿಸಲಾಗಿತ್ತು. ಕಾರಣ ಕೇಳುವ ನೋಟೀಸನ್ನು ಅಭಿವೃದ್ಧಿದಾರರು ಸ್ವೀಕರಿಸಿರುವುದಕ್ಕೆ ಸ್ವೀಕೃತಿಯು ಇಂಧನ ಇಲಾಖೆಗೆ ಬಂದಿರುತ್ತದೆ. ಆದರೆ, ಸದರಿ ಕಾರಣ ಕೇಳುವ ನೋಟೀಸಿಗೆ ಅಭಿವೃದ್ಧಿದಾರರಿಂದ ಯಾವುದೇ ಉತ್ತರ ಸರ್ಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ. ಇದರಿಂದ ಅಭಿವೃದ್ಧಿದಾರರಿಗೆ ಸದರಿ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿ ಸಾಧಿಸಿಲ್ಲದಿರುವುದು ಸ್ಪಷ್ಟವಾಗುತ್ತದೆ.

ಸದರಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 523 ಎನ್‌ಸಿಇ 2008, ಬೆಂಗಳೂರು, ದಿನಾಂಕ: 8ನೇ ಮೇ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರಿ ಆದೇಶ ಸಂಖ್ಯೆ: ಡಿಇ 64 ಎನ್‌ಸಿಇ 2002 (1) ದಿನಾಂಕ: 4.6.2002 ರಲ್ಲಿ ಮೆ :: ಶ್ರೀ ಸ್ವರ್ಣ ಎನರ್ಜಿ ಲಿಮಿಟೆಡ್ ಕಂಪನಿಗೆ ಉತ್ತರ ಕನ್ನಡ ಜಿಲ್ಲೆಯ ಕುಂಭಾರವಾಡ ಗ್ರಾಮದ ಬಳಿ ಅಪ್ಪರ್ ಕೆನೇರಿ ಮತ್ತು ಸುಪಾ ಜಲಾಶಯದ ಮಧ್ಯೆ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಅಪ್ಪರ್ ಕೆನೇರಿ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1235 **ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ,

**ವಿಷಯ:** ಮೆ:: ಮಾಲಗಟ್ಟಿ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆ ಮಾಡಲಾಗಿರುವ 40.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 248 ಎನ್‌ಸಿಇ 2002 ದಿನಾಂಕ: 5.3.2003.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/Vol IV/2008/2028 ದಿನಾಂಕ: 2/3.12.2008.

3) ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಎನ್ 466 ಎನ್‌ಸಿಇ 2008 ದಿನಾಂಕ: 27.12.2008.

**ಪ್ರಸ್ತಾವನೆ:–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ :: ಮಾಲಗಟ್ಟಿ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 40.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ತುಮಕೂರು ಜಿಲ್ಲೆಯ, ತುಮಕೂರು ತಾಲ್ಲೂಕಿನಲ್ಲಿ ಒಡಂಬಡಿಕೆ ಮಾಡಿಕೊಂಡ ದಿನಾಂಕದಿಂದ 4 ವರ್ಷಗಳ ಅವಧಿಯಲ್ಲಿ ಅನುಷ್ಠಾನಗೊಳಿಸಲು ಮಂಜೂರು ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಸದರಿ ಅಭಿವೃದ್ಧಿದಾರರಿಗೆ ಯೋಜನೆ ಹಂಚಿಕೆಯಾಗಿ 6 ವರ್ಷ ಕಳೆದರೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿ ಸಾಧಿಸಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ಯೋಜನೆಯ ಹಂಚಿಕೆ ಆದೇಶವನ್ನು ರದ್ದು ಪಡಿಸುವಂತೆ ಹಾಗೂ ಒಡಂಬಡಿಕೆಯನ್ನು ಮುಕ್ತಾಯಗೊಳಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಯೋಜನೆಯ ಅನುಷ್ಠಾನಕ್ಕಾಗಿ ಅನುಮತಿ ನೀಡಿ 6 ವರ್ಷ ಕಳೆದರೂ ಇದುವರೆಗೂ ಅನುಷ್ಠಾನನಿಟ್ಟಿನಲ್ಲಿ ಮೆ:: ಮಾಲಗಟ್ಟಿ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯು ಯಾವುದೇ ಕ್ರಮ ಕೈಗೊಳ್ಳದೇ ಇರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದೆಂಬುದಕ್ಕೆ ಸಮಜಾಯಿಷಿಯನ್ನು ನೀಡುವಂತೆ ನೋಂದಾಯಿತ ಅಂಚೆ ಮೂಲಕ ತಿಳಿಸಲಾಗಿತ್ತು. ಆದರೆ, ಕಾರಣ ಕೇಳುವ ನೋಟೀಸು ಲಕೋಟೆಯು 'No such firm in this address return to sender' ಎಂದು ವಾಪಸ್ ಬಂದಿರುತ್ತದೆ. ಇದರಿಂದಾಗಿ ಅಭಿವೃದ್ಧಿದಾರರು ಸದರಿ ವಿಳಾಸದಲ್ಲಿ ವಾಸ್ತವ್ಯ ಇಲ್ಲದಿರುವುದು ಹಾಗೂ ಸುಮಾರು 6 ವರ್ಷಗಳಿಂದ ಯೋಜನೆಯ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಮೆ:: ಮಾಲಗಟ್ಟಿ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರು ಯಾವುದೇ ಪ್ರಗತಿ ಸಾಧಿಸಿಲ್ಲದಿರುವುದು ಸ್ಪಷ್ಟವಾಗುತ್ತದೆ.

ಸದರಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 466 ಎನ್‌ಸಿಇ 2008, ಬೆಂಗಳೂರು, ದಿನಾಂಕ: 8ನೇ ಮೇ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರಿ ಆದೇಶ ಸಂಖ್ಯೆ: ಇಎನ್ 248 ಎನ್‌ಸಿಇ 2002 ದಿನಾಂಕ: 5.3.2003 ರಲ್ಲಿ ಮೆ :: ಮಾಲಗಟ್ಟಿ ವಿಂಡ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 40.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ತುಮಕೂರು ಜಿಲ್ಲೆಯ, ತುಮಕೂರು ತಾಲ್ಲೂಕಿನಲ್ಲಿ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1236

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ,

**ವಿಷಯ:** ಮೆ:: ಸೆವೆನ್ತ್ 'ಎಸ್' ಇಂಪೆಕ್ಸ್ ಕಂಪನಿಗೆ ಹಂಚಿಕೆ ಮಾಡಲಾಗಿರುವ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಡಿಇ 137 ಎನ್‌ಸಿಇ 2002 ದಿನಾಂಕ: 22.6.2002.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ಎಸ್‌ಹೆಚ್‌ಪಿ/08/2029 ದಿನಾಂಕ: 2/3.12.2008.

3) ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಎನ್ 518 ಎನ್‌ಸಿಇ 2008 ದಿನಾಂಕ: 27.12.2008.

4) ಅಭಿವೃದ್ಧಿದಾರರ ಪತ್ರ ದಿನಾಂಕ: 31.12.2008.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ:: ಸೆವೆನ್ತ್ 'ಎಸ್' ಇಂಪೆಕ್ಸ್ ಕಂಪನಿಗೆ 3.00 ಮೆಗಾ ವ್ಯಾಟ್ ಸಾಮರ್ಥ್ಯದ ರಾಜನ್‌ಕೊಲ್ಲೂರು ಕಿರು ಜಲ ವಿದ್ಯುತ್ ಯೋಜನೆಯನ್ನು ಗುಲ್ಬರ್ಗಾ ಜಿಲ್ಲೆಯ ಶೋರಾಪುರ ತಾಲ್ಲೂಕಿನ ರಾಜನ್‌ಕೊಲ್ಲೂರು ಗ್ರಾಮದ ಹತ್ತಿರ ವಿರೂಪಾಕ್ಷ ಗೌಡ ಟನಲ್ ಎನ್.ಎಲ್.ಬಿ.ಸಿ. ಗೆ ಅಡ್ಡಲಾಗಿ ಒಡಂಬಡಿಕೆ ಮಾಡಿಕೊಂಡ ದಿನಾಂಕದಿಂದ 3 ವರ್ಷಗಳ ಅವಧಿಯಲ್ಲಿ ಅನುಷ್ಠಾನಗೊಳಿಸಲು ಮಂಜೂರು ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಸದರಿ ಅಭಿವೃದ್ಧಿದಾರರಿಗೆ ಯೋಜನೆ ಹಂಚಿಕೆಯಾಗಿ 6 ವರ್ಷ

ಕಳೆದರೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿ ಸಾಧಿಸಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ಯೋಜನೆಯ ಹಂಚಿಕೆ ಆದೇಶವನ್ನು ರದ್ದು ಪಡಿಸುವಂತೆ ಹಾಗೂ ಒಡಂಬಡಿಕೆಯನ್ನು ಮುಕ್ತಾಯಗೊಳಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಯೋಜನೆಯ ಅನುಷ್ಠಾನಕ್ಕಾಗಿ ಅನುಮತಿ ನೀಡಿ 6 ವರ್ಷ ಕಳೆದರೂ ಇದುವರೆಗೂ ಅನುಷ್ಠಾನನಿಟ್ಟಿನಲ್ಲಿ ಮೆ:: ಸೆವೆನ್ತ್ ಎಸ್ ಇಂಪೆಕ್ಸ್ ಕಂಪನಿಯು ಯಾವುದೇ ಕ್ರಮ ಕೈಗೊಳ್ಳದೇ ಇರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದೆಂಬುದಕ್ಕೆ ಸಮಜಾಯಿಷಿಯನ್ನು ನೀಡುವಂತೆ ನೋಂದಾಯಿತ ಅಂಚೆ ಮೂಲಕ ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (5) ರ ಪತ್ರದಲ್ಲಿ ಮೆ:: ಸೆವೆನ್ತ್ 'ಎಸ್' ಇಂಪೆಕ್ಸ್ ಕಂಪನಿಯು ಯೋಜನೆಯು ಸುರಂಗ ಆಧಾರಿತ ಸ್ಥಳದಲ್ಲಿದ್ದು, ಯೋಜನೆಗೆ ಬೇಕಾಗಿರುವ ಯಂತ್ರೋಪಕರಣಗಳು ಭಾರತ ದೇಶದಲ್ಲಿ ಲಭ್ಯವಿಲ್ಲವಿರುವುದರಿಂದ ಹೊರ ದೇಶಗಳ ಪೂರೈಕೆದಾರರನ್ನು ಹುಡುಕುತ್ತಿರುವುದರಿಂದ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ವಿಳಂಬವಾಗಿದೆ ಎಂದು ತಿಳಿಸಿರುತ್ತಾರೆ.

ಯೋಜನೆಯು ಹಂಚಿಕೆಯಾಗಿ 6 ವರ್ಷ ಕಳೆದಿದ್ದರೂ, ಯೋಜನೆಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಮೆ:: ಸೆವೆನ್ತ್ 'ಎಸ್' ಇಂಪೆಕ್ಸ್ ಕಂಪನಿಗೆ ಯಾವುದೇ ಪ್ರಗತಿ ಸಾಧಿಸಿಲ್ಲದಿರುವುದು ಸ್ಪಷ್ಟವಾಗುತ್ತದೆ.

ಸದರಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 526 ಎನ್‌ಸಿಇ 2008, ಬೆಂಗಳೂರು, ದಿನಾಂಕ: 8.5.2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರಿ ಆದೇಶ ಸಂಖ್ಯೆ: ಡಿಇ 137 ಎನ್‌ಸಿಇ 2002 ದಿನಾಂಕ: 22.6.2002 ರಲ್ಲಿ ಮೆ:: ಸೆವೆನ್ತ್ 'ಎಸ್' ಇಂಪೆಕ್ಸ್ ಕಂಪನಿಗೆ ಗುಲ್ಬರ್ಗಾ ಜಿಲ್ಲೆಯ ಶೋರಾಪುರ ತಾಲ್ಲೂಕಿನ ರಾಜನ್‌ಕೊಲ್ಲೂರು ಗ್ರಾಮದ ಹತ್ತಿರ ವಿರೂಪಾಕ್ಷ ಗೌಡ ಟನಲ್ ಎನ್.ಎಲ್.ಬಿ.ಸಿ. ಗೆ ಅಡ್ಡಲಾಗಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ರಾಜನ್‌ಕೊಲ್ಲೂರು ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1237

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ,

**ವಿಷಯ:** ಮೆ:: ಲಕ್ಷ್ಮಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆ ಮಾಡಲಾಗಿರುವ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕೊನ್ನಪುರ್‌ದೊಡ್ಡಿ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಡಿಇ 149 ಎನ್‌ಸಿಇ 2003 ದಿನಾಂಕ: 27.8.2003.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ಎಸ್‌ಹೆಚ್‌ಪಿ/08/2029 ದಿನಾಂಕ: 2/3.12.2008.

3) ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಎನ್ 530 ಎನ್‌ಸಿಇ 2008 ದಿನಾಂಕ: 27.12.2008.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ :: ಲಕ್ಷ್ಮಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕೊನ್ನಪುರ್‌ದೊಡ್ಡಿ ಕಿರು ಜಲ ವಿದ್ಯುತ್ ಯೋಜನೆಯನ್ನು ಮಂಡ್ಯ ಜಿಲ್ಲೆಯ, ಮಳವಳ್ಳಿ ತಾಲ್ಲೂಕಿನ ಕೊನ್ನಪುರ್‌ದೊಡ್ಡಿಯ ಶಿಂಷಾ ನದಿಗೆ ಅಡ್ಡಲಾಗಿ ಒಡಂಬಡಿಕೆ ಮಾಡಿಕೊಂಡ ದಿನಾಂಕದಿಂದ 3 ವರ್ಷಗಳ ಅವಧಿಯಲ್ಲಿ ಅನುಷ್ಠಾನಗೊಳಿಸಲು ಮಂಜೂರು ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಸದರಿ ಅಭಿವೃದ್ಧಿದಾರರಿಗೆ ಯೋಜನೆ ಹಂಚಿಕೆಯಾಗಿ 6 ವರ್ಷ ಕಳೆದರೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿ ಸಾಧಿಸಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ಯೋಜನೆಯ ಹಂಚಿಕೆ ಆದೇಶವನ್ನು ರದ್ದು ಪಡಿಸುವಂತೆ ಹಾಗೂ ಒಡಂಬಡಿಕೆಯನ್ನು ಮುಕ್ತಾಯಗೊಳಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಯೋಜನೆಯ ಅನುಷ್ಠಾನಕ್ಕಾಗಿ ಅನುಮತಿ ನೀಡಿ 6 ವರ್ಷ ಕಳೆದರೂ ಇದುವರೆಗೂ ಅನುಷ್ಠಾನನಿಟ್ಟಿನಲ್ಲಿ ಮೆ:: ಲಕ್ಷ್ಮಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯು ಯಾವುದೇ ಕ್ರಮ ಕೈಗೊಳ್ಳದೇ ಇರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದೆಂಬುದಕ್ಕೆ ಸಮಜಾಯಿಷಿಯನ್ನು ನೀಡುವಂತೆ ನೋಂದಾಯಿತ ಅಂಚೆ ಮೂಲಕ ತಿಳಿಸಲಾಗಿತ್ತು. ಆದರೆ, ಕಾರಣ ಕೇಳುವ ನೋಟೀಸು

ಲಕೋಟೆಯು 'No such address in above house' ಎಂದು ವಾಪಸ್ ಬಂದಿರುತ್ತದೆ. ಇದರಿಂದಾಗಿ ಅಭಿವೃದ್ಧಿದಾರರು ಸದರಿ ವಿಳಾಸದಲ್ಲಿ ವಾಸ್ತವ್ಯ ಇಲ್ಲದಿರುವುದು ಹಾಗೂ ಸುಮಾರು 6 ವರ್ಷಗಳಿಂದ ಯೋಜನೆಯ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಮೆ:: ಲಕ್ಷ್ಮಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರು ಯಾವುದೇ ಪ್ರಗತಿ ಸಾಧಿಸಿಲ್ಲದಿರುವುದು ಸ್ಪಷ್ಟವಾಗುತ್ತದೆ.

ಸದರಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 530 ಎನ್‌ಸಿಇ 2008, ಬೆಂಗಳೂರು, ದಿನಾಂಕ: 8.5.2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರಿ ಆದೇಶ ಸಂಖ್ಯೆ: ಡಿಇ 149 ಎನ್‌ಸಿಇ 2003 ದಿನಾಂಕ: 27.8.2003 ರಲ್ಲಿ ಮೆ :: ಲಕ್ಷ್ಮಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕೊನ್ನಪುರ್‌ದೊಡ್ಡಿ ಕಿರು ಜಲ ವಿದ್ಯುತ್ ಯೋಜನೆಯನ್ನು ಮಂಡ್ಯ ಜಿಲ್ಲೆಯ, ಮಳವಳ್ಳಿ ತಾಲ್ಲೂಕಿನ ಕೊನ್ನಪುರ್‌ದೊಡ್ಡಿಯ ಶಿಂಷಾ ನದಿಗೆ ಅಡ್ಡಲಾಗಿ ಮಾಡಿರುವ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1238

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ,

**ವಿಷಯ:** ಮೆ:: ಸುನೀಲ್ ಆಗ್ರೋ ಫುಡ್ಸ್ ಲಿಮಿಟೆಡ್ ಕಂಪನಿಗೆ ಹಂಚಿಕೆ ಮಾಡಲಾಗಿರುವ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಡಿಇ 39 ಎನ್‌ಸಿಇ 97 (7) ದಿನಾಂಕ: 23.10.1997.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/Vol IV/2008/2028 ದಿನಾಂಕ: 2/3.12.2008.

3) ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಎನ್ 494 ಎನ್‌ಸಿಇ 2008 ದಿನಾಂಕ: 27.12.2008.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ :: ಸುನೀಲ್ ಆಗ್ರೋ ಫುಡ್ಸ್ ಲಿಮಿಟೆಡ್ ಕಂಪನಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಬೆಳಗಾಂ ಜಿಲ್ಲೆಯ ಚಿಕ್ಕೋಡಿ ತಾಲ್ಲೂಕಿನಲ್ಲಿ ಒಡಂಬಡಿಕೆ ಮಾಡಿಕೊಂಡ ದಿನಾಂಕದಿಂದ 4 ವರ್ಷಗಳ ಅವಧಿಯಲ್ಲಿ ಅನುಷ್ಠಾನಗೊಳಿಸಲು ಮಂಜೂರು ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಸದರಿ ಅಭಿವೃದ್ಧಿದಾರರಿಗೆ ಯೋಜನೆ ಹಂಚಿಕೆಯಾಗಿ 11 ವರ್ಷ ಕಳೆದರೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿ ಸಾಧಿಸಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ಯೋಜನೆಯ ಹಂಚಿಕೆ ಆದೇಶವನ್ನು ರದ್ದು ಪಡಿಸುವಂತೆ ಹಾಗೂ ಒಡಂಬಡಿಕೆಯನ್ನು ಮುಕ್ತಾಯಗೊಳಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಯೋಜನೆಯ ಅನುಷ್ಠಾನಕ್ಕಾಗಿ ಅನುಮತಿ ನೀಡಿ 11 ವರ್ಷ ಕಳೆದರೂ ಇದುವರೆಗೂ ಅನುಷ್ಠಾನನಿಟ್ಟಿನಲ್ಲಿ ಮೆ:: ಸುನೀಲ್ ಆಗ್ರೋ ಫುಡ್ಸ್ ಲಿಮಿಟೆಡ್ ಕಂಪನಿಯು ಯಾವುದೇ ಕ್ರಮ ಕೈಗೊಳ್ಳದೇ ಇರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದೆಂಬುದಕ್ಕೆ ಸಮಜಾಯಿಷಿಯನ್ನು ನೀಡುವಂತೆ ನೋಂದಾಯಿತ ಅಂಚೆ ಮೂಲಕ ತಿಳಿಸಲಾಗಿತ್ತು. ಆದರೆ, ಇದುವರೆಗೂ ಅನುಮತಿಸಲಾದ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಮೆ:: ಸುನೀಲ್ ಆಗ್ರೋ ಫುಡ್ಸ್ ಲಿಮಿಟೆಡ್ ಕಂಪನಿಯು ಸಾಧಿಸಿರುವ ಪ್ರಗತಿಯ ಬಗ್ಗೆ ಯಾವುದೇ ಉತ್ತರ ಸ್ವೀಕೃತವಾಗಿರುವುದಿಲ್ಲ. ಇದರಿಂದ ಅಭಿವೃದ್ಧಿದಾರರು ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿ ಸಾಧಿಸಿಲ್ಲದಿರುವುದು ಸ್ಪಷ್ಟವಾಗುತ್ತದೆ.

ಸದರಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 494 ಎನ್‌ಸಿಇ 2008, ಬೆಂಗಳೂರು, ದಿನಾಂಕ: 8ನೇ ಮೇ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರಿ ಆದೇಶ ಸಂಖ್ಯೆ: ಡಿಇ 39 ಎನ್‌ಸಿಇ 97 (7) ದಿನಾಂಕ: 23.10.1997 ರಲ್ಲಿ ಮೆ :: ಸುನೀಲ್ ಆಗ್ರೋ ಫುಡ್ಸ್ ಲಿಮಿಟೆಡ್ ಕಂಪನಿಗೆ ಬೆಳಗಾಂ ಜಿಲ್ಲೆಯ ಚಿಕ್ಕೋಡಿ ತಾಲ್ಲೂಕಿನಲ್ಲಿ 2.00 ಮೆಗಾ ವ್ಯಾಟ್ ಸಾಮರ್ಥ್ಯಧ ಪವನ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1239

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ,

**ವಿಷಯ:** ಮೆ:: ಸ್ವರ್ಣ ಗ್ರೀನ್ ಪವರ್ ಕಂಪನಿಗೆ ಹಂಚಿಕೆ ಮಾಡಲಾಗಿರುವ 7.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಡಿಇ 216 ಎನ್‌ಸಿಇ 2001 ದಿನಾಂಕ : 19.7.2002.
2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/Vol IV/2008/2028 ದಿನಾಂಕ: 2/3.12.2008.
3) ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಎನ್ 492 ಎನ್‌ಸಿಇ 2008 ದಿನಾಂಕ: 27.12.2008.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ :: ಸ್ವರ್ಣ ಗ್ರೀನ್ ಪವರ್ ಕಂಪನಿಗೆ 7.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಬೆಳಗಾಂ ಜಿಲ್ಲೆಯ ಮಾವಿನ ಹುಂಡದಲ್ಲಿ ಒಡಂಬಡಿಕೆ ಮಾಡಿಕೊಂಡ ದಿನಾಂಕದಿಂದ 3 ವರ್ಷಗಳ ಅವಧಿಯಲ್ಲಿ ಅನುಷ್ಠಾನಗೊಳಿಸಲು ಮಂಜೂರು ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಸದರಿ ಅಭಿವೃದ್ಧಿದಾರರಿಗೆ ಯೋಜನೆ ಹಂಚಿಕೆಯಾಗಿ 7 ವರ್ಷ ಕಳೆದರೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿ ಸಾಧಿಸಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ಯೋಜನೆಯ ಹಂಚಿಕೆ ಆದೇಶವನ್ನು ರದ್ದು ಪಡಿಸುವಂತೆ ಹಾಗೂ ಒಡಂಬಡಿಕೆಯನ್ನು ಮುಕ್ತಾಯಗೊಳಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಯೋಜನೆಯ ಅನುಷ್ಠಾನಕ್ಕಾಗಿ ಅನುಮತಿ ನೀಡಿ 7 ವರ್ಷ ಕಳೆದರೂ ಇದುವರೆಗೂ ಅನುಷ್ಠಾನನಿಟ್ಟಿನಲ್ಲಿ ಮೆ:: ಸ್ವರ್ಣ ಗ್ರೀನ್ ಪವರ್ ಕಂಪನಿಯು ಯಾವುದೇ ಕ್ರಮ ಕೈಗೊಳ್ಳದೇ ಇರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದೆಂಬುದಕ್ಕೆ ಕಾರಣವನ್ನು ನೋಂದಾಯಿತ ಅಂಚೆ ಮೂಲಕ ಕೇಳಲಾಗಿತ್ತು. ಆದರೆ, ಕಾರಣ ಕೇಳುವ ನೋಟೀಸು ಲಕೋಟೆಯು 'No such firm in this door number return to sender' ಎಂದು ವಾಪಸ್ ಬಂದಿರುತ್ತದೆ. ಇದರಿಂದಾಗಿ ಅಭಿವೃದ್ಧಿದಾರರು ಸದರಿ ವಿಳಾಸದಲ್ಲಿ ವಾಸ್ತವ್ಯ ಇಲ್ಲದಿರುವುದು ಹಾಗೂ ಸುಮಾರು 7 ವರ್ಷಗಳಿಂದ ಯೋಜನೆಯ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಮೆ:: ಸ್ವರ್ಣ ಗ್ರೀನ್ ಪವರ್ ಕಂಪನಿಯವರು ಯಾವುದೇ ಪ್ರಗತಿ ಸಾಧಿಸಿಲ್ಲದಿರುವುದು ಸ್ಪಷ್ಟವಾಗುತ್ತದೆ.

ಸದರಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 492 ಎನ್‌ಸಿಇ 2008, ಬೆಂಗಳೂರು, ದಿನಾಂಕ: 8ನೇ ಮೇ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರಿ ಆದೇಶ ಸಂಖ್ಯೆ: ಡಿಇ 216 ಎನ್‌ಸಿಇ 2001 ದಿನಾಂಕ : 19.7.2002 ರಲ್ಲಿ ಮೆ:: ಸ್ವರ್ಣ ಗ್ರೀನ್ ಪವರ್ ಕಂಪನಿಗೆ 7.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಬೆಳಗಾಂ ಜಿಲ್ಲೆಯ ಮಾವಿನ ಹುಂಡದಲ್ಲಿ ಮಾಡಿರುವ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1240

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ,

**ವಿಷಯ:** ಮೆ:: ಅನ್ನಪೂರ್ಣೇಶ್ವರಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆ ಮಾಡಲಾಗಿರುವ 6.6 ಮೆಗಾ ವ್ಯಾಟ್ ಸಾಮರ್ಥ್ಯದ ಮುಡಬ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 323 ಎನ್‌ಸಿಇ 2002 ದಿನಾಂಕ: 27.1.2003.
2) ಸರ್ಕಾರಿ ಆದೇಶ ಸಂಖ್ಯೆ: ಡಿಇ 323 ಎನ್‌ಸಿಇ 2003 ದಿನಾಂಕ: 23.8.2003.
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ಎಸ್‌ಹೆಚ್‌ಪಿ/08/2029 ದಿನಾಂಕ: 2/3.12.2008.
4) ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಎನ್ 516 ಎನ್‌ಸಿಇ 2008 ದಿನಾಂಕ: 27.12.2008.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ:: ಅನ್ನಪೂರ್ಣೇಶ್ವರಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಮುಡಬ ಕಿರು ಜಲ ವಿದ್ಯುತ್ ಯೋಜನೆಯನ್ನು ತುಂಗಾ ನದಿಗೆ ಅಡ್ಡಲಾಗಿ ಮುಡಬ ಹಳ್ಳಿ ಶಿವಮೊಗ್ಗ ಜಿಲ್ಲೆಯಲ್ಲಿ ಒಡಂಬಡಿಕೆ ಮಾಡಿಕೊಂಡ ದಿನಾಂಕದಿಂದ 3 ವರ್ಷಗಳ ಅವಧಿಯಲ್ಲಿ ಅನುಷ್ಠಾನಗೊಳಿಸಲು ಮಂಜೂರು ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಆದೇಶದಲ್ಲಿ ಸದರಿ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 2.00 ಮೆಗಾ ವ್ಯಾಟ್‌ನಿಂದ 6.6 ಮೆಗಾ ವ್ಯಾಟ್‌ಗೆ ಹೆಚ್ಚಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಸದರಿ ಅಭಿವೃದ್ಧಿದಾರರಿಗೆ ಯೋಜನೆ ಹಂಚಿಕೆಯಾಗಿ 6 ವರ್ಷ ಕಳೆದರೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿ ಸಾಧಿಸಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ಯೋಜನೆಯ ಹಂಚಿಕೆ ಆದೇಶವನ್ನು ರದ್ದು ಪಡಿಸುವಂತೆ ಹಾಗೂ ಒಡಂಬಡಿಕೆಯನ್ನು ಮುಕ್ತಾಯಗೊಳಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಯೋಜನೆಯ ಅನುಷ್ಠಾನಕ್ಕಾಗಿ ಅನುಮತಿ ನೀಡಿ 6 ವರ್ಷ ಕಳೆದರೂ ಇದುವರೆಗೂ ಅನುಷ್ಠಾನನಿಟ್ಟಿನಲ್ಲಿ ಮೆ:: ಅನ್ನಪೂರ್ಣೇಶ್ವರಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯು ಯಾವುದೇ ಕ್ರಮ ಕೈಗೊಳ್ಳದೇ ಇರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದೆಂಬುದಕ್ಕೆ ಸಮಜಾಯಿಷಿಯನ್ನು ನೀಡುವಂತೆ ನೋಂದಾಯಿತ ಅಂಚೆ ಮೂಲಕ ತಿಳಿಸಲಾಗಿತ್ತು. ಆದರೆ, ಕಾರಣ ಕೇಳುವ ನೋಟೀಸು ಲಕೋಟೆಯು 'No such firm in this address, not known' ಎಂದು ವಾಪಸ್ ಬಂದಿರುತ್ತದೆ. ಇದರಿಂದಾಗಿ ಅಭಿವೃದ್ಧಿದಾರರು ಸದರಿ ವಿಳಾಸದಲ್ಲಿ ವಾಸ್ತವ್ಯ ಇಲ್ಲದಿರುವುದು ಹಾಗೂ ಸುಮಾರು 6 ವರ್ಷಗಳಿಂದ ಯೋಜನೆಯ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಮೆ:: ಅನ್ನಪೂಣೇಶ್ವರಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರು ಯಾವುದೇ ಪ್ರಗತಿ ಸಾಧಿಸಿಲ್ಲದಿರುವುದು ಸ್ಪಷ್ಟವಾಗುತ್ತದೆ.

ಸದರಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 516 ಎನ್‌ಸಿಇ 2008, ಬೆಂಗಳೂರು, ದಿನಾಂಕ: 8ನೇ ಮೇ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರಿ ಆದೇಶ ಸಂಖ್ಯೆ: ಇಎನ್ 323 ಎನ್‌ಸಿಇ 2002 ದಿನಾಂಕ: 27.1.2003 ಹಾಗೂ ಡಿಇ 323 ಎನ್‌ಸಿಇ 2003 ದಿನಾಂಕ: 23.8.2003 ರಲ್ಲಿ ಮೆ:: ಅನ್ನಪೂರ್ಣೇಶ್ವರಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 6.6 ಮೆಗಾ ವ್ಯಾಟ್ ಸಾಮರ್ಥ್ಯದ ಮುಡಬ ಕಿರು ಜಲ ವಿದ್ಯುತ್ ಯೋಜನೆಯನ್ನು ತುಂಗಾ ನದಿಗೆ ಅಡ್ಡಲಾಗಿ ಮುಡಬ ಹಳ್ಳಿ ಶಿವಮೊಗ್ಗ ಜಿಲ್ಲೆಯಲ್ಲಿ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1241 **ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ,

**ವಿಷಯ:** ಮೆ:: ಶ್ರೀ ಸಾಯಿ ದೀಪ್ತಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆ ಮಾಡಲಾಗಿರುವ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಡಿಇ 154 ಪಿಪಿಸಿ 94 ದಿನಾಂಕ: 6.9.1994.

2) ಸರ್ಕಾರಿ ಆದೇಶ ಸಂಖ್ಯೆ: ಡಿಇ 155 ಎನ್‌ಸಿಇ 2005 ದಿನಾಂಕ: 16.6.2005.

3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 117 ಎನ್‌ಸಿಇ 2006 ದಿನಾಂಕ: 6.3.2006.

4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ಎಸ್‌ಹೆಚ್‌ಪಿ/08/2029 ದಿನಾಂಕ: 2/3.12.2008.

5) ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಎನ್ 518 ಎನ್‌ಸಿಇ 2008 ದಿನಾಂಕ: 27.12.2008.

6) ಅಭಿವೃದ್ಧಿದಾರರ ಪತ್ರ ಸಂಖ್ಯೆ : ಎಸ್‌ಎಸ್‌ಡಿಪಿಪಿಎಲ್/ಜಿಒವಿ/ಎಲ್–101 ದಿನಾಂಕ: 21.2.2009.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ:: ಅರುಣ್ ಇಂಜಿನಿಯರಿಂಗ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಭದ್ರಾ ಎಲ್.ಬಿ.ಸಿ. ಕಿರು ಜಲ ವಿದ್ಯುತ್ ಯೋಜನೆಯನ್ನು 3 ವರ್ಷಗಳ ಅವಧಿಯಲ್ಲಿ ಅನುಷ್ಠಾನಗೊಳಿಸಲು ಮಂಜೂರು ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಆದೇಶದಲ್ಲಿ ಕಂಪನಿಯ ಹೆಸರನ್ನು ಮೆ:: ಅರುಣ್ ಇಂಜಿನಿಯರಿಂಗ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್‌ನಿಂದ ಮೆ:: ಶ್ರೀ ಸಾಯಿ ದೀಪ್ತಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿ ಎಂದು ಬದಲಾಯಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಆದೇಶದಲ್ಲಿ ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶವನ್ನು ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಸದರಿ ಅಭಿವೃದ್ಧಿದಾರರಿಗೆ ಯೋಜನೆ ಹಂಚಿಕೆಯಾಗಿ 14 ವರ್ಷ ಕಳೆದರೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿ ಸಾಧಿಸಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ಯೋಜನೆಯ ಹಂಚಿಕೆ ಆದೇಶವನ್ನು ರದ್ದು ಪಡಿಸುವಂತೆ ಹಾಗೂ ಒಡಂಬಡಿಕೆಯನ್ನು ಮುಕ್ತಾಯಗೊಳಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಯೋಜನೆಯ ಅನುಷ್ಠಾನಕ್ಕಾಗಿ 1994 ರಲ್ಲಿ ಅನುಮತಿ ನೀಡಿದ್ದರೂ, ಇದುವರೆಗೂ ಅನುಷ್ಠಾನನಿಟ್ಟಿನಲ್ಲಿ ಮೆ:: ಶ್ರೀ ಸಾಯಿ ದೀಪ್ತಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯು ಯಾವುದೇ ಕ್ರಮ ಕೈಗೊಳ್ಳದೇ ಇರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (5) ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದೆಂಬುದಕ್ಕೆ ಸಮಜಾಯಿಷಿಯನ್ನು ನೀಡುವಂತೆ ನೋಂದಾಯಿತ ಅಂಚೆ ಮೂಲಕ ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (6) ರ ಪತ್ರದಲ್ಲಿ ಮೆ:: ಶ್ರೀ ಸಾಯಿ ದೀಪ್ತಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರು ಪವರ್ ಹೌಸ್, ಟೇಲ್ ರೇಸ್ ಕಾಮಗಾರಿಯು ಏಪ್ರಿಲ್/ಮೇ 2007 ರಲ್ಲಿ ಪೂರ್ಣಗೊಂಡಿದ್ದು, ಸುರಂಗದ ಕಾಮಗಾರಿ ವಿಳಂಬವಾಗಿರುವುದರಿಂದ ಯೋಜನೆಯ ಅನುಷ್ಠಾನವು ವಿಳಂಬವಾಗಿರುತ್ತದೆ ಎಂದು ತಿಳಿಸಿರುತ್ತಾರೆ ಹಾಗೂ ಯೋಜನೆಗೆಬೇಕಾದ ಯಂತ್ರೋಪಕರಣಗಳು ಯೋಜನಾ ಸ್ಥಳಕ್ಕೆ ತಲುಪಿರುತ್ತದೆ ಎಂದು ಸಮಜಾಯಿಷಿ ನೀಡಿ, 2009 ಡಿಸೆಂಬರ್ ಒಳಗೆ ಯೋಜನೆಯನ್ನು ಪ್ರಾರಂಭಿಸುವ ಉದ್ದೇಶವಿದೆ ಎಂದು ತಿಳಿಸಿ, ಕಾಲಾವಕಾಶವನ್ನು 31.12.2009 ರವರೆಗೆ ವಿಸ್ತರಿಸಲು ಕೋರಿದ್ದಾರೆ. ಆದರೆ, ಯೋಜನೆಯು 1994 ನೇ ಸಾಲಿನಲ್ಲಿಯೇ ಹಂಚಿಕೆಯಾಗಿದ್ದರೂ ಯೋಜನೆಯ ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಮೆ:: ಶ್ರೀ ಸಾಯಿ ದೀಪ್ತಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರು ಯಾವುದೇ ಪ್ರಗತಿ ಸಾಧಿಸಿಲ್ಲದಿರುವುದು ಸ್ಪಷ್ಟವಾಗುತ್ತದೆ.

ಸದರಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 518 ಎನ್‌ಸಿಇ 2008, ಬೆಂಗಳೂರು, ದಿನಾಂಕ: 8ನೇ ಮೇ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರಿ ಆದೇಶ ಸಂಖ್ಯೆ: ಡಿಇ 154 ಪಿಪಿಸಿ 94 ದಿನಾಂಕ: 6.9.1994 ರಲ್ಲಿ ಮೆ:: ಶ್ರೀ ಸಾಯಿ ದೀಪ್ತಿ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 1.5 ಮೆಗಾ ವ್ಯಾಟ್ ಸಾಮರ್ಥ್ಯದ ಭದ್ರಾ ಎಲ್.ಬಿ.ಸಿ. ಕಿರು ಜಲ ಯೋಜನೆಯ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1242

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ,

**ವಿಷಯ:** ಮೆ:: ಕರ್ನಾಟಕ ಹೆಲ್ತ್ ಇನ್‌ಸ್ಟಿಟ್ಯೂಟ್‌ಗೆ ಹಂಚಿಕೆ ಮಾಡಲಾಗಿರುವ 0.3 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದು ಪಡಿಸುವ ಬಗ್ಗೆ.

**ಓದಲಾಗಿದೆ :** 1) ಸರ್ಕಾರಿ ಆದೇಶ ಸಂಖ್ಯೆ: ಡಿಇ 107 ಎನ್‌ಸಿಇ 1997 ದಿನಾಂಕ: 17.7.1998.

2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ಎಸ್‌ಹೆಚ್‌ಪಿ/08/2029 ದಿನಾಂಕ: 2/3.12.2008.

3) ಕಾರಣ ಕೇಳುವ ನೋಟೀಸ್ ಸಂಖ್ಯೆ: ಇಎನ್ 518 ಎನ್‌ಸಿಇ 2008 ದಿನಾಂಕ: 27.12.2008.

4) ಅಭಿವೃದ್ಧಿದಾರರ ಪತ್ರ ದಿನಾಂಕ: 12.1.2009.

**ಪ್ರಸ್ತಾವನೆ :–**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಆದೇಶದಲ್ಲಿ ಮೆ:: ಕರ್ನಾಟಕ ಹೆಲ್ತ್ ಇನ್‌ಸ್ಟಿಟ್ಯೂಟ್‌ಗೆ 0.3 ಮೆಗಾ ವ್ಯಾಟ್ ಸಾಮರ್ಥ್ಯದ ಗೋಕಾಕ್ ಕಿರು ಜಲ ವಿದ್ಯುತ್ ಯೋಜನೆಯನ್ನು ಗೋಕಾಕ್ ಕೆನಾಲ್‌ನ 4 ಮತ್ತು 5ನೇ ಕಿ.ಮೀ. ಮಧ್ಯದಲ್ಲಿ ಒಡಂಬಡಿಕೆ ಮಾಡಿಕೊಂಡ ದಿನಾಂಕದಿಂದ 3 ವರ್ಷಗಳ ಅವಧಿಯಲ್ಲಿ ಅನುಷ್ಠಾನಗೊಳಿಸಲು ಮಂಜೂರು ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ, ಬೆಂಗಳೂರು ಇವರು ಸದರಿ ಅಭಿವೃದ್ಧಿದಾರರಿಗೆ ಯೋಜನೆ ಹಂಚಿಕೆಯಾಗಿ 10 ವರ್ಷ ಕಳೆದರೂ ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿ ಸಾಧಿಸಿರುವುದಿಲ್ಲವೆಂದು ತಿಳಿಸುತ್ತಾ, ಸದರಿ ಯೋಜನೆಯ ಹಂಚಿಕೆ ಆದೇಶವನ್ನು ರದ್ದು ಪಡಿಸುವಂತೆ ಹಾಗೂ ಒಡಂಬಡಿಕೆಯನ್ನು ಮುಕ್ತಾಯಗೊಳಿಸುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಯೋಜನೆಯ ಅನುಷ್ಠಾನಕ್ಕಾಗಿ ಅನುಮತಿ ನೀಡಿ 10 ವರ್ಷ ಕಳೆದರೂ ಇದುವರೆಗೂ ಅನುಷ್ಠಾನನಿಟ್ಟಿನಲ್ಲಿ ಮೆ:: ಕರ್ನಾಟಕ ಹೆಲ್ತ್ ಇನ್‌ಸ್ಟಿಟ್ಯೂಟ್ ಸಂಸ್ಥೆಯು ಯಾವುದೇ ಕ್ರಮ ಕೈಗೊಳ್ಳದೇ ಇರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಕಾರಣ ಕೇಳುವ ನೋಟೀಸಿನಲ್ಲಿ ಯೋಜನೆಯ ಹಂಚಿಕೆಯನ್ನು ಏಕೆ ರದ್ದು ಪಡಿಸಬಾರದೆಂಬುದಕ್ಕೆ ಸಮಜಾಯಿಷಿಯನ್ನು ನೀಡುವಂತೆ ನೋಂದಾಯಿತ ಅಂಚೆ ಮೂಲಕ ತಿಳಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4) ರ ಪತ್ರದಲ್ಲಿ ಮೆ:: ಕರ್ನಾಟಕ ಹೆಲ್ತ್ ಇನ್‌ಸ್ಟಿಟ್ಯೂಟ್ ಕಂಪನಿಯು ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ವಿವಿಧ ಪ್ರಗತಿಗಳನ್ನು ಸಾಧಿಸಿದೆ ಎಂದು ತಿಳಿಸಿದ್ದು, ಯಾವುದೇ ಪೂರಕ ದಾಖಲಾತಿಗಳನ್ನು ಪತ್ರದೊಂದಿಗೆ ಸಲ್ಲಿಸಿರುವುದಿಲ್ಲ ಹಾಗೂ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಕಾಶವನ್ನು ಮುಂದಿನ 3 ವರ್ಷಗಳ ಅವಧಿಗೆ ವಿಸ್ತರಿಸಲು ಕೋರಿದ್ದಾರೆ.

ಯೋಜನೆಯು 1998 ನೇ ಸಾಲಿನಲ್ಲಿಯೇ ಹಂಚಿಕೆಯಾಗಿದ್ದರೂ ಸಹ ಯೋಜನೆಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಮೆ:: ಕರ್ನಾಟಕ ಹೆಲ್ತ್ ಇನ್‌ಸ್ಟಿಟ್ಯುಟ್ ಸಂಸ್ಥೆಯು ಯಾವುದೇ ಪ್ರಗತಿ ಸಾಧಿಸಿಲ್ಲದಿರುವುದು ಸ್ಪಷ್ಟವಾಗುತ್ತದೆ.

ಸದರಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಕಂಡಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 521 ಎನ್‌ಸಿಇ 2008, ಬೆಂಗಳೂರು, ದಿನಾಂಕ: 8ನೇ ಮೇ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಸರ್ಕಾರಿ ಆದೇಶ ಸಂಖ್ಯೆ: ಡಿಇ 107 ಎನ್‌ಸಿಇ 1997 ದಿನಾಂಕ: 17.7.1998 ರಲ್ಲಿ ಮೆ:: ಕರ್ನಾಟಕ ಹೆಲ್ತ್ ಇನ್‌ಸ್ಟಿಟ್ಯುಟ್ ಸಂಸ್ಥೆಗೆ 0.3 ಮೆಗಾ ವ್ಯಾಟ್ ಸಾಮರ್ಥ್ಯದ ಗೋಕಾಕ್ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶ ಮತ್ತು ಈ ಸಂಬಂಧ ಮಾಡಿಕೊಂಡಿರುವ ಒಡಂಬಡಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದು ಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1243

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ,

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ಗದಗ್ ಜಿಲ್ಲೆ, ಶಿರಹಟ್ಟಿ ತಾಲ್ಲೂಕು ಮಜ್ಜೂರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ 21/07/07ರ ಪತ್ರ ಸಂಖ್ಯೆ:ಮುಇಂ/ಸನೀ(ಉ)ವ/ಭೂಸ್ವಾಪ್ರ 2007–08/6089.

**ಪ್ರಸ್ತಾವನೆ:**

ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಮೇಲೆ ಓದಲಾದ ಪತ್ರದಲ್ಲಿ ಗದಗ್ ಜಿಲ್ಲೆ, ಶಿರಹಟ್ಟಿ ತಾಲ್ಲೂಕು ಮಜ್ಜೂರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮಜ್ಜೂರ ಮತ್ತು ವರವಿ ಗ್ರಾಮಗಳ ಜಮೀನುಗಳಿಗೆ ಗದಗ್‌ನ ಸಿವಿಲ್ ನ್ಯಾಯಾಲಯವು (ಹಿರಿಯ ಶ್ರೇಣಿ) ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 28/08/97
- ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ 06/11/2000

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಗದಗ್‌ನ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣಗಳನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಸದರಿ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸುವ ಅವಶ್ಯಕತೆ ಇಲ್ಲವೆಂದು ಕಾನೂನು ಇಲಾಖೆಯು ಹಿಂಬರಹ ಸಂಖ್ಯೆ:ಲಾ 1797 ಎಲ್‌ಬಿಎಸ್ 2006, ದಿನಾಂಕ 19/01/07ರಲ್ಲಿ ಅಭಿಪ್ರಾಯ ನೀಡಿದೆ. ಸಿವಿಲ್ ನ್ಯಾಯಾಲಯದ ತೀರ್ಪಿನಂತೆ ಈ ಪ್ರಕರಣದಲ್ಲಿ ಪಾವತಿಸಬೇಕಾಗಿರುವ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರ. ಸಂ | ಎಲ್ಎಸಿ ಸಂಖ್ಯೆ | ಸ.ನಂ. | ವಿಸ್ತೀರ್ಣ ಎ–ಗುಂ. | ಗ್ರಾಮ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|---|
| 1 | 517/01 | 80/ಎ | 6–14 | ವರವಿ | 185400 |
| 2 | 519/01 | 82 | 0–20 | ವರವಿ | 14598 |
| 3 | 521/01 | 87 | 3–15 | ಮಜ್ಜೂರ | 98541 |
| 4 | 523/01 | 79/2 | 0–08 | ವರವಿ | 5841 |
| 5 | 525/01 | 16/5 | 0–03 | ಮಜ್ಜೂರ | 2191 |
| 6 | 527/01 | 19/1+2+3ಎ | 15–30 | ಮಜ್ಜೂರ | 459852 |
| 7 | 529/01 | 25/3 | 4–24 | ಮಜ್ಜೂರ | 134306 |
| 8 | 531/01 | 25/4 | 2–12 | ಮಜ್ಜೂರ | 67154 |
| 9 | 533/01 | 25/2 | 2–12 | ಮಜ್ಜೂರ | 65780 |
| | **ಒಟ್ಟು** | | | | **1033663** |

*** ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 118 ಭೂಸ್ವಾಪ್ರ 2007, ಬೆಂಗಳೂರು, ದಿನಾಂಕ 14ನೇ ಮೇ 2009**

ಗದಗ್ ಜಿಲ್ಲೆ, ಶಿರಹಟ್ಟಿ ತಾಲ್ಲೂಕು ಮಜ್ಜೂರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಮಜ್ಜೂರ ಮತ್ತು ವರವಿ ಗ್ರಾಮಗಳಿಗೆ ಸೇರಿದ ಸರ್ವೆ ನಂಬರ್‌ಗಳ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಮೇಲ್ಕಂಡ ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿರುವ ತೀರ್ಪಿನಂತೆ ಲೆಕ್ಕ ಹಾಕಿದ ಪರಿಹಾರ ಧನ ಮೊತ್ತ ರೂ.10,33,663–00ಗಳನ್ನು (ಹತ್ತು ಲಕ್ಷದ ಮೂವತ್ತ್ಮೂರು ಸಾವಿರದ ಆರುನೂರ ಅರವತ್ತ್ಮೂರು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ "4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು" ಅಡಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1244 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ:** ಮೈಸೂರು ಜಿಲ್ಲೆ, ಹೆಚ್.ಡಿ.ಕೋಟೆ ತಾಲ್ಲೂಕು ಪಡುಕೋಟೆ ಕಾವಲ್ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಸದರಿ ಗ್ರಾಮದ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರ ಐತೀರ್ಪಿನಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 04/03/08ರ ಪತ್ರ ಸಂಖ್ಯೆ:ಮುಸನೀ(ದ)/ಲೆಶಾ/ಲೆಸ/1–3/ ಭೂಸ್ವಾಧೀನ/07–08/543.

**ಪ್ರಸ್ತಾವನೆ:**

ಮೇಲೆ ಓದಲಾದ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ದಿನಾಂಕ 04/03/08ರ ಪತ್ರದಲ್ಲಿ ಮೈಸೂರು ಜಿಲ್ಲೆ, ಹೆಚ್.ಡಿ.ಕೋಟೆ ತಾಲ್ಲೂಕು ಪಡುಕೋಟೆ ಕಾವಲ್ ಸಣ್ಣ ನೀರಾವರಿ ಕೆರೆ

ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಪಡುಕೋಟೆ ಕಾವಲ್ ಗ್ರಾಮದ ಜಮೀನುಗಳಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಉಪ ವಿಭಾಗಾಧಿಕಾರಿಗಳು ಹಾಗೂ ಭೂಸ್ವಾಧೀನಾಧಿಕಾರಿಗಳು, ಹುಣಸೂರು ಇವರು ಹೊರಡಿಸಿದ ಐತೀರ್ಪಿನಂತೆ ಪರಿಹಾರ ಧನ ಪಾವತಿಸಲು ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಈ ಕೆರೆಯ ಮೂಲ ಭೂಸ್ವಾಧೀನ ಪ್ರಕ್ರಿಯೆಯ ವಿವರಗಳ ಕೆಳಕಂಡಂತಿದೆ:

- ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ 10/11/1983
- ಉಪ ವಿಭಾಗಾಧಿಕಾರಿಗಳ ಐತೀರ್ಪಿನ ದಿನಾಂಕ 29/10/2005.

ಮೈಸೂರು ಜಿಲ್ಲೆ, ಹೆಚ್.ಡಿ.ಕೋಟೆ ತಾಲ್ಲೂಕಿನ ಪಡುಕೋಟೆ ಕಾವಲ್ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಪಡುಕೋಟೆ ಕಾವಲ್ ಗ್ರಾಮದ ಸ.ನಂ.1/405ರ 2–25 ಎಕರೆ ಜಮೀನಿಗೆ ಎಲ್.ಎ.ಸಿ. ಸಂಖ್ಯೆ:154/07ರಲ್ಲಿ ಸಿವಿಲ್ ನ್ಯಾಯಾಲಯವು ನೀಡಿದ ತೀರ್ಪಿನ್ನು ಉಲ್ಲೇಖಿಸಿ ಇದೇ ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಸೇರಿದ್ದ ಕೆಳಕಂಡ ಪಡುಕೋಟೆ ಕಾವಲ್ ಗ್ರಾಮದ ಸ.ನಂ.1/405ರ ಜಮೀನಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರಡಿ ಹೆಚ್ಚಿನ ಪರಿಹಾರ ಧನಕ್ಕೆ ಐತೀರ್ಪು ನೀಡಿದ್ದಾರೆ. ಈ ಐತೀರ್ಪಿನಂತೆ ಪಾವತಿಸಬೇಕಾದ ಪರಿಹಾರ ಧನದ ಮೊತ್ತದ ವಿವರ ಕೆಳಕಂಡಂತಿದೆ:

| ಕ್ರ. ಸಂ | ಪಡುಕೋಟೆ ಕಾವಲ್ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ. | ಭೂ.ಸ್ವಾ. ಕಾಯ್ದೆ ಕಲಂ 28(ಎ)ರಡಿ ಐತೀರ್ಪಿನ ಸಂಖ್ಯೆ ಮತ್ತು ದಿನಾಂಕ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 1/405 | 2–25 | ಎಲ್ಎಕ್ಯೂ ಎಸ್ಆರ್ 36/80–81, ದಿನಾಂಕ 29/10/05 | 2,26,939–00 |

ವಿಷಯವನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸನೀಇ 24 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ 14ನೇ ಮೇ 2009.**

ಮೈಸೂರು ಜಿಲ್ಲೆ, ಹೆಚ್.ಡಿ.ಕೋಟೆ ತಾಲ್ಲೂಕು ಪಡುಕೋಟೆ ಕಾವಲ್ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಪಡುಕೋಟೆ ಕಾವಲ್ ಗ್ರಾಮದ ಸ.ನಂ.1/405ರ 2–25 ಎಕರೆ ಜಮೀನಿಗೆ ಭೂಸ್ವಾಧೀನ ಕಾಯ್ದೆ ಕಲಂ 28(ಎ)ರ ಪ್ರಕಾರ ಉಪ ವಿಭಾಗಾಧಿಕಾರಿ ಹಾಗೂ ವಿಶೇಷ ಭೂಸ್ವಾಧೀನಾಧಿಕಾರಿಗಳು, ಹುಣಸೂರು ಇವರು ಹೊರಡಿಸಿರುವ ದಿನಾಂಕ 29/10/05ರ ಐತೀರ್ಪಿನಂತೆ ರೂ.2,26,939–00ಗಳನ್ನು (ಎರಡು ಲಕ್ಷದ ಇಪ್ಪತ್ತಾರು ಸಾವಿರದ ಒಂಭೈನೂರ ಮೂವತ್ತೊಂಭತ್ತು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತ:ಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ 16/05/2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1245 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ)

**ವಿಷಯ:** ಮೈಸೂರು ಜಿಲ್ಲೆ, ಪಿರಿಯಾಪಟ್ಟಣ ತಾಲ್ಲೂಕು, ಇಂಗಲಗೆರೆ ಕೆರೆಯಲ್ಲಿ ದೋಣಿ ವಿಹಾರ ನಡೆಸಲು ಗೌತಮ ಬುದ್ಧ ಸೋಷಿಯಲ್ ಸರ್ವಿಸ್ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ:** ದಿನಾಂಕ 23/12/08ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರದ ಸಂಖ್ಯೆ:ಮುಸದ/ತಾಂ–2/ಸಇಂ–4/1/ಪಿರಿಯಾಪಟ್ಟಣ/ 2008/4504..

**ಪ್ರಸ್ತಾವನೆ:**

ಮೈಸೂರು ಜಿಲ್ಲೆ, ಪಿರಿಯಾಪಟ್ಟಣ ತಾಲ್ಲೂಕು, ಹಂದಿಗುಡ್ಡ ಕಾವಲು ಬೈಲಗುಪ್ಪೆ ಗ್ರಾಮದ ಸಣ್ಣ ನೀರಾವರಿ ಇಲಾಖೆಯ ಅಧೀನದಲ್ಲಿರುವ ಇಂಗಲಗೆರೆ ಕೆರೆಯಲ್ಲಿ ದೋಣಿ ವಿಹಾರ ನಡೆಸಲು ಗೌತಮ ಬುದ್ಧ ಸೋಷಿಯಲ್ ಸರ್ವಿಸ್ (ರಿ), ಹಂದಿಗುಡ್ಡ ಕಾವಲು ಇವರಿಗೆ ಅನುಮತಿ ನೀಡುವಂತೆ ಬೈಲಗುಪ್ಪೆ ಗ್ರಾಮದ ಗ್ರಾಮ ಪಂಚಾಯತಿಯ ಅಧ್ಯಕ್ಷರು ಮತ್ತು ಪಿರಿಯಾಪಟ್ಟಣ ತಾಲ್ಲೂಕು, ಕೊಪ್ಪ ಕ್ಷೇತ್ರದ ಜಿಲ್ಲಾ ಪಂಚಾಯತ್ ಸದಸ್ಯರು ಕೋರಿರುತ್ತಾರೆ. ಈ ವಿಷಯದಲ್ಲಿ ಮೇಲೆ ಓದಲಾದ ದಿನಾಂಕ 23/12/08ರ ಪತ್ರದಲ್ಲಿ ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್‌ರವರು ಸದರಿ ಇಂಗಲಗೆರೆ ಕೆರೆಯಲ್ಲಿ ದೋಣಿ ವಿಹಾರ ನಡೆಸಲು ಷರತ್ತು ಮತ್ತು ನಿಬಂಧನೆಗೊಳಪಟ್ಟು ಅನುಮತಿ ನೀಡಬಹುದೆಂದು ಅಭಿಪ್ರಾಯ ನೀಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸನೀಇ 42 ಹೊಕೆನಿ 2008, ಬೆಂಗಳೂರು, ದಿನಾಂಕ 18ನೇ ಮೇ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೈಸೂರು ಜಿಲ್ಲೆ, ಪಿರಿಯಾಪಟ್ಟಣ ತಾಲ್ಲೂಕು, ಹಂದಿಗುಡ್ಡಕಾವಲು ಬೈಲಗುಪ್ಪೆ ಗ್ರಾಮದ ಸಣ್ಣ ನೀರಾವರಿ ಇಲಾಖೆಗೆ ಸೇರಿದ ಇಂಗಲಗೆರೆ ಕೆರೆಯಲ್ಲಿ ದೋಣಿ ವಿಹಾರ ನಡೆಸಲು ಗೌತಮ ಬುದ್ಧ ಸೋಷಿಯಲ್ ಸರ್ವಿಸ್ (ರಿ), ಹಂದಿಗುಡ್ಡಕಾವಲು, ಪಿರಿಯಾಪಟ್ಟಣ ತಾಲ್ಲೂಕು, ಮೈಸೂರು ಜಿಲ್ಲೆ ರವರಿಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರವು ಅನುಮೋದನೆ ನೀಡಿದೆ.

1. ಈ ಬಗ್ಗೆ ಸಂಬಂಧಪಟ್ಟ ಪ್ರಾಧಿಕಾರಗಳಿಂದ ಅಂದರೆ ಬಂದರು ಮತ್ತು ಒಳನಾಡು ಜಲಸಾರಿಗೆ, ಪರಿಸರ ಇಲಾಖೆ, ಗ್ರಾಮ ಪಂಚಾಯತ್, ಅಗ್ನಿ ಶಾಮಕ ಇಲಾಖೆಗಳಿಂದ ಅನುಮತಿ ಪಡೆದ ನಂತರವೇ ದೋಣಿ ವಿಹಾರ ನಡೆಸಲು ಕ್ರಮ ಜರುಗಿಸುವುದು.
2. ದೋಣಿ ವಿಹಾರಕ್ಕಾಗಿ ಸಂಸ್ಥೆಯು ವಾರ್ಷಿಕ ರೂ.6000/–ಗಳ ಶುಲ್ಕವನ್ನು ಸಣ್ಣ ನೀರಾವರಿ ಇಲಾಖೆಗೆ ಸಂಬಂಧಪಟ್ಟ ಕಛೇರಿಗೆ ಪಾವತಿಸುವುದು ಹಾಗೂ ಈ ಅನುಮತಿಯ ಈ ಆದೇಶ ಹೊರಡಿಸಿದ ದಿನಾಂಕದಿಂದ 3 ವರ್ಷಗಳ ಅವಧಿಗೆ ಮರುನವೀಕರಣಗೊಳಿಸುವ ಷರತ್ತಿಗೊಳಪಟ್ಟಿದೆ.
3. ದೋಣಿ ವಿಹಾರ ಸಂದರ್ಭದಲ್ಲಿ ಕೆರೆ ಏರಿ, ಕೆರೆಯ ಮುಖ್ಯ ತೂಬು, ಕೆರೆಯ ಕೋಡಿ, ಇತ್ಯಾದಿಗಳಿಗೆ ಹಾನಿಯಾಗದಂತೆ ಹಾಗೂ ಕೆರೆಯ ಅಚ್ಚುಕಟ್ಟುದಾರರಿಗೆ ನೀರು ಒದಗಿಸುವಲ್ಲಿ ಯಾವುದೇ ತೊಂದರೆಯಾಗದಂತೆ ಮತ್ತು ಮೀನು ಸಾಕಾಣಿಕೆಗೆ ಧಕ್ಕೆಯಾಗದಂತೆ ಮುನ್ನೆಚ್ಚರಿಕೆ ವಹಿಸುವುದು.
4. ಕೆರೆ ಹಾಗೂ ಪರಿಸರ ಸ್ವಚ್ಚತೆಗೆ ಧಕ್ಕೆಯಾಗದಂತೆ ನೋಡಿಕೊಳ್ಳುವುದು. ದೋಣಿ ವಿಹಾರ ಸಂದರ್ಭದಲ್ಲಿ ಸಾರ್ವಜನಿಕರಿಗೆ ಮುಕ್ತ ಪ್ರವೇಶಕ್ಕೆ ಅನಾವಶ್ಯಕವಾಗಿ ನಿರ್ಬಂಧ ವಿಧಿಸಬಾರದು.
5. ಯಾವುದೇ ಅನಧಿಕೃತ ಚಟುವಟಿಕೆಗಳನ್ನು ನಡೆಸದೆ ಸಣ್ಣ ನೀರಾವರಿ ಇಲಾಖೆಯ ನಿರ್ದೇಶನವನ್ನು ಕಾಲಕಾಲಕ್ಕೆ ಪಾಲಿಸುವ ಷರತ್ತುಗಳಿಗೊಳಪಟ್ಟಿದೆ.
6. ದೋಣಿ ವಿಹಾರ ಸಂದರ್ಭದಲ್ಲಿ ಎಲ್ಲಾ ಸಂರಕ್ಷಣಾ ಸಿದ್ದತೆಗಳನ್ನು ತೆಗೆದು ಕೊಳ್ಳುವುದು. ಯಾವುದೇ ಪ್ರಾಣಹಾನಿ ಅಥವಾ ಸಾವು ನೋವು ಸಂಭವಿಸಿದಲ್ಲಿ ಅದರ ಪೂರ್ಣ ಜವಾಬ್ದಾರಿಯನ್ನು ಸಂಸ್ಥೆಯೇ ಹೊರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1246 **ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ).

**ವಿಷಯ:** ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಅಂತರ್ಜಲ ವಿಭಾಗಕ್ಕೆ ಸಂಬಂಧಿಸಿದಂತೆ 2009–10ನೇ ಸಾಲಿನ ಕಾರ್ಯಕ್ರಮಗಳನ್ನು ಮುಂದುವರಿಸುವ ಬಗ್ಗೆ–ಆದೇಶ.

**ಓದಲಾಗಿದೆ:** ಗಣಿ ಮತ್ತು ಭೂವೈಜ್ಞಾನಿಕ ಸಂಪನ್ಮೂಲ ಆಯುಕ್ತರು ಹಾಗೂ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರ ಪತ್ರ ಸಂಖ್ಯೆ: ಗಭೂಇ/ಅಜವಿ/ಮುಪಯೋ/2009–10/149, ದಿನಾಂಕ 16/04/2009.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು ಹಾಗೂ ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ ಇವರು ಅಂತರ್ಜಲ ವಿಭಾಗಕ್ಕೆ ಸಂಬಂಧಪಟ್ಟ ಯೋಜನೆಗಳನ್ನು 2009–10ನೇ ಸಾಲಿನಲ್ಲಿ ಮುಂದುವರಿಸಲು ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ. ಈ ಬಗ್ಗೆ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ನೀಡಿದೆ.

**ಸರ್ಕಾರದ ಆದೇಶ ಸಂಖ್ಯೆ:ಸನೀಇ 08 ಅಜಅ 2009, ಬೆಂಗಳೂರು, ದಿನಾಂಕ 14ನೇ ಮೇ 2009.**

ಪ್ರಸ್ತಾವನೆಯಲ್ಲಿ ತಿಳಿಸಿರುವಂತೆ ಗಣಿ ಮತ್ತು ಭೂವಿಜ್ಞಾನ ಇಲಾಖೆಯ ಅಂತರ್ಜಲ ವಿಭಾಗದಲ್ಲಿ ಪ್ರಗತಿಯಲ್ಲಿರುವ ಈ ಕೆಳಗೆ ನಮೂದಿಸಿರುವ ಯೋಜನೆಗಳನ್ನು (ರಾಜ್ಯ ಘಟಕ) 2009–10ನೇ ಸಾಲಿಗೆ ಮುಂದುವರಿಸಲು ಸರ್ಕಾರವು ಅನುಮೋದನೆ ನೀಡಿದೆ.

| ಕ್ರ. ಸಂ. | ಯೋಜನೆ ಮತ್ತು ಶೀರ್ಷಿಕೆ | 2009–10ನೇ ಸಾಲಿನ ಅನುದಾನ (ಲಕ್ಷ ರೂ.ಗಳಲ್ಲಿ) |
|---|---|---|
| 1 | ನಿರ್ದೇಶನ ಮತ್ತು ಆಡಳಿತ "2702–02–001–0–01"– ಪೂರಕ ವೆಚ್ಚ | 4.00 |
| 2 | ದೂರ ಸಂವೇದನಾ ಕೌಶಲ್ಯದಿಂದ ಅಂತರ್ಜಲ ಅಭಿವೃದ್ಧಿ "2702–02–005–0–11" | 22.28 |
| 3 | ಸಮೀಕ್ಷೆ ಮೇಲ್ಮೈ ಜಲ ಮತ್ತು ಅಂತರ್ಜಲದ ಸಂಸ್ಥೆಯ ಬಲವರ್ಧನೆ "2702–02–005–0–15" | 151.94 |
| 4 | ರಾಷ್ಟ್ರೀಯ ಜಲ ಶಾಸ್ತ್ರ ಯೋಜನೆ "2702–02–005–0–80" ಯೋಜನೆ | 169.49 |
| | **ಒಟ್ಟು** | **347.71** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 1996, ದಿನಾಂಕ 10/07/1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1247

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ(ಸಣ್ಣ ನೀರಾವರಿ).

**ವಿಷಯ:** ದಾವಣಗೆರೆ ಜಿಲ್ಲೆ, ಚನ್ನಗಿರಿ ತಾಲ್ಲೂಕು, ಗಾಣದಕಟ್ಟೆ ಹತ್ತಿರ ಮತ್ತಿಹಳ್ಳಕ್ಕೆ ಚೆಕ್‌ಡ್ಯಾಂ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ:ಸನೀಇ 02 ಅಪಿಬಂ 2009, ದಿನಾಂಕ 21/02/09.

2) ದಿನಾಂಕ 21/03/09ರ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ರವರ ಪತ್ರ ಸಂಖ್ಯೆ:ಮುಸ(ದ)/ತಾಂ–4/ಸಇಂ–10/ದಾವಣಗೆರೆ/ಚನ್ನಗಿರಿ/ಗಾಣದಕಟ್ಟೆ/ಚೆಕ್‌ಡ್ಯಾಂ/2009/1677.

3) ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ(ದ), ಬೆಂಗಳೂರು ರವರ ದಿನಾಂಕ 01/04/09ರ ಪತ್ರ ಸಂಖ್ಯೆ:ಮುಸದ/ಆಪ್ತ ಶಾಖೆ/ಟೆಂಡರ್/08–09/1748.

**ಪ್ರಸ್ತಾವನೆ:**

ದಾವಣಗೆರೆ ಜಿಲ್ಲೆ, ಚನ್ನಗಿರಿ ತಾಲ್ಲೂಕು, ಗಾಣದಕಟ್ಟೆ ಹತ್ತಿರ ಮತ್ತಿಹಳ್ಳಕ್ಕೆ ಚೆಕ್‌ಡ್ಯಾಂ ನಿರ್ಮಾಣ ಕಾಮಗಾರಿಯ 600.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 21/03/09ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಚಿತ್ರದುರ್ಗ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ದಾವಣಗೆರೆ ಜಿಲ್ಲಾ ಟೆಂಡರ್ ಬುಲೆಟಿನ್ | ದಿ:13/02/09 |
| 2 | ವಿಜಯ ಕರ್ನಾಟಕ ಹಾಗೂ ಕನ್ನಡಪ್ರಭ ದಿನಪತ್ರಿಕೆಗಳು | ದಿ:20/02/09 |
| 3 | ರಾಜ್ಯ ಟೆಂಡರ್ ಬುಲೆಟಿನ್ | ದಿ:21/02/09 |

ಕಾರಣಾಂತರಗಳಿಂದ ಈ ಅಧಿಸೂಚನೆಯನ್ನು ಹಿಂದೂಡಲಾಗಿದ್ದು, ಹಿಂದೂಡಿಕೆ ಪ್ರಕಟಣೆಯನ್ನು ದಿನಾಂಕ 19/02/09ರಂದು ಹೊರಡಿಸಿರುತ್ತಾರೆ. ರಾಜ್ಯ ಟೆಂಡರ್ ಬುಲೆಟಿನ್‌ನಲ್ಲಿ ದಿನಾಂಕ 25/02/09, ದಾವಣಗೆರೆ ಜಿಲ್ಲಾ ಟೆಂಡರ್ ಬುಲೆಟಿನ್‌ನಲ್ಲಿ ದಿನಾಂಕ 21/02/09 ಹಾಗೂ ವಿಜಯ ಕರ್ನಾಟಕ ಹಾಗೂ ಕನ್ನಡಪ್ರಭ ದಿನಪತ್ರಿಕೆಯಲ್ಲಿ ದಿನಾಂಕ 22/02/09ರಂದು ಪ್ರಕಟಿಸಲಾಗಿದೆ. ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ ಇಬ್ಬರು ಗುತ್ತಿಗೆದಾರರು ನಿಗದಿತ ದಿನದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್ ಅನ್ನು ದಿನಾಂಕ 11/03/09ರಂದು ತೆರೆಯಲಾಗಿದ್ದು, ಇಬ್ಬರೂ ಗುತ್ತಿಗೆದಾರರ ಟೆಂಡರುಗಳು ಅರ್ಹವಾಗಿದ್ದು, ಈ ಇಬ್ಬರೂ ಗುತ್ತಿಗೆದಾರರು

ಅರ್ಹರೆಂದು ಪರಿಗಣಿಸಿ ಅವರ ಆರ್ಥಿಕ ಬಿಡ್‌ಗಳನ್ನು ಸಹ ಅಂದೇ ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | |
|---|---|
| **ಮಂಜೂರಾದ ಅಂದಾಜಿನ ದರಗಳಂತೆ ಹಾಗೂ ಪ್ರಸಕ್ತ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ ಟೆಂಡರಿಗೆ ಇಡಲಾದ ಮೊತ್ತ** | **ರೂ.5,70,09,937/–** |

| ಕ್ರ.ಸಂ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|
| 1 | ಎಸ್.ವಿ.ಬಂಡಿ, 1ನೇ ದರ್ಜೆ ಗುತ್ತಿಗೆದಾರರು | ರೂ.7,73,38,170/– | 35.66 ಹೆಚ್ಚು |
| 2 | ಎಸ್.ಆರ್.ಕಪ್ಪಲಗುದ್ದಿ, 1ನೇ ದರ್ಜೆ ಗುತ್ತಿಗೆದಾರರು | ರೂ.8,09,59,391/– | 42.01 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ:1ರಲ್ಲಿರುವ ಶ್ರೀ ಎಸ್.ವಿ.ಬಂಡಿ, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ರೂ.7,73,38,170–00ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 35.66ರಷ್ಟು ಹೆಚ್ಚಾಗಿದ್ದು, ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್‌ರವರು ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 23/03/09ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ.5,70,09,937–00ಗಳ ಮೇಲೆ ಶೇಕಡ 14.75ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.6,54,18,903–00ಗಳಿಗೆ ಕಾಮಗಾರಿಯನ್ನು ಶ್ರೀ ಎಸ್.ವಿ.ಬಂಡಿ, 1ನೇ ದರ್ಜೆ ಗುತ್ತಿಗೆದಾರರು, ಬೆಂಗಳೂರು ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 21 ಅಪಿಬಂ 2009, ಬೆಂಗಳೂರು, ದಿನಾಂಕ: 15ನೇ ಮೇ 2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಾವಣಗೆರೆ ಜಿಲ್ಲೆ, ಚನ್ನಗಿರಿ ತಾಲ್ಲೂಕು, ಗಾಣದಕಟ್ಟೆ ಹತ್ತಿರ ಮತ್ತಿಹಳ್ಳಕ್ಕೆ ಚೆಕ್‌ಡ್ಯಾಂ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ.5,70,09,937–00ಗಳ ಮೇಲೆ ಶೇಕಡ 14.75ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ.6,54,18,903–00ಗಳಿಗೆ (ಆರು ಕೋಟಿ ಐವತ್ತ್ನಾಲ್ಕು ಲಕ್ಷದ ಹದಿನೆಂಟು ಸಾವಿರದ ಒಂಭೈನೂರ ಮೂರು ರೂ.ಗಳು ಮಾತ್ರ) ಶ್ರೀ ಎಸ್.ವಿ.ಬಂಡಿ, 1ನೇ ದರ್ಜೆ ಗುತ್ತಿಗೆದಾರರು, ಬೆಂಗಳೂರು ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ:20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1248

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ವಸತಿ ಸಚಿವಾಲಯ

**ವಿಷಯ :** ಜಗಳೂರು ಪಟ್ಟಣ ಆಶ್ರಯ ಸಮಿತಿಗೆ ಅಧ್ಯಕ್ಷರ ಮತ್ತು ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಓದಲಾಗಿದೆ :** ಸರ್ಕಾರದ ಆದೇಶ ಸಂ. ವಇ 42 ಹೆಚ್‌ಎಎಂ 1999 ದಿನಾಂಕ:10.5.2000.

**ಪ್ರಸ್ತಾವನೆ:**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್‌ರಚಿಸಲು ತೀರ್ಮಾನಿಸಿದ್ದು, ಅದರಂತೆ ಜಗಳೂರು ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ 54 ಹೆಚ್‌ಎಎಸ್ 2008 (ಭಾ), ಬೆಂಗಳೂರು, ದಿನಾಂಕ:25ನೇ ಫೆಬ್ರವರಿ 2009**

ಜಗಳೂರು ಪಟ್ಟಣ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | ಅಭ್ಯರ್ಥಿಯ ಹೆಸರು | ವರ್ಗ |
|---|---|---|
| 1 | ಶ್ರೀ ಸಿ. ನಾಗರಾಜ ಬಿನ್ ಚನ್ನಪ್ಪ , ಜಿಡ್ಡಿಕೆರೆ, 1ನೇ ವಾರ್ಡ್ ಜಗಳೂರು | ಸಾಮಾನ್ಯ |
| 2 | ಶ್ರೀಮತಿ ಲತಾ ಕೋಂ ಬಸವರಾಜ, ಜೆ.ಸಿ. ಆರ್. ಬಡಾವಣೆ ಕ್ಯಾಂಪ್, ಜಗಳೂರು | ಪ.ಜಾತಿ |
| 3 | ಶ್ರೀ ಆರ್. ಸಂಪತ್ ಬಿನ್ ಕೆ. ರಾಮಲಿಂಗಪ್ಪ, ಅಕ್ಷತ ಸ್ಟೀಲ್ ಮತ್ತು ಸಿಮೆಂಟ್ ಅಂಗಡಿ, ದಾವಣಗೆರೆ–ಚಳ್ಳಕೆರೆ ರಸ್ತೆ, ಜಗಳೂರು | ಹಿಂದುಳಿದ ವರ್ಗ |
| 4 | ಶ್ರೀ ಜಿ.ಆರ್. ನಜೀರುಲ್ಲಾ ಖಾನ್ ಬಿನ್ ಮಹಮದ್ದೀನ್ ಖಾನ್, ಐಸ್, ಫ್ಯಾಕ್ಟರಿ, ಗಾಂಧಿ ಸರ್ಕಲ್, ಜಗಳೂರು | ಅಲ್ಪ ಸಂಖ್ಯಾತರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 752

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ

**ತಿದ್ದುಪಡಿ ಸಂಖ್ಯೆ:ವಇ 10 ಹೆಚ್‌ಎಎಸ್ 09, ಬೆಂಗಳೂರು, ದಿನಾಂಕ:25ನೇ ಫೆಬ್ರವರಿ 2009**

**ವಿಷಯ :** ಕಡೂರು ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಪ್ರಸ್ತಾವನೆ:**

ಸರ್ಕಾರದ ಆದೇಶ ಸಂಖ್ಯೆ :ವಇ 10 ಹೆಚ್‌ಎಎಸ್ 2008, ದಿನಾಂಕ:3.2.2009ರ ಆದೇಶದ ಅಭ್ಯರ್ಥಿಯ ಹೆಸರಿನ ಕ್ರಮ ಸಂಖ್ಯೆ (2)ರಲ್ಲಿ ಶ್ರೀ ಹೆಚ್ ಉಮೇಶ್ ಬಿನ್ ಹುಲಿಗಿರಿಯಪ್ಪ" ಎಂದು ನಮೂದಾಗಿರುತ್ತದೆ. ಅದರ ಬದಲಿಗೆ "ಶ್ರೀ ಹೆಚ್. ರಮೇಶ್ ಬಿನ್ ಹುಲಿಗಿರಿಯಪ್ಪ" ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 753

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ–2, ವಸತಿ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** 2008–09ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯ ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನವನ್ನು ರಾಜ್ಯದ 3 ಜಿಲ್ಲಾ ಪಂಚಾಯಿತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ..

**ಓದಲಾಗಿದೆ**

1 ಕೇಂದ್ರ ಸರ್ಕಾರದ ಪತ್ರ ಸಂಖ್ಯೆ:ಆರ್–20015:28:2007–ಡಿಆರ್‌ಡಿಎ (ಎಸ್‌ಆರ್‌ನಂ 10) ದಿನಾಂಕ:3.4.08, (ಎಸ್‌ಆರ್‌ನಂ. 40) ದಿನಾಂಕ:28.5.08.

2 ಸರ್ಕಾರದ ಆದೇಶ ಸಂ. ಗ್ರಾಅಪ 7 ಎಸ್‌ಜೆವೈ (ಡಿಆರ್‌ಡಿಎ) 2008 ಬೆಂಗಳೂರು ದಿನಾಂಕ:23.5.2008, 26.6.2008.

3 ಕೇಂದ್ರ ಸರ್ಕಾರದ ಪತ್ರ ಸಂಖ್ಯೆ:ಆರ್ 17014/10/2008–09 ಡಿಆರ್‌ಡಿಎ (ಎಸ್‌ಎಲ್82) ದಿನಾಂಕ:3.11.08 ಮತ್ತು (ಎಸ್‌ನಂ.90) ದಿನಾಂಕ:14.11.2008(ಎಸ್‌ಎಲ್‌ನಂ. 108) ದಿನಾಂಕ:11.12.08 ಮತ್ತು (ಎಸ್‌ಎಲ್ ನಂ 141) ದಿನಾಂಕ 9.1.09

4 ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 7 ಎಸ್‌ಜೆವೈ (ಡಿಆರ್‌ಡಿಎ) 2008, ಬೆಂಗಳೂರು,. ದಿನಾಂಕ:18.12.2008 ಮತ್ತು 31.1.2009.

5 ಕೇಂದ್ರ ಸರ್ಕಾರದ ಪತ್ರ ಸಂಖ್ಯೆ:ಆರ್–17014/10/2008–09 ಡಿಆರ್‌ಡಿಎ (ಎಸ್‌ಎಲ್ ನಂ.159) ದಿನಾಂಕ:23.1.09.

ಪ್ರಸ್ತಾವನೆ:

2008–09ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಕೇಂದ್ರ ಸರ್ಕಾರ ಓದಲಾಗಿದೆ (1) ರ ಪತ್ರಗಳ ದಿನಾಂಕ:3.4.2008 ಹಾಗೂ 28.5.2008ರಲ್ಲಿ ರಾಜ್ಯದ 29 ಜಿಲ್ಲಾ ಪಂಚಾಯಿತಿಗಳಿಗೆ ಒಂದನೇ ಕಂತಿನ ಅನುದಾನವಾಗಿ ರೂ, 5,38,77,000 ಗಳನ್ನು ಬಿಡುಗಡೆ ಮಾಡಿವೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರ ಓದಲಾಗಿದೆ (2)ರ ಆದೇಶಗಳ ಸಮಸಂಖ್ಯೆ ದಿನಾಂಕ:23.5.2008 ಮತ್ತು 26.6.2008ರಲ್ಲಿ ರೂ, 1,79,57,000ಗಳನ್ನು ಬಿಡುಗಡೆ ಮಾಡಿವೆ. ಕೇಂದ್ರ ಸರ್ಕಾರ ಓದಲಾಗಿದೆ (3)ರ ಪತ್ರಗಳಲ್ಲಿ ರಾಜ್ಯದ 18 ಜಿಲ್ಲಾ ಪಂಚಾಯಿತಿಗಳಿಗೆ ಎರಡನೇ ಕಂತಿನ ಅನುದಾನವಾಗಿ ರೂ. 4,05,18,000ಗಳನ್ನು ಬಿಡುಗಡೆ ಮಾಡಿದೆ. ರಾಜ್ಯ ಸರ್ಕಾರ ಓದಲಾಗಿದೆ (4)ರ ಆದೇಶಗಳಲ್ಲಿ ರಾಜ್ಯದ ಆಯವ್ಯಯದಲ್ಲಿ ಜಿಲ್ಲೆಗಳಿಗೆ ಲಭ್ಯವಿರುವ ಅನುದಾನದ ಆಧಾರದ ಮೇಲೆ ರೂ. 1,34,39,000ಗಳನ್ನು ಬಿಡುಗಡೆ ಮಾಡಿದೆ.

ಓದಲಾಗಿದೆ (5)ರನ್ವಯ ಕೇಂದ್ರ ಸರ್ಕಾರದ ಡಿಆರ್‌ಡಿಎ ಆಡಳಿತ ಯೋಜನೆಯಡಿ ಎರಡನೇ ಕಂತಿನ ಅನುದಾನವಾಗಿ ಚಾಮರಾಜನಗರ, ಹಾವೇರಿ ಮತ್ತು ಉಡುಪಿ ಜಿಲ್ಲೆಗಳಿಗೆ ರೂ. 39,42,000ಗಳನ್ನು ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರ ತನ್ನ ಪಾಲಿನ ಎರಡನೇ ಕಂತಿನ ಅನುದಾನ ರೂ. 13,13,000ಗಳನ್ನು ಸದರಿ ಜಿಲ್ಲಾ ಪಂಚಾಯಿತಿಗಳಿಗೆ ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 7 ಎಸ್‌ಜಿವೈ (ಡಿಆರ್‌ಡಿಎ) 2008, ಬೆಂಗಳೂರು, ದಿನಾಂಕ:19ನೇ ಫೆಬ್ರವರಿ 2009**

2008–09ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಡಿಆರ್‌ಡಿಎ ಆಡಳಿತ ಯೋಜನೆಯಡಿ ಬಿಡುಗಡೆ ಮಾಡಿರುವ ಎರಡನೇ ಕಂತಿನ ಅನುದಾನಕ್ಕೆ ಅನುಗುಣವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಎರಡನೇ ಕಂತಿನ ಅನುದಾನ ರೂ. 13,13,000ನ್ನು (ಹದಿಮೂರು ಲಕ್ಷದ ಹದಿಮೂರು ಸಾವಿರ ರೂಪಾಯಿಗಳು ಮಾತ್ರ) ಕೆಳಕಾಣಿಸಿದ ಮೂರು ಜಿಲ್ಲಾ ಪಂಚಾಯಿತಿಗಳಿಗೆ ಷರತ್ತುಗಳಿಗೆ ಒಳಪಟ್ಟು ಅನುದಾನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ.ಸಂ | ಜಿಲ್ಲಾ ಪಂಚಾಯತಿ | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಎರಡನೇ ಕಂತಿನ ಅನುದಾನ (ರೂಗಳಲ್ಲಿ) | ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಎರಡನೇ ಕಂತಿನ ಅನುದಾನ (ರೂಗಳಲ್ಲಿ) |
|---|---|---|---|---|---|
| 1 | ಚಾಮರಾಜನಗರ | 456 | 1000ZZ 0001 | 8,23,000 | 2,74,000 |
| 2 | ಹಾವೇರಿ | 463 | 2700ZZ0001 | 11,08,000 | 3,69,000 |
| 3 | ಉಡುಪಿ | 457 | 2000ZZ0001 | 20,11,000 | 6.70,000 |
| | | | ಒಟ್ಟು | 39,42,000 | 13,13,000 |

ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನವನ್ನು ಜಿಲ್ಲಾ ಪಂಚಾಯತ್ (ಡಿಆರ್‌ಡಿಎ ಆಡಳಿತ ಕೋಶದ) ಸಿಬ್ಬಂದಿಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸುವುದು. ಇನ್ನಾವುದೇ ಉದ್ದೇಶಗಳಿಗೆ ಉಪಯೋಗಿಸತಕ್ಕದ್ದಲ್ಲ.

ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ನಡುವೆ 75:25 ರ ಅನುಪಾತದಲ್ಲಿರುತ್ತದೆ.

ಯೋಜನೆಯ ವೆಚ್ಚವನ್ನು ಲೆಕ್ಕಶೀರ್ಷಿಕೆ :" 2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196–ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6–ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ–(ಕೇಂದ್ರ ಪುಸಸ್ಕೃತ ಯೋಜನೆ) 2008–2009(2515–00–196–6–06)"ರಡಿ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ ಎಫ್‌ಡಿ 1 ಜೆಡ್‌ಪಿಎ 2007 (ಪಿ2) ದಿನಾಂಕ:26.4.2007ರನ್ವಯ ಜಿಲ್ಲಾ ಪಂಚಾಯತ್ ನಿಧಿ 1ಕ್ಕೆ ಜಮೆ ಮಾಡಿಕೊಂಡು ಪೇಯಿಸ್ ರಸೀದಿಯ ಮೂಲಕ ಜಿಲ್ಲಾ ಪಂಚಾಯತಿ ನಿಧಿಯಿಂದ ಅನುದಾನವನ್ನು ಖಜಾನೆಯಿಂದ ಪಡೆದುಕೊಂಡು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ವೆಚ್ಚವನ್ನು ಭರಿಸತಕ್ಕದ್ದು.

ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಬಿಡುಗಡೆ ಮಾಡಿರುವ ಅನುದಾನವನ್ನು ಖಜಾನೆಯಿಂದ ಸೆಳೆಯುವ ಅಧಿಕಾರವನ್ನು ಆಯಾಯ ಜಿಲ್ಲಾ ಪಂಚಾಯಿತಿಗಳ ಮುಖ್ಯ ಲೆಕ್ಕಾಧಿಕಾರಿಗೆ ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯಿತಿ ಇವರು ಆಯಾ ತಿಂಗಳ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5ನೇ ತಾರೀಖಿನೊಳಗೆ ನಿರ್ದೇಶಕರು (ಸ್ವಉಕಾ) ಹಾಗೂ ಪದ ನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು, ಇವರಿಗೆ ತಪ್ಪದೇ ಕಳುಹಿಸುವುದು.

ಜಿಲ್ಲಾ ಪಂಚಾಯಿತಿಗಳ, ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನ ವರದಿಗಳನ್ನು ನಿರ್ದೇಶಕರು [ಸ್ವಉಕಾ] ಹಾಗೂ ಪದ ನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು, ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ ಇವರ ಸಹಮತಿ ಸಂಖ್ಯೆ:ಗ್ರಾಅಪ 55 ಪಿಬಿಎಸ್ 2009 ದಿನಾಂಕ:17.2.2009ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 754

**ಡಾ: ಶಮ್ಲಾ ಇಕ್ಬಾಲ್**

ನಿರ್ದೇಶಕರು (ಸ್ವ.ಉ.ಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ,

**ವಿಷಯ:** 2008–09ನೇ ಸಾಲಿಗೆ ಎಸ್‌ಜಿಎಸ್‌ವೈ ಎರಡನೇ ಕಂತಿನ ರಾಜ್ಯದ ಪಾಲಿನ ಅನುದಾನವನ್ನು ರಾಜ್ಯದ 9 ಜಿಲ್ಲಾ ಪಂಚಾಯಿತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ**
1 ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರ ಸಂಖ್ಯೆ:ಜೆ 12022/1/2008 ಎಸ್‌ಜಿಎಸ್‌ವೈ–I(12) ದಿನಾಂಕ:2.4.08, (39) ದಿನಾಂಕ:22.5.08 ಮತ್ತು (63) ದಿನಾಂಕ:26.6.08.
2 ರಾಜ್ಯ ಸರ್ಕಾರದ ಆದೇಶ ಸಮ ಸಂಖ್ಯೆ ದಿನಾಂಕ:12.5.08 ಮತ್ತು 29.7.08
3 ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ:ಜೆ 12022/1/2008 ಎಸ್‌ಜಿಎಸ್‌ವೈ–I (126)ದಿನಾಂಕ:18.12.08 ಮತ್ತು (146) ದಿನಾಂಕ:14.1.09.
4 ರಾಜ್ಯ ಸರ್ಕಾರದ ಆದೇಶ ಸಮ ಸಂಖ್ಯೆ ದಿನಾಂಕ:30–1–2009.
5 ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ:ಜೆ 12022/1/2008 ಎಸ್‌ಜಿಎಸ್ ವೈ–I (171) ದಿನಾಂಕ:28.1.09

**ಪ್ರಸ್ತಾವನೆ:**

2008–09ನೇ ಸಾಲಿನಲ್ಲಿ ಸ್ವರ್ಣ ಜಯಂತಿ ಗ್ರಾಮಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜೆಎಸ್‌ವೈ) ಕೇಂದ್ರ ಸರ್ಕಾರವು ಓದಲಾಗಿದೆ (1)ರಲ್ಲಿ ಒಂದನೇ ಕಂತಿನ ಅನುದಾನವಾಗಿ ಒಟ್ಟು ರೂ. 40,08,44,000ಗಳನ್ನು ರಾಜ್ಯದ ಎಲ್ಲಾ ಜಿಲ್ಲಾ ಪಂಚಾಯಿತಿಗಳಿಗೆ ಬಿಡುಗಡೆ ಮಾಡಿದ್ದು, ಇದರನ್ವಯ ಓದಲಾಗಿದೆ (2)ರನ್ವಯ ರಾಜ್ಯ ಸರ್ಕಾರವು ಆಯವ್ಯಯದಲ್ಲಿ ಜಿಲ್ಲೆಗಳಿಗೆ ಲಭ್ಯವಿರುವ ಅನುದಾನದಂತೆ ತನ್ನ ಪಾಲಿನ ಮೊದಲನೇ ಕಂತಿನ ಅನುದಾನ ರೂ. 13.21,59,000 ಬಿಡುಗಡೆ ಮಾಡಲಾಗಿದೆ. ಓದಲಾಗಿದೆ (3)ರಲ್ಲಿನ ದಿನಾಂಕಗಳಲ್ಲಿ ಕೇಂದ್ರ ಸರ್ಕಾರ ಈ ಯೋಜನೆಗೆ ರಾಜ್ಯದ 9 ಜಿಲ್ಲೆಗಳಿಗೆ ಎರಡನೇ ಕಂತಿನ ಅನುದಾನವಾಗಿ ಒಟ್ಟು ರೂ. 10,82,51,000 ಗಳನ್ನು ಬಿಡುಗಡೆ ಮಾಡಿದೆ. ಇದರನ್ವಯ ರಾಜ್ಯಸರ್ಕಾರವು ಓದಲಾಗಿದೆ (4)ರ ಆದೇಶದಲ್ಲಿ ತನ್ನ ಪಾಲಿನ ಎರಡನೇ ಕಂತಿನ ಅನುದಾನ ರೂ.3,60,84,00ಗಳನ್ನು ಬಿಡುಗಡೆ ಮಾಡಿದೆ.

ಓದಲಾಗಿದೆ (5)ರ ಪತ್ರದಲ್ಲಿ ಕೇಂದ್ರ ಸರ್ಕಾರ ಎಸ್‌ಜಿಎಸ್‌ವೈ ಯಡಿ ರಾಜ್ಯದ ಬೆಂಗಳೂರು ಗ್ರಾಮಾಂತರ ಬಳ್ಳಾರಿ ಬೀದರ್, ಬಿಜಾಪುರ, ದಕ್ಷಿಣಕನ್ನಡ, ಗದಗ್ ಕೊಡಗು, ಮೈಸೂರು ಮತ್ತು ಉತ್ತರ ಕನ್ನಡ ಜಿಲ್ಲೆಗಳಿಗೆ ಎರಡನೇ ಕಂತಿನ ಅನುದಾನವಾಗಿ ಒಟ್ಟು ರೂ. 8,.69,34,000ಗಳನ್ನು ಬಿಡುಗಡೆ ಮಾಡಿದೆ. ಇದರನ್ವಯ ರಾಜ್ಯದ ಆಯವ್ಯಯದಲ್ಲಿ ಅನುದಾನದ ಲಭ್ಯತೆ ಆಧಾರದ ಮೇಲೆ ತನ್ನ ಪಾಲಿನ ಎರಡನೇ ಕಂತಿನ ಅನುದಾನವಾಗಿ ರೂ 2,83,96,000 ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ:

**ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 32 ಎಸ್‌ಜೆವೈ 2008, ಬೆಂಗಳೂರು, ದಿನಾಂಕ:16ನೇ ಫೆಬ್ರವರಿ 2009**

ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ರಾಜ್ಯ ಸರ್ಕಾರವು ತನ್ನ ಪಾಲಿನ ಎರಡನೇ ಕಂತಿನ ಅನುದಾನವನ್ನು ಲಗತ್ತಿಸಿರುವ ಅನುಬಂಧದಲ್ಲಿ ತೋರಿಸಿರುವಂತೆ ಬೆಂಗಳೂರು ಗ್ರಾಮಾಂತರ, ಬಳ್ಳಾರಿ ಬೀದರ್ ಬಿಜಾಪುರ, ದಕ್ಷಿಣ ಕನ್ನಡ, ಗದಗ್, ಕೊಡಗು, ಮೈಸೂರು ಮತ್ತು ಉತ್ತರ ಕನ್ನಡ ಜಿಲ್ಲೆಗಳಿಗೆ ಒಟ್ಟು ರೂ. 2,83,96,000 ಗಳನ್ನು (ರೂ. ಎರಡು ಕೋಟಿ ಎಂಬತ್ತಮೂರು ಲಕ್ಷದ ತೊಂಬತ್ತಾರು ಸಾವಿರ ಮಾತ್ರ) ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

**ಷರತ್ತುಗಳು:**

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ನಿಧಿಯ ಮಾದರಿ ಕೇಂದ್ರ ಮತ್ತು ರಾಜ್ಯದ ನಡುವೆ 75:25 ರ ಅನುಪಾತದಲ್ಲಿ ನೀಡಲಾಗುವುದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕಶೀರ್ಷಿಕೆ 2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು–01–

ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198–ಗ್ರಾಮಪಂಚಾಯತ್‌ಗಳಿಗೆ ಸಹಾಯ 6–ಗ್ರಾಮ ಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2008–09 (2501–01–198–6–01) ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ:14.7.2005 ರನ್ವಯ ಖಜಾನೆಯಿಂದ ಪಡೆಯುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯಿತಿಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯಿತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿದಂತೆ ಒಟ್ಟು ಅನುದಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ:ಗ್ರಾಅಪ 14 ಎಸ್ ಜೆವೈ 2007 ದಿನಾಂಕ:18.4.2007ರ ಸೂಚನೆಯಂತೆ ಕ್ರಮ ಕೈಗೊಳ್ಳುವುದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಮಾಡುವುದು.

2008–09ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯಿತಿಗಳ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತು ಭೌತಿಕ ಸಾಧನೆಯ ಮಾಸಿಕ ಪ್ರಗತಿ ವರದಿಯನ್ನು ಪ್ರತಿ ಮಾಹೆಯ 5ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ online ಗೆ upload ಮಾಡಿ ಪ್ರತಿಯನ್ನು ಸ್ವ ಉದ್ಯೋಗ ಕಾರ್ಯಕ್ರಮಗಳ ಶಾಖೆಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಇವರ ಸಹಮತಿ ಸಂಖ್ಯೆ:ಗ್ರಾಅಪ 55 ಪಿಬಿಎಸ್ 2009 ದಿನಾಂಕ:13.2.2009ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಾ: ಶಮ್ಲಾ ಇಕ್ಬಾಲ್**

ನಿರ್ದೇಶಕರು (ಸ್ವ.ಉ.ಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ,

**ಸರ್ಕಾರದ ಆದೇಶದ ಸಂಖ್ಯೆ:ಗ್ರಾಅಪ 32 ಎಸ್ ಜೆವೈ 2009, ಬೆಂಗಳೂರು, ದಿನಾಂಕ:16.2.2009ಕ್ಕೆ ಅನುಬಂಧ**

**(ರೂ.ಗಳಲ್ಲಿ)**

| ಕ್ರ.ಸಂ | ಜಿಲ್ಲಾ ಪಂಚಾಯಿತಿ ಹೆಸರು | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಎರಡನೇ ಕಂತಿನ ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡಬೇಕಾದ ಎರಡನೇ ಕಂತಿನ ಅನುದಾನ |
|---|---|---|---|---|---|
| 1 | ಬೆಂಗಳೂರು(ಗ್ರಾ) | 402 | 0300ZZ 8001 | 17,41,000 | * |
| 2 | ಬಳ್ಳಾರಿ | 418 | 3400ZZ 0001 | 2,21,49,000 | 73,83, 000 |
| 3 | ಬೀದರ್ | 419 | 3800ZZ5701 | 1,57,47,000 | 52,49,000 |
| 4 | ಬಿಜಾಪುರ | 414 | 2800ZZ9152 | 1,16,73,000 | 38,91,000 |
| 5 | ದಕ್ಷಿಣ ಕನ್ನಡ | 409 | 1900ZZ0047 | 73,31,000 | 24,43,000 |
| 6 | ಗದಗ್ | 462 | 2600ZZ0001 | 1,26,49,000 | 42,16,000 |
| 7 | ಕೊಡಗು | 411 | 1200ZZ0001 | 34,000 | 11,000 |
| 8 | ಮೈಸೂರು | 407 | 0900ZZ0001 | 1,56,10,000 | 52,03,000 |
| 9 | ಉತ್ತರಕನ್ನಡ | 416 | 3000ZZ0080 | 0 | 0 |
| | | ಒಟ್ಟು | | 8,69,34,000 | 2,83,96,000 |

* ಬೆಂಗಳೂರು ಗ್ರಾಮಾಂತರ ಜಿಲ್ಲೆಗೆ ರಾಜ್ಯದ ಆಯವ್ಯದಲ್ಲಿ ಅನುದಾನ ಲಭ್ಯವಿಲ್ಲದ ಕಾರಣ ರಾಜ್ಯದ ಪಾಲಿನ ಅನುದಾನವನ್ನು ಪುರ್ನವಿನಿಯೋಗದ ನಂತರ ಬಿಡುಗಡೆ ಮಾಡಲಾಗುವುದು.

**ಡಾ: ಶಮ್ಲಾ ಇಕ್ಬಾಲ್**

ಪಿ.ಆರ್. 755

ನಿರ್ದೇಶಕರು (ಸ್ವ.ಉ.ಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ,

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** ಧಾರವಾಡ ಜಿಲ್ಲೆ, ಹುಬ್ಬಳ್ಳಿ ತಾಲ್ಲೂಕು, ಗಾಮನಗಟ್ಟಿ ಗ್ರಾಮದ ಬ್ಲಾಕ್ ನಂ. 208ರ 278–20 ಎಕರೆ ಇನಾಂ ಜಮೀನಿಗೆ ದಯಾತ್ಮಕ ಪರಿಹಾರ ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ :** 1 ಮಾನ್ಯ ಜಿಲ್ಲಾ ಉಸ್ತುವಾರಿ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ದಿನಾಂಕ:26.10.2008ರ ಸಭೆಯ ನಡವಳಿ.

2 ಜಿಲ್ಲಾಧಿಕಾರಿಗಳು, ಧಾರವಾಡ ಇವರ ಅ.ಸ.ಪತ್ರ ಸಂಖ್ಯೆ:ಡಬ್ಲ್ಯೂಎಟಿಎಎನ್/ಸಿಆರ್–10/05–06 ದಿನಾಂಕ:14.10.2008 ಮತ್ತು 30.10.2008.

**ಪ್ರಸ್ತಾವನೆ:**

ದಿನಾಂಕ:1.7.2006ರಂದು ನಡೆದ ಕೆಐಎಡಿಬಿ ಸಭೆಯಲ್ಲಿ ಧಾರವಾಡ ಜಿಲ್ಲೆ, ತಾರೀಹಾಳ್ ಮತ್ತು ಗಾಮನಗಟ್ಟಿ ಗ್ರಾಮಗಳಲ್ಲಿ 500–00 ಎಕರೆ ಜಮೀನನ್ನು ಮಂಡಳಿಯಿಂದ, ಕೈಗಾರಿಕಾ ಪ್ರದೇಶಕ್ಕಾಗಿ ಭೂಸ್ವಾಧೀನ ಪಡಿಸಲು ನಿರ್ಣಯವಾಗಿರುತ್ತದೆ. ಮಂಡಳಿ ಸಭೆಯ ನಿರ್ಣಯದಂತೆ 231 ಎಕರೆ 23 ಗುಂಟೆ ಖಾಸಗಿ ಹಾಗೂ 278 ಎಕರೆ 20 ಗುಂಟೆ ಸರ್ಕಾರಿ ಜಮೀನುಗಳು ಸೇರಿ ಒಟ್ಟು 510 ಎಕರೆ 03 ಗುಂಟೆ ಜಮೀನನ್ನು ಭೂಸ್ವಾಧೀನ ಪಡಿಸಲು ಪ್ರಸ್ತಾಪಿಸಲಾಗಿತ್ತು. ಅದರಂತೆ ಅಧಿಸೂಚನೆ ಸಂಖ್ಯೆ:ಸಿಐ 245 ಎಸ್ ಪಿಕ್ಯೂ 2006 ದಿನಾಂಕ:19.8/2006 ರಂದು 226 ಎಕರೆ 38 ಗುಂಟೆ ಖಾಸಗಿ ಜಮೀನಿಗೆ ಕೆಐಎಡಿ ಕಲಂ 28(1)ರನ್ವಯ ಪ್ರಾರಂಭಿಕ ಅಧಿಸೂಚನೆ ಹೊರಡಿಸಲಾಗಿದೆ. ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಐ 246 ಎಸ್‌ಪಿಕ್ಯೂ 2007 ದಿನಾಂಕ :17.5.2007 ರಂದು 278 ಎಕರೆ 20 ಗುಂಟೆ ಸರ್ಕಾರಿ ಜಮೀನಿಗೆ ಪ್ರತ್ಯೇಕವಾಗಿ ಕೆ.ಐ.ಎ.ಡಿ. ಕಲಂ 28(1)ರ ಅಧಿಸೂಚನೆ ಹೊರಡಿಸಲಾಗಿದೆ.

2. ತದನಂತರ ಒಟ್ಟು 510 ಎಕರೆ 03 ಗುಂಟೆ ಜಮೀನಿಗೆ ಕೆಐಎಡಿ ಕಲಂ 28(4)ರಂತೆ ಅಧಿಸೂಚನೆ ಸಂಖ್ಯೆ:ಸಿಐ 246 ಎಸ್‌ಪಿಕ್ಯೂ 2007 ದಿನಾಂಕ:6.10.2007 ರಂದು ಅಂತಿಮ ಅಧಿಸೂಚನೆಯನ್ನು ಹೊರಡಿಸಲಾಗಿದೆ.

3. ಜಿಲ್ಲಾಧಿಕಾರಿಗಳು, ಧಾರವಾಡ ಇವರು ಓದಲಾದ (2)ರ ದಿನಾಂಕ:14.10.2008ರ ಪತ್ರದಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಿಂದ ಕೈಗಾರಿಕಾ ಪ್ರದೇಶಕ್ಕೆ ಒಟ್ಟು 510 ಎಕರೆ 03 ಗುಂಟೆ ಜಮೀನನ್ನು ಭೂಸ್ವಾಧೀನಪಡಿಸಿಕೊಳ್ಳಲಾಗಿದೆ. ಇದರಲ್ಲಿ 231 ಎಕರೆ 23 ಗುಂಟೆ ಖಾಸಗಿ ಜಮೀನು ಮತ್ತು 278 ಎಕರೆ 20 ಗುಂಟೆ ಸರ್ಕಾರಿ ಜಮೀನು ಇರುತ್ತದೆ. ಖಾಸಗಿ ಜಮೀನಿಗೆ ಈಗಾಗಲೇ ಪ್ರತಿ ಎಕರೆಗೆ ರೂ. 13.36 ಲಕ್ಷ ಭೂ ದರ ನಿಗಧಿಯಾಗಿದೆ,. ಅದರಂತೆ ಹಣ ಸಹ ಪಾವತಿ (consent award) ಮಾಡಲಾಗಿದೆ. ಸರ್ಕಾರಿ ಜಮೀನು ಹಾಗೂ ಖಾಸಗಿ ಜಮೀನು ಸಂಪೂರ್ಣವಾಗಿ ಸ್ವಾಧೀನಪಡಿಸಿಕೊಳ್ಳದ ಹೊರತು ಖಾಸಗಿ ಜಮೀನಿಗೆ ಹಣ ಪಾವತಿ ಮಾಡಿರುವುದರಿಂದ ಸದರಿ ಜಮೀನನ್ನು ಉಪಯೋಗಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ ಭೂ ದಾಖಲೆಗಳ ಪ್ರಕಾರ 278 ಎಕರೆ 20 ಗುಂಟೆ ಜಮೀನು (ಹಿಂದಿನ ಸರ್ವೆ ನಂ:60) ಖರಾಬು ಜಮೀನು ಆಗಿದ್ದು 1957–58ರಿಂದ RTC ಯಲ್ಲಿನ ಕಾಲಂ 12ರಲ್ಲಿ ಖರಾಬು ಜಮೀನು ಎಂದು

ದಾಖಲಾಗಿರುತ್ತದೆ. ಆದರೆ ಈ ಜಮೀನನ್ನು ಅನಧಿಕೃತ ಸಾಗುವಳಿ ಮಾಡುತ್ತಿದ್ದ ರೈತರು Principal Civil Judge (Senior Division) Hubli, ಇಲ್ಲಿನ ನ್ಯಾಯಾಲಯದಲ್ಲಿ ದಾವೆ ಹೂಡಿ ತಮ್ಮ ಸಾಗುವಳಿ ಖರಾಬು ಜಮೀನಿನ ಹಕ್ಕನ್ನು ತಮಗೆ ನೀಡಲು ಪ್ರಾರ್ಥಿಸಿದ್ದರು. ಮಾನ್ಯ ನ್ಯಾಯಾಲಯವು ದಿನಾಂಕ:20.4.2006ರ ಆದೇಶದಲ್ಲಿ ಮನವಿದಾರರ ಮನವಿಯನ್ನು ತಿರಸ್ಕರಿಸಿರುತ್ತದೆ. ನಂತರ ಅನಧಿಕೃತ ಸಾಗುವಳಿದಾರರು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ Regular First Appeal ಸಂ:971, 1175 1177,1178 ರಿಂದ 1183,1619 to 1622, 1625,1537,1547,1548, 1558 to 1561/2006 ಸಲ್ಲಿಸಿರುತ್ತಾರೆ. ಸದರಿ RFA ದಿನಾಂಕ:31.10.2006ರಂದು ಈ ಕೆಳಕಂಡಂತೆ ಆದೇಶವಾಗಿರುತ್ತದೆ.

The appeals are partly allowed. The judgment and decree dated 20th April 2006 passed in O.S.No. 135, 136,137,138,139, 140,141,142,143,144,145, 146,147,148,149, 150,151,152,153,154, and 1554 of 2005 by the Principal Civil Judge (Sr. Divn), Hubli is set aside. The suit is decreed granting decree for permanent injunction restraining the respondents from interfering with peaceful possession and enjoyment of the respective suit lands by the plaintiffs. In so far as the declearation declaring that the plaintiffs-appellants have perfected their title over the suit schedule property is concerned, same is dismissed.

Appeals are partly allowed subject to above observation. However, no order as to the cost.

4. ಈ ಆದೇಶದ ವಿರುದ್ಧ ಕಂದಾಯ ಇಲಾಖೆಯ ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ಸಂಖ್ಯೆ:5624/2007ರಲ್ಲಿ SLP ದಾಖಲು ಮಾಡಿರುತ್ತದೆ.

5. ಮೇಲೆ ಓದಲಾದ (2)ರ ದಿನಾಂಕ:30.10.2008ರ ಪತ್ರದಲ್ಲಿ ಜಿಲ್ಲಾಧಿಕಾರಿಗಳು, ಧಾರವಾಡ ಇವರು ಗಾಮನಗಟ್ಟಿ

ಗ್ರಾಮದ ಬ್ಲಾಕ್ ನಂ:208 ರಲ್ಲಿ ಭೂಸ್ವಾಧೀನಪಡಿಸಿಕೊಂಡಿರುವ ಜಮೀನಿನಲ್ಲಿ 278 ಎಕರೆ 20 ಗುಂಟೆ ಜಮೀನು ಸರ್ಕಾರಿ ಜಮೀನು ಆಗಿದ್ದು ಈ ಜಮೀನು ಪ್ರಸ್ತುತ ರೈತರುಗಳ ಮತ್ತು ಸರ್ಕಾರದ ಮಧ್ಯ ತಕರಾರಿನಲ್ಲಿ ಇರುತ್ತದೆ. Bombay Personal Inam Abolition Act ಅಡಿಯಲ್ಲಿ ರಾಜ್ಯ ಸರ್ಕಾರವು ಈ ಜಮೀನು ಸರ್ಕಾರಕ್ಕೆ ಸೇರಿದ ಜಮೀನು ಎಂದು ಆದರೆ ರೈತರು ತಮ್ಮ ಈ ಜಮೀನಿನ tenants of the Inamder ಆಗಿದ್ದು, ಜಮೀನಿನ ಹಕ್ಕು ತಮಗೆ ಸಲ್ಲುವುದೆಂದು ವಾದ ಮಂಡಿಸಿರುತ್ತಾರೆ ಈ ಬಗ್ಗೆ ಪ್ರಧಾನ ಕಾರ್ಯದರ್ಶಿಗಳು, ಕಂದಾಯ ಇಲಾಖೆ ಇವರನ್ನು ಜಿಲ್ಲಾಧಿಕಾರಿಗಳು, ಧಾರವಾಡ ಇವರು ಸ್ಪಷ್ಟೀಕರಣ ಕೇಳಿದಾಗ ಪ್ರಧಾನ ಕಾರ್ಯದರ್ಶಿಗಳು ಕಂದಾಯ ಇಲಾಖೆ ಇವರ ಸಮ್ಮುಖದಲ್ಲಿ ಜಿಲ್ಲಾಧಿಕಾರಿಗಳು, ಧಾರವಾಡ ಇವರನ್ನು ಒಳಗೊಂಡಂತೆ ಸಭೆ ನಡೆಸಲಾಗಿದೆ. ಸದರಿ ಸಭೆಯಲ್ಲಿ ಜಿಲ್ಲಾ ಉಸ್ತುವಾರಿ ಸಚಿವರ ಸಮ್ಮುಖದಲ್ಲಿ ರೈತರುಗಳನ್ನು ಒಳಗೊಂಡಂತೆ ನ್ಯಾಯಾಲಯದಿಂದ ಹೊರಗಡೆ ಸಮಸ್ಯೆ ಇತ್ಯರ್ಥಪಡಿಸಿಕೊಳ್ಳಲು ಸಭೆಯನ್ನು ಕರೆಯಲು ತೀರ್ಮಾನಿಸಲಾಗಿತ್ತು ಅದರಂತೆ ದಿನಾಂಕ: 26.10.2008 ರಂದು ಮಾನ್ಯ ಜಿಲ್ಲಾ ಉಸ್ತುವಾರಿ ಸಚಿವರ ಅಧ್ಯಕ್ಷತೆಯಲ್ಲಿ ಹುಬ್ಬಳ್ಳಿಯಲ್ಲಿ ರೈತರುಗಳನ್ನೊಳಗೊಂಡು ಸಭೆ ಜರುಗಿಸಲಾಗಿತ್ತು ಸದರಿ ಸಭೆಯಲ್ಲಿ ಈ ಕೆಳಕಂಡಂತೆ ನಿರ್ಣಯ ತೆಗೆದುಕೊಳ್ಳಲಾಗಿದೆ ಎಂದು ತಿಳಿಸಿರುತ್ತಾರೆ.

As per the discussions the farmers have agreed for an out of court settlement of Rs. 10.02 lakhs per Acre which would be 75% of the amount determined for the acquisition i.e. Rs. 13.36 Lakhs per Acre. The farmers have agreed to relinquish all their rights withdraw all the litigations and hand over the possession of the lands in case the above-mentioned compensation is paid to them The letter of indemnity executed by the farmers. who are in possession of the land, is sent to the Government.

6. ಈಗಾಗಲೇ ಇಂತಹ ಜಮೀನಿನ ಬಗ್ಗೆ ಶಿವಮೊಗ್ಗ ವಿಮಾನ ನಿಲ್ದಾಣಕ್ಕೆ ಜಮೀನನ್ನು ಸ್ವಾಧೀನಪಡಿಸಿಕೊಳ್ಳುವಾಗ ex-gratia ರೈತರಿಗೆ ಪಾವತಿಸಲಾಗಿದ್ದ ಬಗ್ಗೆ ಸಭೆಯಲ್ಲಿ ಚರ್ಚಿಸಲಾಯಿತು. ಈ ಅನಧಿಕೃತ ಸಾಗುವಳಿದಾರರೊಡನೆ ಮಾನ್ಯ ಬೃಹತ್ ಮತ್ತು ಮಾಧ್ಯಮ ಕೈಗಾರಿಕಾ ಸಚಿವರು ಚರ್ಚಿಸಿದಾಗ ತಾವು ಸಾಗುವಳಿ ಮಾಡುತ್ತಿರುವ ಜಮೀನಿಗೆ ex-gratia ಮೊತ್ತ ಪಾವತಿಸಿದಲ್ಲಿ ತಮ್ಮ ಹಕ್ಕನ್ನು ಬಿಟ್ಟು ಕೊಡಲಾಗುವುದು ಎಂದು ತಿಳಿಸಿರುತ್ತಾರೆ.

7. ಈ ಬಗ್ಗೆ ಕಂದಾಯ ಇಲಾಖೆಯ ಅಭಿಪ್ರಾಯವನ್ನು ಪಡೆಯಲಾಯಿತು. ಕಂದಾಯ ಇಲಾಖೆಯಿಂದ ಟಿಪ್ಪಣಿ ಸಂಖ್ಯೆ:ಕಂಇ 88 ಭೂಸ್ವಾವ್ಯ 2008 ದಿನಾಂಕ:9.1.2009ರಲ್ಲಿ ಹಾಗೂ ದಿನಾಂಕ:17.2.2009ರಲ್ಲಿ ಅಭಿಪ್ರಾಯ ನೀಡಿರುತ್ತದೆ. ಕಂದಾಯ ಇಲಾಖೆಯ ಅಭಿಪ್ರಾಯದ ಅನ್ವಯ ವಿಷಯವನ್ನು ಸಚಿವ ಸಂಪುಟ ಸಭೆಯಲ್ಲಿ ಮಂಡಿಸಲಾಯಿತು.

8. ಈ ಯೋಜನೆಯ ಜಮೀನಿನ ಬಗ್ಗೆ ಈಗಾಗಲೇ ಸರ್ಕಾರದ ಪ್ರತಿನಿಧಿಗಳಾಗಿ, ಉನ್ನತ ಮಟ್ಟದ ಸಭೆಯ ನಿರ್ಣಯದಂತೆ ಮಾನ್ಯ ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಉಸ್ತುವಾರಿ ಮಂತ್ರಿಗಳು ರೈತರೊಡನೆ ಸಭೆ ನಡೆಸಿ, ಒಮ್ಮತ ನಿರ್ಣಯಕ್ಕೆ ಬಂದು ರೈತರಿಂದ ಒಪ್ಪಿಗೆ ಪತ್ರಗಳನ್ನು ಸಹ ಪಡೆದಿರುವುದರಿಂದ ಈಗ ಪರಿಹಾರ ಧನ ನೀಡುವಲ್ಲಿ ವ್ಯತ್ಯಯವಾದರೆ ಹುಬ್ಬಳ್ಳಿ ಧಾರವಾಡದಲ್ಲಿ ಸ್ಥಾಪಿಸಲು ಉದ್ದೇಶಿಸಿರುವ ಐಟಿ–ಬಿಟಿ ಯೋಜನೆಗೆ ಮತ್ತು ಇತರೆ ಕೈಗಾರಿಕಾ ಅಭಿವೃದ್ಧಿಗೆ ಸ್ಥಳ ಒದಗಿಸಲು ಸಾಧ್ಯವಾಗುವುದಿಲ್ಲ,. ಇದರ ಸುತ್ತಮುತ್ತಲಿನ ಪ್ರದೇಶಗಳಲ್ಲಿನ ಆಸ್ತಿ ಬೆಲೆಯು ಈಗಾಗಲೇ ಸುಮಾರು 3 ಪಟ್ಟು ಹೆಚ್ಚಾಗಿರುವುದರಿಂದ ಇನ್ನು ವಿಳಂಬವಾದರೆ ಸರ್ಕಾರಕ್ಕೆ ಹೆಚ್ಚಿನ ಭಾರವಾಗಬಾರದು ಎಂಬ ಉದ್ದೇಶದಿಂದ ಹಾಗೂ ಹೊಸ ಭೂಸ್ವಾಧಿನ ಪ್ರಕ್ರಿಯೆಯಲ್ಲಿ ಪರಿಹಾರ ಧನ ನಿಗದಿಯಾಗುವ ಮೊದಲು ಈ ಹಿಂದಿನ ಭೂಸ್ವಾಧೀನ ಪ್ರಕ್ರಿಯೆ ಪೂರ್ಣಗೊಳಿಸುವುದು ಸರ್ಕಾರದ ದೃಷ್ಟಿಯಿಂದ ಹೆಚ್ಚು ಆರೋಗ್ಯಕರ ಬೆಳವಣಿಗೆಯಾಗುತ್ತದೆ.

9. ಈ ಹಿನ್ನಲೆಯಲ್ಲಿ ಕೆ.ಐ.ಎ.ಡಿ.ಬಿ.ಯಿಂದ ಸ್ವಾಧೀನವಾಗಿರುವ ಧಾರವಾಡ ಜಿಲ್ಲೆ, ಹುಬ್ಬಳ್ಳಿ ತಾಲ್ಲೂಕು, ಗಾಮನಗಟ್ಟಿ ಗ್ರಾಮದ ಬ್ಲಾಕ್ ನಂ/ 208ರ 278 ಎಕರೆ 20 ಗುಂಟೆ ಇನಾಂ ಜಮೀನಿನ ಭೂ ಮಾಲೀಕರಿಗೆ ದಯಾತ್ಮಕ ಪರಿಹಾರವಾಗಿ ನೀಡುವ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಐ 246 ಎಸ್‌ಪಿಕ್ಯೂ 2007, ಬೆಂಗಳೂರು, ದಿನಾಂಕ:2ನೇ ಮಾರ್ಚ್ 2009**

**(1)** ಹುಬ್ಬಳ್ಳಿ–ಧಾರವಾಡದಲ್ಲಿ ಕೈಗಾರಿಕಾಭಿವೃದ್ಧಿ ದೃಷ್ಟಿಯಿಂದ ಹುಬ್ಬಳ್ಳಿ ತಾಲ್ಲೂಕು ಗಾಮನಗಟ್ಟಿ ಗ್ರಾಮದಲ್ಲಿ ಭೂಸ್ವಾಧೀನ ಪಡಿಸಿಕೊಂಡ ಖಾಸಗೀ ಜಮೀನಿನ ಮಾಲೀಕರಿಗೆ ಪ್ರತಿ ಎಕರೆಗೆ ರೂ, 13,36,000/–ರಂತೆ ಪಾವತಿ ಮಾಡಲಾಗುತ್ತಿದ್ದು, ಸದರಿ ಗ್ರಾಮದ ಬ್ಲಾಕ್ ನಂ: 208ರಲ್ಲಿನ ಕ್ಷೇತ್ರ 278 ಎಕರೆ 20 ಗುಂಟೆ ಇನಾಂ ಜಮೀನಿನಲ್ಲಿ ಅನಾದಿ ಕಾಲದಿಂದಲೂ ಪ್ರತ್ಯೇಕವಾಗಿ ಸಾಗುವಳಿ ಮಾಡುತ್ತಿರುವ ಒಟ್ಟು 21 ರೈತ ಕುಟುಂಬದವರಿಗೆ ಖಾಸಗಿ ಜಮೀನು ಮಾಲೀಕರಿಗೆ ಪ್ರತಿ ಎಕರೆಗೆ ನೀಡಿದ ಈ ಪರಿಹಾರ ಧನದಲ್ಲಿನ ಮೊತ್ತದಲ್ಲಿ ಶೇಕಡಾ 75ರಷ್ಟು ಅಂದರೆ ಪ್ರತಿ ಎಕರೆಗೆ ರೂ. 10,02,000/–ಗಳನ್ನು ಸದರಿ ರೈತರುಗಳು ಮಾನ್ಯ ನ್ಯಾಯಾಲಯಗಳಲ್ಲಿ ದಾಖಲಿಸಿರುವ ವ್ಯಾಜ್ಯಗಳನ್ನು ಹಿಂಪಡೆದು, ತಮ್ಮ ಹಕ್ಕುಗಳನ್ನು ಬಿಟ್ಟುಕೊಟ್ಟನಂತರ ಪಾವತಿಸಲು ಹಾಗೂ ಕೆ.ಐ.ಎ.ಡಿ.ಬಿ.ಯು ರೈತರು ಮತ್ತು ಸರ್ಕಾರದ ಮಧ್ಯೆ ಇರುವ ಎಲ್ಲ ವ್ಯಾಜ್ಯಗಳನ್ನು ಅಂತ್ಯಗೊಳಿಸಿ, ಆಸ್ತಿಯನ್ನು ಕಬ್ಜೆಗೆ ಪಡೆಯುವುದು.

(2) ಮಾರುಕಟ್ಟೆ ಬೆಲೆಯ ರೂ 13,36,000/–(ಖಾಸಗಿ ಜಮೀನಿಗೆ ಪ್ರತಿ ಎಕರೆಗೆ ನೀಡಿದ ದರ) ಗಳಲ್ಲಿ ಉಳಿದ ಶೇಕಡಾ 25% ರಷ್ಟು ಮೊತ್ತವನ್ನು ಕಂದಾಯ ಇಲಾಖೆಯು ಪಾವತಿಸಿಕೊಂಡು ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ಬಾಕಿಯಿರುವ ಸ್ಪೆಷಲ್ ಲೀವ್ ಪಿಟಿಷನ್ ಸಂಖ್ಯೆ 5624/2007ನ್ನು ವಾಪಸ್ಸು ಪಡೆಯಲು ಕ್ರಮ ತೆಗೆದುಕೊಳ್ಳತಕ್ಕದ್ದು.

ಈ ಆದೇಶವು ಈ ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಒಡಂಬಡಿಕೆ ಪತ್ರ ಬರೆದು ಕೊಟ್ಟಿರುವ 21 ಕುಟುಂಬಗಳಿಗೆ ಮಾತ್ರ ಅನ್ವಯಿಸಲ್ಪಟ್ಟಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.756

**ಕೆ.ಎಂ. ವೀರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ.), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ಕಂದಾಯ ಸಚಿವಾಲಯ**

**ವಿಷಯ:** ಬೆಳಗಾವಿ ಜಿಲ್ಲೆಯ ಖಾನಾಪುರ, ಬೆಳಗಾವಿ ಮತ್ತು ಹುಕ್ಕೇರಿ 3 ತಾಲ್ಲೂಕುಗಳ ಮರು ಭೂಮಾಪನ ಕಾರ್ಯಕ್ಕೆ ಮಂಜೂರಾತಿ ಬಗ್ಗೆ.

**ಓದಲಾಗಿದೆ :** 1 ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ ರವರ ಪತ್ರ ಸಂಖ್ಯೆ:ತಾಂ. ರೀಸರ್ವೆ 1/08–09 ದಿನಾಂಕ:27.11.2008 ಮತ್ತು ಏಕ ಕಡತ ಪದ್ಧತಿಯಲ್ಲಿ ಸಲ್ಲಿಸಲಾದ ಪ್ರಸ್ತಾವನೆ ಸಂಖ್ಯೆ ತಾಂ. ನಮಾ ಬೆಳ, ರೀಸರ್ವೆ 1/08–09

2 ಸರ್ಕಾರದ ಆದೇಶ ಸಂ.ಕಂ.ಇ 197 ಭೂದಾಸ 2007 ಬೆಂಗಳೂರು, ದಿನಾಂಕ:4.2.2009.

**ಪ್ರಸ್ತಾವನೆ:**

ಮೇಲೆ (1)–ರಲ್ಲಿ ಓದಲಾದ ದಿನಾಂಕ:27.11.2008ರ ಪತ್ರ ಹಾಗೂ ಏಕಕಡತ ಪದ್ಧತಿಯಲ್ಲಿ ಆಯುಕ್ತರು, ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆ, ಬೆಂಗಳೂರು ರವರು ಸಲ್ಲಿಸಿದ ಪ್ರಸ್ತಾವನೆಯಲ್ಲಿ ಕೇಂದ್ರ ಸರ್ಕಾರವು ಬೆಳಗಾಂ ಜಿಲ್ಲೆಯಲ್ಲಿ ಮರು ಭೂಮಾಪನ ಕಾರ್ಯಕ್ಕೆ Centrally Sponsored Scheme MLRMP ಯೋಜನೆಯಡಿ ಕೇಂದ್ರ ಸರ್ಕಾರದ ಪಾಲಿನ ಹಣ ರೂ.10.35 ಕೋಟಿ ಗಳನ್ನು ಬಿಡುಗಡೆ ಮಾಡಿದ್ದು, ಸದರಿ ಹಣದಲ್ಲಿ ಮರು ಭೂಮಾಪನ ಕಾರ್ಯದಡಿ

1) ಗ್ರಾಮ ಗಡಿಗಳನ್ನು ಡಿ.ಜಿ.ಪಿ.ಎಸ್ ಉಪಕರಣದಿಂದ ನಿರ್ಧರಿಸುವುದು
2) ಹರದಿ/ಗೈರು ವಿಲೆಯಾದ ಟಿಪ್ಪಣಿ/ಪುನರ್ ನಿರ್ಮಾಣ ಮಾಡುವುದು
3) ಭೌಗೋಳಿಕ ಬದಲಾವಣೆಗಳು/ಬದಲಾದ ಖರಾಬು ವಿವರಗಳನ್ನು ದಾಖಲೆಗಳಲ್ಲಿ ಅಳವಡಿಸುವುದು.
4) ಎಲ್ಲಾ ಸರ್ಕಾರಿ ಜಮೀನುಗಳನ್ನು ಅಳತೆ ಮಾಡಿ ದಾಖಲೆಗಳನ್ನು ತಯಾರಿಸುವುದು.
5) ಬಾಕಿ ಇರುವ ಮ್ಯುಟೇಷನ್ ಪ್ರಕರಣಗಳನ್ನು ಅಳತೆ ಮಾಡಿ ದಾಖಲೆಗಳನ್ನು ಇಂಡೀಕರಣಗೊಳಿಸುವುದು.

ಈ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಉದ್ದೇಶಿಸಲಾಗಿದೆ.

ಬೆಳಗಾವಿ ಜಿಲ್ಲೆಯ 3 ತಾಲ್ಲೂಕುಗಳಾದ ಬೆಳಗಾವಿ ಹುಕ್ಕೇರಿ ಖಾನಾಪುರ ಮರು ಭೂಮಾಪನ ಕಾರ್ಯಕ್ಕೆ ಸುಮಾರು ರೂ. 6.75 ಕೋಟಿಗಳ ವೆಚ್ಚವಾಗುವ ಸಂಭವವಿದ್ದು ಸದರಿ ಮೊತ್ತವನ್ನು ಸರ್ಕಾರದ ಆದೇಶ ಸಂಖ್ಯೆ ಕಂಇ 191 ಭೂದಾಸ 2008, ದಿನಾಂಕ:4.9.2008ರಲ್ಲಿ ತಿಳಿಸಲಾದ 10.35 ಕೋಟಿ ರೂ,.ಗಳಿಂದ ಭರಿಸಲು ಹಾಗೂ ಪ್ರಾಥಮಿಕವಾಗಿ ಬೆಳಗಾವಿ ಜಿಲ್ಲೆಯ ಬೆಳಗಾವಿ, ಖಾನಾಪುರ ಮತ್ತು ಹುಕ್ಕೇರಿ ತಾಲ್ಲೂಕುಗಳಲ್ಲಿ ಕೈಗೊಳ್ಳಲಾಗುವ ಮರು ಭೂಮಾಪನ ಕಾರ್ಯದಡಿಯಲ್ಲಿ ಹಳೆ ಮೂಲ ದಾಖಲೆಗಳನ್ನು ಖಾಯಂ ಇಟ್ಟುಕೊಂಡು ಬದಲಾವಣೆಗಳನ್ನು ಇಂಡೀಕರಿಸಲು ಉದ್ದೇಶಿರುವುದರಿಂದ ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ ಅಡಿ ಕಲಂ 106, 109, 112

ಮತ್ತು 152ರ ಪ್ರಕಾರ ಅನುಮತಿ ನೀಡಬೇಕೆಂದು ಕೋರಿದ್ದಾರೆ. ಅಲ್ಲದೆ, ಖರಾಬು ವಿವರಗಳಲ್ಲಿ ಆಗಿರುವ ಬದಲಾವಣೆಗಳನ್ನು ಇಂಡೀಕರಿಸಲು ಕಲಂ 68 ರನ್ವಯ ಕ್ರಮ ಕೈಗೊಳ್ಳಲು ಆದೇಶವನ್ನು ಕೋರಿರುತ್ತಾರೆ.

ಬೆಳಗಾಂ ಜಿಲ್ಲೆ ಮರುಭೂಮಾಪನ ಕಾರ್ಯದ ಅಗತ್ಯತೆಯನ್ನು ಮನಗಂಡ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 29 ಭೂದಾಸ 2009, ಬೆಂಗಳೂರು, ದಿನಾಂಕ:20ನೇ ಫೆಬ್ರವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನಲೆಯಲ್ಲಿ, ಕರ್ನಾಟಕ ಭೂಕಂದಾಯ ಅಧಿನಿಯಮದ 1964ರ ಕಲಂ 106,109,112 ಮತ್ತು 152 ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಬೆಳಗಾವಿ ಜಿಲ್ಲೆಯ 10 ತಾಲ್ಲೂಕುಗಳ ಪೈಕಿ ಬೆಳಗಾವಿ ಹುಕ್ಕೇರಿ ಮತ್ತು ಖಾನಾಪುರ 3 ತಾಲ್ಲೂಕುಗಳಲ್ಲಿ ಮರುಭೂಮಾಪನ ಕಾರ್ಯವನ್ನು ಕೈಗೊಂಡು ಹಳೆ ಮೂಲ ದಾಖಲೆಗಳನ್ನು ಇಂಡೀಕರಿಸಲು ಹಾಗೂ ಸದರಿ ಅವಧಿಯಲ್ಲಿ ಮತ್ತು ಭೂಮಾಪನ ಕಾರ್ಯ ನಡೆಸುವ ಗ್ರಾಮಗಳಲ್ಲಿ ಪ್ರಸ್ತುತ ನಿರ್ವಹಣಾ ಸರ್ವೆ ಕೆಲಸವನ್ನು ತಹಬಂದಿಯಲ್ಲಿಡಲು ಆದೇಶಿಸಲಾಗಿದೆ.

ಖರಾಬು ವಿವರಗಳಲ್ಲಾಗಿರುವ ಬದಲಾವಣೆಗಳನ್ನು ಇಂಡೀಕರಿಸಲು ಕಲಂ 68ರನ್ವಯ ಪ್ರದತ್ತವಾದ ಅಧಿಕಾರವನ್ನು

ಚಲಾಯಿಸಲು ಜಿಲ್ಲಾಧಿಕಾರಿಗಳು, ಬೆಳಗಾವಿ ಜಿಲ್ಲೆರವರಿಗೆ ಆದೇಶ ನೀಡಿದೆ. ಹಾಗೂ ಪ್ರತಿ ಗ್ರಾಮದಲ್ಲಿ ಮರುಭೂಮಾಪನ ಕಾರ್ಯ ಪೂರ್ಣಗೊಂಡ ಕೂಡಲೇ ಮಾಹಿತಿಯನ್ನು ಭೂಮಿ ಕೇಂದ್ರದಲ್ಲಿ ಇಂಡೀಕರಿಸಲು ಜಿಲ್ಲಾಧಿಕಾರಿಗಳಿಗೆ ಸೂಚನೆ ನೀಡಿ ಆದೇಶಿಸಿದೆ.

ಬೆಳಗಾವಿ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ವಿವಿಧ ಇಲಾಖೆಗಳು ಹೊಂದಿರುವ ಭೂಮಿಯ ಹಕ್ಕುದಾರಿಗಳ ಬಗ್ಗೆ ಸಂಬಂಧಪಟ್ಟ ಅಧಿಕಾರಿಗಳು ಅಗತ್ಯ ಮಾಹಿತಿಯನ್ನು ಸಂಬಂಧಪಟ್ಟ ಮರು ಭೂಮಾಪನ ಅಧಿಕಾರಿಗಳಿಗೆ ಒದಗಿಸಿ ಸಹಕರಿಸುವುದು. 3 ತಾಲ್ಲೂಕುಗಳ ಗ್ರಾಮಗಳಲ್ಲಿ ಮರು ಭೂಮಾಪನ ಕಾರ್ಯ ಪೂರ್ಣಗೊಂಡ ನಂತರ ಅಳತೆ ಮುಗಿದ ಬಗ್ಗೆ ಮತ್ತು ಹೊಸ ದಾಖಲೆಗಳು ಜಾರಿಗೆ ಬರುವ ಬಗ್ಗೆ ಸರ್ಕಾರದ ಪರವಾಗಿ ಘೋಷಣೆ ಮಾಡಲು ಹಾಗೂ ರೀಸರ್ವೆ ಕಾರ್ಯ ಪೂರ್ಣಗೊಂಡ ನಂತರ ತಹಬಂಧಿಯಲ್ಲಿಟ್ಟ ನಿರ್ವಹಣಾ ಕಾರ್ಯಕ್ಕೆ ಪುನರ್ ಚಾಲನೆ ನೀಡಲು ಭೂದಾಖಲೆಗಳ ಜಂಟಿ ನಿರ್ದೇಶಕರು, ರೀಸರ್ವೆ ರವರಿಗೆ ಅಧಿಕಾರ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.757

**ಎಸ್.ಬಿ.ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಾಪನ)

**ವಿಷಯ:** 2005ನೇ ತಂಡದ ಪರಿವೀಕ್ಷಣಾ ತಹಶೀಲ್ದಾರರುಗಳು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ** 1 ಸರ್ಕಾರದ ಅಧಿಸೂಚನೆ ಸಂ:ಕಂಇ 110 ಎಎಸ್‌ಡಿ 2006, ದಿನಾಂಕ:22.6.2006

2 ಸರ್ಕಾರದ ಅಧಿಕೃತ ಜ್ಞಾಪನ ಸಂ:ಆರ್‌ಡಿ 135 ಎಎಸ್‌ಡಿ 2006, ದಿನಾಂಕ:25.8.2006.

3 ಸರ್ಕಾರದ ಪತ್ರ ಸಂ:ಕಂಇ 292 ಎಎಸ್‌ಡಿ 2008, ದಿನಾಂಕ:24.7.2008

4 ಸರ್ಕಾರದ ಆದೇಶ ಸಂ:ಆರ್‌ಡಿ 292 ಎಎಸ್‌ಡಿ 2008, ದಿನಾಂಕ:19.11.2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1) ದಿನಾಂಕ: 22.6.2006ರ ಸರ್ಕಾರಿ ಅಧಿಸೂಚನೆಯಲ್ಲಿ ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ಧಾತ್ಮಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1997ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಗೊಂಡ ಒಟ್ಟು 40 ಅಭ್ಯರ್ಥಿಗಳನ್ನು ಪರಿವೀಕ್ಷಣಾ ತಹಶೀಲ್ದಾರ್ ಗುಂಪು–ಬಿ ಹುದ್ದೆಗೆ ನೇಮಕಾತಿ ಆದೇಶ ನೀಡಲಾಗಿತ್ತು. ಸದರಿ ಅಧಿಸೂಚನೆಯಲ್ಲಿ ಒಟ್ಟು 40 ಪರಿವೀಕ್ಷಣಾ ತಹಶೀಲ್ದಾರರುಗಳನ್ನು 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯ ಮೇಲೆ ಇರುತ್ತಾರೆಂದು ಮತ್ತು ಈ ಅವಧಿಯಲ್ಲಿ ಕನ್ನಡ ಭಾಷಾ ಪರೀಕ್ಷೆ ಮತ್ತು ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕೆಂದು ತಿಳಿಸಲಾಗಿತ್ತು. ನೇಮಕಗೊಂಡ ಎಲ್ಲಾ 40 ಪರಿವೀಕ್ಷಣಾ ತಹಶೀಲ್ದಾರರುಗಳು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ ಓದಲಾದ ಕ್ರ.ಸಂ (2) ದಿನಾಂಕ:25.8.2006ರಲ್ಲಿ ಎಲ್ಲಾ ಪರಿವೀಕ್ಷಣಾ ತಹಶೀಲ್ದಾರರುಗಳಿಗೆ ಎರಡು ವರ್ಷಗಳ ತರಬೇತಿಗಾಗಿ ವಿವಿಧ ಜಿಲ್ಲೆಗಳಿಗೆ ತೈನಾತಿಸಲಾಗಿತ್ತು. ಅದರಂತೆ, ಇವರುಗಳಲ್ಲಿ ವಿವಿಧ ಕಾರಣಗಳಿಂದ/ಬೇರೆ ಹುದ್ದೆಗೆ ನೇಮಕಗೊಂಡಿದ್ದರಿಂದ ಒಟ್ಟು 6 ಪರಿವೀಕ್ಷಣಾ ತಹಶೀಲ್ದಾರರುಗಳು (ಶ್ರೀ ಹೆಚ್.ಡಿ. ಲೋಕೇಶ್, ಕು:ರೂಪಾ ಐ.ಪಿ ಶ್ರೀ ಶಶಿಕುಮಾರ್ ಎನ್. ಶ್ರೀ ಹರ್ಷ ಎಸ್ .ಶೆಟ್ಟಿ, ಶ್ರೀ ನವೀನ್‌ಕುಮಾರ್ ರಾಜು, ಎಸ್., ಶ್ರೀ ನಿರಂಜನ್. ಸಿ.ಸಿ) ಸೇವೆಯಿಂದ ಬಿಟ್ಟುಹೋಗಿರುತ್ತಾರೆ. ಇನ್ನುಳಿದ 34 ಪರಿವೀಕ್ಷಣಾ ತಹಶೀಲ್ದಾರರುಗಳ ನಿಗದಿತ ಇಲಾಖಾ ಪರೀಕ್ಷೆಗಳನ್ನು ಉತ್ತೀರ್ಣರಾಗಿರುವ ಬಗ್ಗೆ. ಜಿಲ್ಲಾ ತರಬೇತಿಯಲ್ಲಿದ್ದಾಗ.ತರಬೇತಿಯನ್ನು ತೃಪ್ತಿಕರವಾಗಿ ಪೂರೈಸಿರುವ ಬಗ್ಗೆ ಹಾಗೂ ಇವರುಗಳ ವಿರುದ್ಧ ಇಲಾಖಾ ವಿಚಾರಣೆಗಳ ಬಗ್ಗೆ ಮಾಹಿತಿಯನ್ನು ಮೇಲೆ ಓದಲಾದ ಕ್ರ.ಸಂ. (3)ರ ದಿನಾಂಕ:24.7.2008ರಲ್ಲಿ ಎಲ್ಲಾ ಜಿಲ್ಲಾಧಿಕಾರಿಗಳಿಂದ ಪಡೆಯಲು ಪತ್ರ ಬರೆಯಲಾಗಿತ್ತು. ಅದರಂತೆ, ಜಿಲ್ಲಾಧಿಕಾರಿಗಳು ತಮ್ಮ ವ್ಯಾಪ್ತಿಯಲ್ಲಿ ಇದ್ದ ಪರಿವೀಕ್ಷಣಾ ತಹಶೀಲ್ದಾರರುಗಳ ಬಗ್ಗೆ ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ (ಕನ್ನಡ ಭಾಷಾ ವಿನಾಯಿತಿ ಸೇರಿ) ಉತ್ತೀರ್ಣರಾಗಿರುವುದಾಗಿ ಹಾಗೂ ಪರಿವೀಕ್ಷಣಾ ತಹಶೀಲ್ದಾರರುಗಳು ತೃಪ್ತಿಕರವಾಗಿ ಪರಿವೀಕ್ಷಣಾ ಅವಧಿಯನ್ನು ಕಾರ್ಯ ನಿರ್ವಹಿಸುತ್ತಿರುತ್ತಾರೆ ಎಂದು ಶೀಫಾರಸ್ಸು ಮಾಡಿರುವುದರಿಂದ ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1)ರನ್ವಯ ಮೇಲೆ ಓದಲಾದ ಕ್ರ.ಸಂ (4)ರ ದಿನಾಂಕ:19.11.2008ರಲ್ಲಿ 15 ಪರಿವೀಕ್ಷಣಾ ತಹಶೀಲ್ದಾರರುಗಳ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ ಆದೇಶಿಸಲಾಗಿರುತ್ತದೆ. ಮುಂದುವರೆದು, ಜಿಲ್ಲಾಧಿಕಾರಿಗಳಿಂದ ಬಂದ ವರದಿಯ ಆಧಾರದ ಮೇಲೆ ಹಾಗೂ ಸಂಬಂಧಪಟ್ಟ ಇಲಾಖಾ ಪರೀಕ್ಷೆಗಳನ್ನು (ಕನ್ನಡ ಭಾಷಾ ವಿನಾಯಿತಿ ಸೇರಿ) ಉತ್ತೀರ್ಣರಾಗಿರುವ

ಬಗ್ಗೆ ಹಾಗೂ ಇವರುಗಳ ಬಗ್ಗೆ ಯಾವುದೇ ಇಲಾಖಾ ವಿಚಾರಣೆ ಬಾಕಿಯಿಲ್ಲವೆಂದು ಜಿಲ್ಲಾಧಿಕಾರಿಗಳು ವರದಿ ಮಾಡಿರುವ ಹಿನ್ನೆಲೆಯಲ್ಲಿ, ಈ ಕೆಳಕಂಡ 13 ಪರಿವೀಕ್ಷಣಾ ತಹಶೀಲ್ದಾರರುಗಳನ್ನು ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1)ರನ್ವಯ ತೃಪ್ತಿಕರವಾಗಿ ಪರಿವೀಕ್ಷಣಾ ಅವಧಿಯನ್ನು ಪೂರೈಸಿರುತ್ತಾರೆಂದು ಘೋಷಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ:ಆರ್ ಡಿ 292 ಎಎಸ್‌ಡಿ 2008, ಬೆಂಗಳೂರು, ದಿನಾಂಕ:19ನೇಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಈ ಕೆಳಕಂಡ 13 ಪರಿವೀಕ್ಷಣಾ ತಹಶೀಲ್ದಾರರುಗಳನ್ನು ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1)ರಡಿ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ ಆದೇಶಿಸಿದೆ.

ಉಳಿದ ಪರಿವೀಕ್ಷಣಾ ತಹಶೀಲ್ದಾರರುಗಳ ಬಗ್ಗೆ ಜಿಲ್ಲಾಧಿಕಾರಿಗಳಿಂದ ಮಾಹಿತಿ ಪಡೆದು ನಂತರದಲ್ಲಿ ಆದೇಶ ಹೊರಡಿಸಲಾಗುವುದು.

| ಕ್ರ.ಸಂ | ಪರಿವೀಕ್ಷಣಾ ತಹಶೀಲ್ದಾರರ ಹೆಸರು– ಶ್ರೀ/ಶ್ರೀಮತಿ | ಪರಿವೀಕ್ಷಣಾ ಅವಧಿ ಪ್ರಾರಂಭವಾದ ದಿನಾಂಕ | ಪರಿವೀಕ್ಷಣಾ ಅವಧಿ ಮುಕ್ತಾಯವಾದ ದಿನಾಂಕ: |
|---|---|---|---|
| 1 | ಸಿದ್ದಪ್ಪ ಹುಲ್ಲೋಳಿ | 28/6/2006 | 27.6.2008 |
| 2 | ನಟೇಶ ಡಿ.ಬಿ | 23.6.2006 | 22.6.2008 |
| 3 | ರವೀಂದ್ರ ಕರಲಿಂಗಣ್ಣವರ್ | 24.6.2006 | 23.6.2008 |
| 4 | ಭಾರತಿ ಹೊಳ್ಳಿಕೇರಿ | 23.6.2006 | 22.6.2008 |
| 5 | ಸವಿತಾ ಎಂ.ಕೆ. | 30.6.2006 | 29.6.2008 |
| 6 | ರಾಜೇಶ್ ಎಂ.ಆರ್. | 23.6.2006 | 22.6.2008 |
| 7 | ವೀಣಾ ಬಿ.ಎನ್. | 24.6.2006 | 23.6.2008 |
| 8 | ರಂಗಸ್ವಾಮಿ ಆರ್. | 3.7.2006 | 2.7.2008 |
| 9 | ಅರುಳ್‌ಕುಮಾರ್ | 26.6.2006 | 25.6.2008 |
| 10 | ವೆಂಕಟರಾಜು ಎನ್.ಸಿ | 3.7.2006 | 2.7.2008 |
| 11 | ಶಿವೇಗೌಡ ಹೆಚ್.ಎನ್ | 1.7.2006 | 30.6.2008 |
| 12 | ಪ್ರವೀಣ್ ಕೆ.ಎನ್. | 7.7.2006 | 6.7.2008 |
| 13 | ಮಲ್ಲಿಕಾರ್ಜುನ್ ಬಿ. | 10.7.2006 | 9.7.2008 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 469

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಶ್ರೀ ಕೆ. ರಾಮೇಗೌಡ, ನೋಟರಿ, ಬೆಂಗಳೂರು ಇವರ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ತೆಗೆದು ಹಾಕುವ ಬಗ್ಗೆ.

**ಓದಲಾಗಿದೆ :**
1 ರೀಜನಲ್ ಪಾಸ್‌ಪೋರ್ಟ್ ಆಫೀಸರ್, ಬೆಂಗಳೂರು ಇವರ ಪತ್ರ ಸಂಖ್ಯೆ 26:ಪಿಓಎಲ್:3255/1998 ದಿನಾಂಕ30.9.2008
2 ಶ್ರೀ ಕೆ. ರಾಮೇಗೌಡ, ನೋಟರಿ ಬೆಂಗಳೂರು ನಗರ ಇವರಿಗೆ ನೀಡಲಾದ ನೋಟೀಸ್ ಸಂಖ್ಯೆ ಲಾ128 ಎಸ್ ಸಿಎಲ್ 08, ದಿನಾಂಕ:28.10.2008
3 ಶ್ರೀ ಕೆ. ರಾಮೇಗೌಡ ನೋಟರಿ, ಬೆಂಗಳೂರು ನಗರ ಇವರ ದಿನಾಂಕ:17.11.2008ರ ಲಿಖಿತ ಹೇಳಿಕೆ ಪತ್ರ.

**ಪ್ರಸ್ತಾವನೆ:**

ಮೇಲೆ. (1) ರಲ್ಲಿ ಓದಲಾದ ದಿನಾಂಕ:30.9.,2008ರ ಪತ್ರದಲ್ಲಿ ರೀಜನಲ್ ಪಾಸ್‌ಪೋರ್ಟ್ ಆಫೀಸರ್, ಬೆಂಗಳೂರು ಇವರು ಶ್ರೀ ಕೆ. ರಾಮೇಗೌಡ ನೋಟರಿ, ಬೆಂಗಳೂರು ನಗರ ರವರು ಅರ್ಜಿದಾರರ ಸಹಿ ಇಲ್ಲದೆ ಅಫಿಡವಿಟನ್ನು ಶಪಥೀಕರಿಸಿರುವ ಪಾಸ್‌ಪೋರ್ಟ್ ಮನವಿದಾರರ ಮನವಿಯ ಪ್ರತಿಯನ್ನು ಕಳುಹಿಸಿ, ಸದರಿ ನೋಟರಿಯವರು ಅರ್ಜಿದಾರರ ಸಹಿ ಇಲ್ಲದೆ ಹೇಗೆ ದಾಖಲೆಗೆ ಪ್ರಮಾಣೀಕರಿಸಿರುವರೆಂಬುದನ್ನು ಪರಿಶೀಲಿಸಿ, ಶ್ರೀಯುತರ ವಿರುದ್ಧ ನಿಯಮಾನುಸಾರ ಕ್ರಮ ಕೈಗೊಳ್ಳುವಂತೆ ಕೋರಿರುತ್ತಾರೆ.

ಆ ಬಗ್ಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ:28.10.2008ರಂದು ಶ್ರೀಯುತರಿಗೆ ನೋಟೀಸ್ ಜಾರಿ ಮಾಡಿ, ವಿಷಯದ ಬಗ್ಗೆ ಲಿಖಿತ ಹೇಳಿಕೆಯನ್ನು 15 ದಿನಗಳೊಳಗಾಗಿ ಸಲ್ಲಿಸುವಂತೆ ಕೋರಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ದಿನಾಂಕ:17.11.2008ರ ಪತ್ರದಲ್ಲಿ ಶ್ರೀ ಕೆ. ರಾಮೇಗೌಡ, ನೋಟರಿ, ಬೆಂಗಳೂರು ನಗರ ಇವರು ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಅದರಲ್ಲಿ ತಮಗೆ ಹುಷಾರಿಲ್ಲದ ಕಾರಣ ಹಾಗೂ ಬೇರೆ ಕಾರಣದ ಜೊತೆಗೆ ಈ ಪ್ರಮಾಣ ಪತ್ರ ಇಟ್ಟಿದೆ ಎಂದು, ಅದರಲ್ಲಿ ಪ್ರಮಾಣೀಕರಿಸುವವರ ರುಜು ಇಲ್ಲದಿರುವುದನ್ನು ಗಮನಿಸಿರಲಿಲ್ಲವೆಂದು ಮತ್ತು ಇದು ಈ ರೀತಿ ಆಗಿರುವುದು ಉದ್ದೇಶಪೂರ್ವಕವಾಗಿಲ್ಲವೆಂದು. ಹೇಳಿರುತ್ತಾರೆ ಅದು ಅಲ್ಲದೇ ಉಲ್ಲೇಖಿತ (3)ರ ಮನವಿಯ ಕಂಡಿಕೆ 8ರಲ್ಲಿ ಈ ರೀತಿ ಹೇಳಿರುತ್ತಾರೆ.

''I have not committed any mistake all these years, and above mistake has occurred without my knowlwdge, due to my ill health during the period''

ಅದೇ ರೀತಿ ಮನವಿಯ ಕಂಡಿಕೆ 9ರಲ್ಲಿ ಈ ರೀತಿ ಹೇಳಿರುತ್ತಾರೆ.

''I am making the above submission sincerely and honestly as a respincible senir citizen and there is no falsehood and I may be pardoned I will be more cautious and will take all precautions to avoid any such mistakes in future''

ಈ ರೀತಿ ಪ್ರಮಾಣಿಕರಿಸುವುದು ಬೇರೆ ದಾಖಲೆಗೆ ಆಗಿದ್ದಲ್ಲಿ ಆ ವಿಷಯ ಬೇರೆಯೇ ಆಗುತ್ತಿತ್ತು. ಪಾಸ್‌ಪೋರ್ಟ್ ತೆಗೆದುಕೊಳ್ಳುವುದು ಈ ರೀತಿ ಪ್ರಮಾಣಿಕರಿಸುವವರ ರುಜು ಇಲ್ಲದೇ ಪ್ರಮಾಣಿಕರಿಸಿರುವುದಾಗಿ ಧೃಢೀಕರಿಸಿರುವುದನ್ನು ನೋಡಿದರೆ, ಬಹಳ ಘೋರ ತಪ್ಪೆಂದು ತಿಳಿಯಬೇಕಾಗುತ್ತದೆ. ಇತ್ತೀಚಿನ ದಿನಗಳಲ್ಲಿ ಇಂತಹ ಪಾಸ್‌ಪೋರ್ಟ್ ಪಡೆಯುವುದರ ಬಗ್ಗೆ ಬಹಳಷ್ಟು ನಕಲು ಪಾಸ್‌ಪೋರ್ಟ್‌ನ್ನು ಪಡೆಯಲು ಅನುಕೂಲ ಮಾಡಿಕೊಟ್ಟಂತಾಗುತ್ತದೆ ಮತ್ತು ಇಂತಹ ತಪ್ಪನ್ನು ಮನ್ನಿಸುವುದು ಸೂಕ್ತವಲ್ಲ, ಇಂತಹವರನ್ನು ಸೇವೆಯಿಂದ ತೆಗೆಯುವುದು ಸೂಕ್ತ ಮತ್ತು ನ್ಯಾಯಯುತಕರವಾಗಿರುವುದೆಂದು ಸರ್ಕಾರ ಪರಿಗಣಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂ:ಲಾ 128 ಎಲ್‌ಸಿಎಲ್ 2008, ಬೆಂಗಳೂರು, ದಿನಾಂಕ:29 ಜನವರಿ 2009**

ಪ್ರಸ್ತಾವನೆಯಲ್ಲಿ ಉಲ್ಲೇಖಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಕೆ. ರಾಮೇಗೌಡ, ನೋಟರಿ, ಬೆಂಗಳೂರು ನಗರ ಇವರನ್ನು ನೋಟರಿ ಕರ್ತವ್ಯದಿಂದ ವಿಮುಕ್ತಿಗೊಳಿಸಿದೆ ಮತ್ತು ಶ್ರೀಯುತರ ಹೆಸರನ್ನು ನೋಟರಿ ನಿಯಮ 13(12)(b)(i) ರೀತ್ಯ ನೋಟರಿ ರಿಜಿಸ್ಟರ್‌ನಿಂದ ಶಾಶ್ವತವಾಗಿ ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಹೆಚ್.ಆರ್. ಶಕುಂತಲ**

ಪಿ.ಆರ್. 551 ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2), ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಶಿಕ್ಷಣ ಸಚಿವಾಲಯ

**ವಿಷಯ:** 2008–09ನೇ ಸಾಲಿಗೆ ರಾಜ್ಯದ ನಗರ ಪ್ರದೇಶದ ಸರ್ಕಾರಿ ಪ್ರೌಢ ಶಾಲೆಗಳಿಗೆ ಶಾಲಾ ಕೊಠಡಿಗಳನ್ನು ನಿರ್ಮಿಸಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1 ಸರ್ಕಾರದ ಆದೇಶ ಸಂಖ್ಯೆ ಇಡಿ 78 ಯೋಯೋಕ 2008, ದಿನಾಂಕ:4.4.2008.

2 ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ ಯೋ(7) ಕಟ್ಟಡ ರಹಿತ ಪ್ರೌ.ಅ.ಹಂಚಿಕೆ /2008–09/ದಿನಾಂಕ:29.4.2008.

**ಪ್ರಸ್ತಾವನೆ:**

(1) ಮೇಲೆ. (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರಾಜ್ಯ ವಲಯ ಮುಂದುವರೆದ ಯೋಜನಾ ಕಾರ್ಯಕ್ರಮದ ಅಡಿಯಲ್ಲಿ ನಗರ ಪ್ರದೇಶದ ಕಟ್ಟಡ ರಹಿತ ಸರ್ಕಾರಿ ಪ್ರೌಢಶಾಲೆಗಳಿಗೆ ಶಾಲಾ ಕೊಠಡಿಗಳನ್ನು ನಿರ್ಮಿಸಲು 2008–09ನೇ ಸಾಲಿಗೆ ಲೆಕ್ಕಶೀರ್ಷಿಕೆ :2202–02–800–1–10–059 [ಪ್ರೌಢಶಾಲಾ ಕಟ್ಟಡಗಳ ನಿರ್ಮಾಣ (ನಬಾರ್ಡ್)] ರಡಿ 300.00ಲಕ್ಷ ರೂ.ಗಳನ್ನು ಬಿಡುಗಡೆ ಮಾಡಲಾಗಿದೆ.

(2) ಮೇಲೆ (2)ರಲ್ಲಿ ಓದಲಾದ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಬೆಂಗಳೂರು ರವರ ಪತ್ರದಲ್ಲಿ ನಗರ ಪ್ರದೇಶದ ಕಟ್ಟಡ ರಹಿತ ಸರ್ಕಾರಿ ಪ್ರೌಢಶಾಲೆಗಳಿಗೆ ಶಾಲಾ ಕೊಠಡಿಗಳನ್ನು ನಿರ್ಮಸಲು 2008–09ನೇ ಸಾಲಿಗೆ ಲೆಕ್ಕಶೀರ್ಷಿಕೆ:2202–02–800–1–10–059 [ಪ್ರೌಢಶಾಲಾ ಕಟ್ಟಡಗಳ ನಿರ್ಮಾಣ (ನಬಾರ್ಡ್)] ರಡಿ ಒದಗಿಸಲಾಗಿರುವ 300.00ಲಕ್ಷ ರೂಗಳನ್ನು ಬಿಡುಗಡೆ ಮಾಡುವಂತೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

(3) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ:123:ಯೋಯೋಕ 2008, ಬೆಂಗಳೂರು, ದಿನಾಂಕ:9ನೇ ಫೆಬ್ರವರಿ 2009**

**[ಇಡಿ:16:ಸ್ವೀಮರ (ಯುನಿಕ್) 2009, ದಿನಾಂಕ:9–2–2009]**

(4) ನಗರ ಪ್ರದೇಶದ ಕಟ್ಟಡ ರಹಿತ ಸರ್ಕಾರಿ ಪ್ರೌಢಶಾಲೆಗಳಿಗೆ ಶಾಲಾ ಕೊಠಡಿಗಳನ್ನು ನಿರ್ಮಿಸಲು 2008–09ನೇ ಸಾಲಿಗೆ ಲೆಕ್ಕಶೀರ್ಷಿಕೆ :2202–02–800–1–10–059 [ಪ್ರೌಢಶಾಲಾ ಕಟ್ಟಡಗಳ ನಿರ್ಮಾಣ (ನಬಾರ್ಡ್] ರಡಿ ಒದಗಿಸಲಾಗಿರುವ ಮೊತ್ತದಲ್ಲಿ 260.00 ಲಕ್ಷರೂಗಳನ್ನು [ಇನ್ನೂರ ಅರವತ್ತು ಲಕ್ಷ ರೂಪಾಯಿಗಳು ಮಾತ್ರ] ಈ ಕೆಳಕಂಡ ಪ್ರೌಢಶಾಲೆಗಳಿಗೆ [ಘಟಕ ವೆಚ್ಚ ಪ್ರತಿ ಕೊಠಡಿಗೆ 4.50 ಲಕ್ಷರೂಗಳಂತೆ] ಅವುಗಳ ಮುಂದೆ ತೋರಿಸಿರುವಂತೆ ಅನುದಾನವನ್ನು ಸಂಬಂಧಿಸಿದ ಜಿಲ್ಲಾ ಉಪ ನಿರ್ದೇಶಕರು (ಆಡಳಿತ), ಸಾರ್ವಜನಿಕ ಶಿಕ್ಷಣ ಇಲಾಖೆ ರವರುಗಳಿಗೆ ಹಂಚಿಕೆ ಮಾಡಿ ಬಿಡುಗಡೆ ಮಾಡಲಾಗಿದೆ.

[ರೂ.ಲಕ್ಷಗಳಲ್ಲಿ]

| ಕ್ರ.ಸಂ | ಜಿಲ್ಲೆಯ ಹೆಸರು | ಶಾಲೆಯ ಹೆಸರು | ನಿರ್ಮಿಸಬೇಕಾಗಿರುವ ಕೊಠಡಿ ಸಂಖ್ಯೆ | ಬಿಡುಗಡೆ ಮಾಡುತ್ತಿರುವ ಅನುದಾನ |
|---|---|---|---|---|
| 1 | ಕೊಪ್ಪಳ | ಸ.ಪ್ರೌ ಶಾಲೆ ಬನ್ನೀಕಟ್ಟೀ ಏರಿಯಾ | 05 | 22.50 |
| 2 | ಬೆಳಗಾವಿ | ಸ.ಪ್ರೌ ಶಾಲೆ ವಡಗಾಂವ | 05 | 22.50 |
| 3 | ಬೀದರ್ | ಸ.ಪ್ರೌ ಶಾಲೆ ನೌಬಾದ್ | 06 | 27.00 |
| 4 | ಶಿವಮೊಗ್ಗ | ಸ.ಪ್ರೌ ಶಾಲೆ ದುರ್ಗೀಗುಡಿ [ಕನ್ನಡ] | 04 | 18.00 |
| 5 | ಮೈಸೂರು | ಸ.ಪ್ರೌ ಶಾಲೆ ಕುಂಬಾರ ಕೊಪ್ಪಲು | 04 | 18.00 |
| 6 | ಉತ್ತರ ಕನ್ನಡ | ಸ.ಪ್ರೌ ಶಾಲೆ ಭಟ್ಕಳ ಬಂದರ್ | 04 | 18.00 |
| | | ಸ.ಪ್ರೌ ಶಾಲೆ [ಉರ್ದು], ಸಿರ್ಸಿ ನಗರ | 05 | 22.50 |
| | | ಮಾರಿಕಾಂಬ ಸರ್ಕಾರಿ ಪ.ಪೂ. ಕಾಲೇಜು ಪ್ರೌ.ಶಾ ವಿಭಾಗ, ಶಿರಸಿ | 10 | 48.50 |
| | | ಸ.ಪ್ರೌ. ಶಾಲೆ ಯಲ್ಲಾಪುರ | 03 | 13.50 |
| 7 | ಬೆಂಗಳೂರು ಉತ್ತರ | ಸ.ಪ್ರೌ ಶಾಲೆ ಹೆಗ್ಗನಹಳ್ಳಿ | 05 | 22.50 |
| 8 | ಚಿಕ್ಕಬಳ್ಳಾಪುರ | ಸ.ಪ್ರೌ ಶಾಲೆ ವಾಪಸಂದ್ರ | 04 | 18.00 |
| 9 | ಹಾವೇರಿ | ಸ.ಪ್ರೌ ಶಾಲೆ [ಉರ್ದು[, | 02 | 9.00 |
| | | ಒಟ್ಟು | 57 | 260.00 |

[ಮಾರಿಕಾಂಬ ಸರ್ಕಾರಿ ಪ.ಪೂ ಕಾಲೇಜು ಪ್ರೌ.ಶಾ ವಿಭಾಗ, ಶಿರಸಿ ಇದಕ್ಕೆ ಬಿಡುಗಡೆ ಮಾಡಿರುವ ಮೊತ್ತದಲ್ಲಿ 3.50 ಲಕ್ಷ ರೂ.ಗಳನ್ನು ವಿದ್ಯಾರ್ಥಿಗಳ ಪೀಠೋಪಕರಣಗಳಿಗಾಗಿ ಬಳಸಿಕೊಳ್ಳುವ ಷರತ್ತನ್ನು ವಿಧಿಸಿದೆ].

(6) ಸದರಿ ಅನುದಾನವನ್ನು ಸಂಬಂಧಿಸಿದ ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಗಳ ಬ್ಯಾಂಕ್‌ಗಳ ಖಾತೆಗಳಿಗೆ ಇ.ಸಿ.ಎಸ್ ವಿಧಾನದ ಮೂಲಕ ನೇರವಾಗಿ ಜಿಲ್ಲಾ ಮಟ್ಟದಿಂದ ಈ ಆದೇಶ ತಲುಪಿದ ಐದು ದಿನದೊಳಗಾಗಿ ಜಮಾ ಮಾಡತಕ್ಕದ್ದು.

(7) ಸದರಿ ಅನುದಾನವನ್ನು ಸಂಬಂಧಿಸಿದ ಶಾಲಾಭಿವೃದ್ಧಿ ಮತ್ತು ಮೇಲುಸ್ತವಾರಿ ಸಮಿತಿ/ಶಾಲಾಭಿವೃದ್ಧೀ ಸಮಿತಿ/ಕಾಲೇಜು ಅಭಿವೃದ್ಧಿ ಸಮಿತಿಗಳು ಆದೇಶದಲ್ಲಿ ನಿಗದಿ ಪಡಿಸಿದ ಮೊತ್ತಗಳನ್ನು ಆಯಾ ಉದ್ದೇಶಗಳಿಗೆ ಖರೀದಿ ನಿಯಮಗಳನ್ನು ಪಾಲಿಸಿ ಬಳಕೆ ಮಾಡತಕ್ಕದ್ದು.

(8) ಸಂಬಂಧಿಸಿದ ಜಿಲ್ಲೆಗಳ ಸಾರ್ವಜನಿಕ ಶಿಕ್ಷಣ ಇಲಾಖಾ ಉಪನಿರ್ದೇಶಕರ ಮೇಲು ಸಹಿಯೊಂದಿಗೆ ಪತ್ರಾಂಕಿತ ಸಹಾಯಕರು ಹಣವನ್ನು ಸೆಳೆದು ಶಾಲಾ ಅಭಿವೃದ್ಧಿ ಹಾಗೂ ಮೇಲ್ವಿಚಾರಣಾ ಸಮಿತಿಗಳಿಗೆ ಪೇಯೀಸ್ ರಸೀತಿ ಮೂಲಕ ಬಿಡುಗಡೆ ಮಾಡಲು ಆದೇಶಿಸಿದೆ.

(9) ಪ್ರತಿ ಎಂ.ಎಂ.ಆರ್. ಸಭೆಯಲ್ಲಿ ಪ್ರಗತಿ ವರದಿಯನ್ನು ಸಲ್ಲಿಸತಕ್ಕದ್ದು

10) ಈ ಆದೇಶವನ್ನು ಯೋಜನಾ ಇಲಾಖೆ ಮತ್ತು ಆರ್ಥಿಕ ಇಲಾಖೆಗಳು ಕ್ರಮವಾಗಿ ತಮ್ಮ ಅನಧಿಕೃತ ಟಿಪ್ಪಣಿ ಸಂಖ್ಯೆ ಯೋಇ 22 ಜಶ /2008, ದಿನಾಂಕ:29.3.2008 ಹಾಗೂ ಆ.ಇ. /376/ವೆಚ್ಚ–8/2008, ದಿನಾಂಕ:4.4.2008ರಲ್ಲಿ ನೀಡಿರುವ ಸಹಮತಿ ಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ.ಎಫ್. ಮಾಗಿ**

ಪಿ.ಆರ್. 538 ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ, ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಯೋಜನೆ)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** 2008–09ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯ ರಾಜ್ಯದ ಪಾಲಿನ ಎರಡನೇ ಕಂತಿನ ಅನುದಾನವನ್ನು ರಾಜ್ಯದ 7 ಜಿಲ್ಲಾ ಪಂಚಾಯಿತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ..

**ಓದಲಾಗಿದೆ** 1 ಕೇಂದ್ರ ಸರ್ಕಾರದ ಪತ್ರ ಸಂಖ್ಯೆ:ಆರ್–20015:28:2007–ಡಿಆರ್‌ಡಿಎ (ಎಸ್‌ಆರ್‌ನಂ 10) ದಿನಾಂಕ:3.4.2008, (ಎಸ್‌ಆರ್‌ನಂ. 40) ದಿನಾಂಕ:28.5.08.(ಎಸ್‌ಎಲ್82) ದಿನಾಂಕ:3.11.2008 ಮತ್ತು (ಎಸ್ ನಂ. 90) ದಿನಾಂಕ:14.11.2008.

2 ಸರ್ಕಾರದ ಆದೇಶ ಸಂ.ಗ್ರಾಅಪ 7 ಎಸ್‌ಜೆವೈ (ಡಿಆರ್‌ಡಿಎ) 2008 ಬೆಂಗಳೂರು ದಿನಾಂಕ:23.5.2008, 26.6.2008 ಮತ್ತು 18.12.2008.

3 ಕೇಂದ್ರ ಸರ್ಕಾರದ ಪತ್ರ ಸಂಖ್ಯೆ:ಆರ್ 17014/10/2008–09 ಡಿಆರ್‌ಡಿಎ (ಎಸ್‌ಎಲ್ ನಂ.108) ದಿನಾಂಕ:11.12.08 ಮತ್ತು (ಎಸ್‌ಎಲ್‌ನಂ. 141) ದಿನಾಂಕ:9.1.09

**ಪ್ರಸ್ತಾವನೆ:**

2008–09ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯಡಿ ಕೇಂದ್ರ ಸರ್ಕಾರ ಓದಲಾಗಿದೆ (1) ರ ಪತ್ರಗಳ ದಿನಾಂಕ:3.4.2008 ಹಾಗೂ 28.5.2008ರಲ್ಲಿ ರಾಜ್ಯದ 29 ಜಿಲ್ಲಾ ಪಂಚಾಯಿತಿಗಳಿಗೆ ಒಂದನೇ ಕಂತಿನ ಅನುದಾನವಾಗಿ ರೂ, 5,38,77,000ಗಳನ್ನು ಬಿಡುಗಡೆ ಮಾಡಿವೆ. ಇದಕ್ಕನುಗುಣವಾಗಿ ರಾಜ್ಯ ಸರ್ಕಾರ ಓದಲಾಗಿದೆ (2)ರ ಆದೇಶಗಳ ಸಮಸಂಖ್ಯೆ ದಿನಾಂಕ:23.5.2008 ಮತ್ತು 26.6.2008ರಲ್ಲಿ ರೂ, 1,79,57,000ಗಳನ್ನು ಬಿಡುಗಡೆ ಮಾಡಿವೆ. ಓದಲಾಗಿದೆ (1) ರ ಪತ್ರಗಳ ದಿನಾಂಕ:3.11.2008 ಹಾಗೂ 14.11.2008ರಲ್ಲಿ ರಾಜ್ಯದ 11 ಜಿಲ್ಲಾ ಪಂಚಾಯಿತಿಗಳಿಗೆ ಎರಡನೇ ಕಂತಿನ ಅನುದಾನವಾಗಿ ರೂ. 2,69,83,000ಗಳನ್ನ ಬಿಡುಗಡೆ ಮಾಡಿದೆ. ರಾಜ್ಯ ಸರ್ಕಾರ ಓದಲಾಗಿದೆ (2)ರ ಆದೇಶ ಸಮಸಂಖ್ಯೆ ದಿನಾಂಕ:11.12.2008ರಲ್ಲಿ ರಾಜ್ಯದ ಆಯವ್ಯಯದಲ್ಲಿ ಜಿಲ್ಲೆಗಳಿಗೆ ಲಭ್ಯವಿರುವ ಅನುದಾನದ ಆಧಾರದ ಮೇಲೆ ರೂ. 89,27,000ಗಳನ್ನು ಬಿಡುಗಡೆ ಮಾಡಿದೆ. ಈಗ ಕೇಂದ್ರ ಸಕಾರವು ಎರಡನೇ ಕಂತಿನ ಅನುದಾನವಾಗಿ, ಓದಲಾಗಿದೆ., (3)ಆದೇಶಗಳಲ್ಲಿ ರೂ. 1,35,35,000 ಅನುದಾನವನ್ನು ರಾಜ್ಯದ ಬೆಂಗಳೂರು ನಗರ, ಬೆಳಗಾಂ, ದಕ್ಷಿಣ ಕನ್ನಡ, ಗುಲ್ಬರ್ಗಾ, ಕೊಪ್ಪಳ ಶಿವಮೊಗ್ಗ ಮತ್ತು ತುಮಕೂರು ಜಿಲ್ಲಾ ಪಂಚಾಯಿತಿಗಳಿಗೆ ಬಿಡುಗಡೆ ಮಾಡಿದೆ. ಇದಕ್ಕನುಗುಣವಾಗಿ 75:25 ಅನುಪಾತದಲ್ಲಿ ರಾಜ್ಯದ ಪಾಲಿನ ಅನುದಾನ ರೂ. 45,12,000–ನ್ನು ಸದರ ಜಿಲ್ಲಾ ಪಂಚಾಯಿತಿಗಳಿಗೆ ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಕೆಳಗಿನ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 7 ಎಸ್‌ಜೆವೈ (ಡಿಆರ್‌ಡಿಎ) 2008, ಬೆಂಗಳೂರು, ದಿನಾಂಕ:31ನೇ ಜನವರಿ 2009**

2008–09ನೇ ಸಾಲಿನಲ್ಲಿ ಕೇಂದ್ರ ಸರ್ಕಾರವು ಡಿಆರ್‌ಡಿಎ ಆಡಳಿತ ಯೋಜನೆಯಡಿ ಬಿಡುಗಡೆ ಮಾಡಿರುವ ಎರಡನೇ ಕಂತಿನ ಅನುದಾನಕ್ಕೆ ಅನುಗುಣವಾಗಿ ರಾಜ್ಯ ಸರ್ಕಾರವು ತನ್ನ ಪಾಲಿನ ಎರಡನೇ ಕಂತಿನ ಅನುದಾನ ರೂ. 45,12,000ನ್ನು (ನಲವತ್ತೈದು ಲಕ್ಷದ ಹನ್ನೆರಡು ಸಾವಿರ ರೂಪಾಯಿಗಳು ಮಾತ್ರ) ಕೆಳಕಾಣಿಸಿದ 7 ಜಿಲ್ಲಾ ಪಂಚಾಯಿತಿಗಳಿಗೆ ಷರತ್ತುಗಳಿಗೆ ಒಳಪಟ್ಟು ಅನುದಾನವನ್ನು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

| ಕ್ರ.ಸಂ | ಜಿಲ್ಲಾ ಪಂಚಾಯಿತಿ | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಎರಡನೇ ಕಂತಿನ ಅನುದಾನ (ರೂಗಳಲ್ಲಿ) | ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಎರಡನೇ ಕಂತಿನ ಅನುದಾನ (ರೂಗಳಲ್ಲಿ) |
|---|---|---|---|---|---|
| 1 | ಬೆಂಗಳೂರು ನಗರ | 401 | 0100ZZ 8001 | 26,20,000 | 8,73,000 |
| 2 | ಬೆಳಗಾಂ | 413 | 2200ZZ0002 | 27,85,000 | 9,29,000 |
| 3 | ದಕ್ಷಿಣ ಕನ್ನಡ | 409 | 1900ZZ0047 | 16,75,000 | 5,59,000 |

| | | | | | |
|---|---|---|---|---|---|
| 4 | ಗುಲ್ಬರ್ಗಾ | 417 | 3200 ZZ 0003 | 10,58,00 | 3,53,000 |
| 5 | ಕೊಪ್ಪಳ | 466 | 1500 ZZ 0010 | 1,87,000 | 62,000 |
| 6 | ಶಿವಮೊಗ್ಗ | 405 | 1400 ZZ 0002 | 26,65,000 | 8,88,000 |
| 7 | ತುಮಕೂರು | 406 | 0800 ZZ 0001 | 25,45,000 | 8,48,000 |
| | | | | 1,35,35,000 | 45,12,000 |

ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನವನ್ನು ಜಿಲ್ಲಾ ಪಂಚಾಯತ್ (ಡಿಆರ್‌ಡಿಎ ಆಡಳಿತ ಕೋಶದ) ಸಿಬ್ಬಂದಿಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸುವುದು. ಇನ್ನಾವುದೇ ಉದ್ದೇಶಗಳಿಗೆ ಉಪಯೋಗಿಸ ತಕ್ಕದ್ದಲ್ಲ.

ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ನಡುವೆ 75:25 ರ ಅನುಪಾತದಲ್ಲಿರುತ್ತದೆ.

ಯೋಜನೆಯ ವೆಚ್ಚವನ್ನು ಲೆಕ್ಕಶೀರ್ಷಿಕೆ :" 2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196–ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6–ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ–(ಕೇಂದ್ರ ಪುರಸ್ಕೃತ ಯೋಜನೆ) 2008–2009(2515–00–196–6–06)"ರಡಿ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ ಎಫ್‌ಡಿ 1 ಜೆಡ್‌ಪಿಎ 2007 (ಪಿ2) ದಿನಾಂಕ:26.4.2007ರನ್ವಯ ಜಿಲ್ಲಾ ಪಂಚಾಯತ್ ನಿಧಿ 1ಕ್ಕೆ ಜಮೆ ಮಾಡಿಕೊಂಡು ಭರಿಸತಕ್ಕದ್ದು.

ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಬಿಡುಗಡೆ ಮಾಡಿರುವ ಅನುದಾನವನ್ನು ಖಜಾನೆಯಿಂದ ಸೆಳೆಯುವ ಅಧಿಕಾರವನ್ನು ಆಯಾಯ ಜಿಲ್ಲಾ ಪಂಚಾಯಿತಿಗಳ ಮುಖ್ಯ ಲೆಕ್ಕಾಧಿಕಾರಿಗೆ ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ.

ಮುಖ್ಯ ಲೆಕ್ಕಾಧಿಕಾರಿಗಳು, ಜಿಲ್ಲಾ ಪಂಚಾಯಿತಿ ಇವರು ಆಯಾ ತಿಂಗಳ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5ನೇ ತಾರೀಖಿನೊಳಗೆ ನಿರ್ದೇಶಕರು (ಸ್ವಉಕಾ) ಹಾಗೂ ಪದ ನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು, ಇವರಿಗೆ ತಪ್ಪದೇ ಕಳುಹಿಸುವುದು.

ಜಿಲ್ಲಾ ಪಂಚಾಯಿತಿಗಳ, ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನ ವರದಿಗಳನ್ನು ನಿರ್ದೇಶಕರು [ಸ್ವಉಕಾ] ಹಾಗೂ ಪದ ನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು, ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಕರ್ನಾಟಕ ಸರ್ಕಾರ ಇವರ ಸಹಮತಿ ಸಂಖ್ಯೆ:ಗ್ರಾಅಪ 15 ಪಿಬಿಎಸ್ 2009 ದಿನಾಂಕ:20.1.2009 ಮತ್ತು ಗ್ರಾಅಪ 36 ಪಿಬಿಎಸ್ 2009 ದಿನಾಂಕ 29.1.2009 ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 541 **ಡಾ: ಶಮ್ಲಾ ಇಕ್ಬಾಲ್**

ನಿರ್ದೇಶಕರು (ಸ್ವ.ಉ.ಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ದಿ ಮತ್ತು ಪಂಚಾಯತ್ ರಾಜ್ ಇಲಾಖೆ,

**ವಿಷಯ :** 2008–09ನೇ ಸಾಲಿಗೆ ಎಸ್‌ಜಿಎಸ್‌ವೈ ಎರಡನೇ ಕಂತಿನ ರಾಜ್ಯದ ಪಾಲಿನ ಅನುದಾನವನ್ನು ರಾಜ್ಯದ 9 ಜಿಲ್ಲಾ ಪಂಚಾಯಿತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1 ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರ ಸಂಖ್ಯೆ:ಜೆ 12022/1/2008 ಎಸ್‌ಜಿಎಸ್‌ವೈ–I(12) ದಿನಾಂಕ:2.4.08, (39) ದಿನಾಂಕ:22.5.08 ಮತ್ತು (63) ದಿನಾಂಕ:26.6.08.

2 ರಾಜ್ಯ ಸರ್ಕಾರದ ಆದೇಶ ಸಮ ಸಂಖ್ಯೆ ದಿನಾಂಕ:12.5.08 ಮತ್ತು 29.7.08

3 ಗ್ರಾಮೀಣಾಭಿವೃದ್ಧಿ ಮಂತ್ರಾಲಯದ ಪತ್ರದ ಸಂಖ್ಯೆ:ಜೆ 12022/1/2008 ಎಸ್‌ಜಿಎಸ್‌ವೈ–I (126)ದಿನಾಂಕ:18.12.08 ಮತ್ತು (146) ದಿನಾಂಕ:14.1.09.

**ಪ್ರಸ್ತಾವನೆ:**

2008–09ನೇ ಸಾಲಿನಲ್ಲಿ ಸ್ವರ್ಣ ಜಯಂತಿ ಗ್ರಾಮಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜೆಎಸ್‌ವೈ) ಕೇಂದ್ರ ಸರ್ಕಾರವು ಓದಲಾಗಿದೆ (1)ರಲ್ಲಿ ಒಂದನೇ ಕಂತಿನ ಅನುದಾನವಾಗಿ ಒಟ್ಟು ರೂ. 40,08,44,000ಗಳನ್ನು ರಾಜ್ಯದ ಎಲ್ಲಾ

ಜಿಲ್ಲಾ ಪಂಚಾಯಿತಿಗಳಿಗೆ ಬಿಡುಗಡೆ ಮಾಡಿದ್ದು, ಇದರನ್ವಯ ಓದಲಾಗಿದೆ (2)ರನ್ವಯ ರಾಜ್ಯ ಸರ್ಕಾರವು ಆಯವ್ಯಯದಲ್ಲಿ ಜಿಲ್ಲೆಗಳಿಗೆ ಲಭ್ಯವಿರುವ ಅನುದಾನದಂತೆ ತನ್ನ ಪಾಲಿನ ಮೊದಲನೇ ಕಂತಿನ ಅನುದಾನ ರೂ. 13.21,59,000 ಬಿಡುಗಡೆ ಮಾಡಲಾಗಿದೆ. ಓದಲಾಗಿದೆ (3)ರಲ್ಲಿನ ದಿನಾಂಕಗಳಲ್ಲಿ ಕೇಂದ್ರ ಸರ್ಕಾರ ಈ ಯೋಜನೆಗೆ ರಾಜ್ಯದ ಬಾಗಲಕೋಟೆ, ಬೆಂಗಳೂರು ನಗರ, ಹಾಸನ, ಚಿತ್ರದುರ್ಗ, ಧಾರವಾಡ,ಗುಲ್ಬರ್ಗಾ, ಕೊಪ್ಪಳ, ಶಿವಮೊಗ್ಗ ಮತ್ತು ತುಮಕೂರು ಜಿಲ್ಲೆಗಳಿಗೆ ಎರಡನೇ ಕಂತಿನ ಅನುದಾನವಾಗಿ ಒಟ್ಟು ರೂ. 10,82,51,000 ಗಳನ್ನು ಬಿಡುಗಡೆ ಮಾಡಿದೆ. ಇದರನ್ವಯ ರಾಜ್ಯ ಸರ್ಕಾರವು ತನ್ನ ಪಾಲಿನ ಎರಡನೇ ಕಂತಿನ ಅನುದಾನ ರೂ.3,60,84,00ಗಳನ್ನು ಬಿಡುಗಡೆ ಮಾಡಬೇಕಾಗಿದೆ ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 32 ಎಸ್‌ಜೆವೈ 2008, ಬೆಂಗಳೂರು, ದಿನಾಂಕ:30ನೇ ಜನವರಿ 2009**

ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆಯಡಿ (ಎಸ್‌ಜಿಎಸ್‌ವೈ) ರಾಜ್ಯ ಸರ್ಕಾರವು ತನ್ನ ಪಾಲಿನ ಎರಡನೇ ಕಂತಿನ ಅನುದಾನವನ್ನು ಲಗತ್ತಿಸಿರುವ ಅನುಬಂಧದಲ್ಲಿ ತೋರಿಸಿರುವಂತೆ ಬಾಗಲಕೋಟೆ, ಬೆಂಗಳೂರು, ನಗರ, ಹಾಸನ, ಚಿತ್ರದುರ್ಗ, ಧಾರವಾಡ,. ಗುಲ್ಬರ್ಗಾ, ಕೊಪ್ಪಳ, ಶಿವಮೊಗ್ಗ ಮತ್ತು ತುಮಕೂರು ಜಿಲ್ಲೆಗಳಿಗೆ ಒಟ್ಟು ರೂ. 3,60,84,000ಗಳನ್ನು (ರೂ. ಮೂರು ಕೋಟಿ ಅರವತ್ತು ಲಕ್ಷದ ಎಂಬತ್ತನಾಲ್ಕು ಸಾವಿರ ಮಾತ್ರ) ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

**ಷರತ್ತುಗಳು:**

1999 ಮೇ ತಿಂಗಳ ಎಸ್‌ಜಿಎಸ್‌ವೈ ಕೈಪಿಡಿಯ ಮಾರ್ಗಸೂಚಿಯಂತೆ ಹಣವನ್ನು ಉಪಯೋಗಿಸುವುದು ಅನುಷ್ಠಾನ ಏಜೆನ್ಸಿಗಳಿಗೆ ಸರ್ಕಾರಿ ಆದೇಶ ತಲುಪಿದ 15 ದಿವಸದೊಳಗೆ ಬಿಡುಗಡೆ ಮಾಡತಕ್ಕದ್ದು.

ನಿಧಿಯ ಮಾದರಿ ಕೇಂದ್ರ ಮತ್ತು ರಾಜ್ಯದ ನಡುವೆ 75:25 ರ ಅನುಪಾತದಲ್ಲಿ ನೀಡಲಾಗುವುದು.

ಯೋಜನೆಯ ವೆಚ್ಚವನ್ನು ಪ್ರಧಾನ ಲೆಕ್ಕಶೀರ್ಷಿಕೆ :2501 ಗ್ರಾಮೀಣಾಭಿವೃದ್ಧಿಗಾಗಿ ವಿಶೇಷ ಕಾರ್ಯಕ್ರಮಗಳು–01–ಸಮಗ್ರ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು–198–ಗ್ರಾಮಪಂಚಾಯತ್‌ಗಳಿಗೆ ಸಹಾಯ 6–ಗ್ರಾಮಪಂಚಾಯತ್‌ಗಳು–01–ಬ್ಲಾಕ್ ಅನುದಾನ ಕೇಂದ್ರ ಪುರಸ್ಕೃತ ಯೋಜನೆ (ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ) 2008–09 (2501–01–198–6–01) ಸಾಲಿನಲ್ಲಿ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 7 ಜೆಡ್‌ಪಿಎ 2003 ದಿನಾಂಕ:14.7.2005 ರನ್ವಯ ಖಜಾನೆಯಿಂದ ಪಡೆಯುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯಿತಿಗಳ ಮುಖ್ಯ ಲೆಕ್ಕಾಧಿಕಾರಿಗಳಿಗೆ ಹಣ ತೆಗೆಯಲು ಕಾನೂನು ರೀತ್ಯ ಅಧಿಕಾರ ನೀಡಲಾಗಿದೆ. ಈ ಯೋಜನೆಯಡಿ ಕೇಂದ್ರ ಸರ್ಕಾರವು ನೇರವಾಗಿ ಜಿಲ್ಲಾ ಪಂಚಾಯಿತಿಗೆ ಬಿಡುಗಡೆ ಮಾಡಿರುವ ಅನುದಾನ ಮತ್ತು ರಾಜ್ಯದ ಪಾಲಿನ ಅನುದಾನವೂ ಸೇರಿದಂತೆ ಒಟ್ಟು ಅನುದಾನವನ್ನು ಸರ್ಕಾರದ ಸುತ್ತೋಲೆ ಸಂಖ್ಯೆ:ಗ್ರಾಅಪ 14 ಎಸ್ ಜೆ ವೈ 2007 ದಿನಾಂಕ:18.4.2007ರ ಸೂಚನೆಯಂತೆ ಕ್ರಮ ಕೈಗೊಳ್ಳುವುದು.

ಬಿಡುಗಡೆ ಮಾಡುವ ಹಣದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

2008–09ನೇ ಸಾಲಿನ ಅನುಮೋದಿತ ವಾರ್ಷಿಕ ಯೋಜನೆಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯಿತಿಗಳ ಯೋಜನಾ ನಿರ್ದೇಶಕರು (ಡಿಆರ್‌ಡಿಎ) ಇವರು ಸರ್ಕಾರಕ್ಕೆ ಸಲ್ಲಿಸುವುದು.

ಆರ್ಥಿಕ ಮತು ಭೌತಿಕ ಸಾಧನೆಯ ಮಾಸಿಕ ಪ್ರಗತಿ ವರದಿಯನ್ನು ಪ್ರತಿ ಮಾಹೆಯ 5ನೇ ತಾರೀಖಿನೊಳಗೆ ಕೇಂದ್ರ ಸರ್ಕಾರದ online ಗೆ upload ಮಾಡಿ ಪ್ರತಿಯನ್ನು ಸ್ವ ಉದ್ಯೋಗ ಕಾರ್ಯಕ್ರಮಗಳ ಶಾಖೆಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತ್‌ನ ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಆಡಿಟ್ ಮಾಡಿದ ಲೆಕ್ಕಗಳನ್ನು ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಇವರ ಸಹಮತಿ ಸಂಖ್ಯೆ:ಗ್ರಾಅಪ 28 ಪಿಬಿಎಸ್ 2009 ದಿನಾಂಕ:29.1.2009ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಡಾ: ಶಮ್ಲಾ ಇಕ್ಬಾಲ್**

ನಿರ್ದೇಶಕರು (ಸ್ವ.ಉ.ಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ,

**ಸರ್ಕಾರದ ಆದೇಶದ ಸಂಖ್ಯೆ:ಗ್ರಾಅಪ 32 ಎಸ್‌ಜಿವೈ 2009, ಬೆಂಗಳೂರು, ದಿನಾಂಕ:30–1–2009 ಅನುಬಂಧ**

**(ರೂ.ಗಳಲ್ಲಿ)**

| ಕ್ರ.ಸಂ | ಜಿಲ್ಲಾ ಪಂಚಾಯಿತಿ | ಜಿ.ಪಂ. ಕೋಡ್ | ಡಿ.ಡಿ.ಓ. ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಎರಡನೇ ಕಂತಿನ ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡಬೇಕಾದ ಎರಡನೇ ಕಂತಿನ ಅನುದಾನ |
|---|---|---|---|---|---|
| 1 | ಬಾಗಕೋಟೆ | 461 | 2900ZZ 0001 | 94,60,000 | 31,53,000 |
| 2 | ಬೆಂಗಳೂರು ನಗರ | 401 | 0100ZZ 8001 | 31,97,000 | 10,66,000 |
| 3 | ಚಿತ್ರದುರ್ಗ | 403 | 1600ZZ0001 | 1,26,29,000 | 42,10,000 |
| 4 | ಗುಲ್ಬರ್ಗಾ | 417 | 3200ZZ0003 | 2,08,37,000 | 69,46,000 |
| 5 | ಧಾರವಾಡ | 415 | 2500ZZ8798 | 77,45,000 | 25,82,000 |
| 6 | ಹಾಸನ | 410 | 1300ZZ0003 | 1,04,34,000 | 34,78,000 |
| 7 | ಕೊಪ್ಪಳ | 466 | 1500ZZ0010 | 1,21,18,000 | 40,39,000 |
| 8 | ಶಿವಮೊಗ್ಗ | 405 | 1400ZZ0002 | 1,45,39,000 | 48,46,000 |
| 9 | ತುಮಕೂರು | 406 | 0800ZZ0001 | 1,72,92,000 | 57,64,000 |
| | | ಒಟ್ಟು | | 10,82,51,000 | 3,60,84,000 |

**ಡಾ: ಶಮ್ಲಾ ಇಕ್ಬಾಲ್**

ಪಿ.ಆರ್. 542

ನಿರ್ದೇಶಕರು (ಸ್ವ.ಉ.ಕಾ) ಹಾಗೂ ಪ.ನಿ. ಸರ್ಕಾರದ ಉಪ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ,

**ಕಂದಾಯ ಸಚಿವಾಲಯ**

**ವಿಷಯ:** ರಾಜ್ಯದಲ್ಲಿ ಸಾಮಾಜಿಕ ಭದ್ರತಾ ಯೋಜನೆಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಸಲುವಾಗಿ ತಾಲ್ಲೂಕು ಮಟ್ಟದಲ್ಲಿ ಶಿರಸ್ತೇದಾರರು, ಪ್ರಥಮ ದರ್ಜೆ ಸಹಾಯಕರು ಮತ್ತು ಕಂಪ್ಯೂಟರ್ ಆಪರೇಟರ್ ಹುದ್ದೆಗಳನ್ನು ಸೃಜಿಸುವ ಕುರಿತು.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ:ಆರ್‌ಡಿ 44 ಎಂಎಸ್‌ಟಿ. 2007, ದಿನಾಂಕ:8.5.2007.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಹಿಂದುಳಿದ ಅಸಹಾಯಕ ವೃದ್ಧರಿಗೆ, ಅಂಗವಿಕಲರಿಗೆ ವಿಧವೆಯರಿಗೆ ಆರ್ಥಿಕವಾಗಿ ಸಹಾಯ ಮಾಡಲು ಕರ್ನಾಟಕ ಸರ್ಕಾರವು ಸಾಮಾಜಿಕ ಭದ್ರತಾ ಯೋಜನೆಗಳಾದ ಇಂದಿರಾ ಗಾಂಧಿ ರಾಷ್ಟ್ರೀಯ ವೃದ್ಧಾಪ್ಯ ವೇತನ, ಅಂಗವಿಕಲ ವೇತನ ಸಂಧ್ಯಾ ಸುರಕ್ಷಾ ಯೋಜನೆ, ರಾಷ್ಟ್ರೀಯ ಕುಟುಂಬ ನೆರವು ಯೋಜನೆ, ಅಂತ್ಯ ಸಂಸ್ಕಾರ ಯೋಜನೆ, ಆದರ್ಶ ವಿವಾಹ ಯೋಜನೆ ಹಾಗೂ ಆಮ್ ಆದ್ಮಿ ಬೀಮಾ ಯೋಜನೆ ಇತ್ಯಾದಿ ಯೋಜನೆಗಳನ್ನು ಅನುಷ್ಠಾನಗೊಳಿಸಲು ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯವನ್ನು ಸ್ಥಾಪಿಸಿದೆ. ಈ ಎಲ್ಲಾ ಯೋಜನೆಗಳು ಸಾಕಷ್ಟು ಜನಪ್ರಿಯ ಯೋಜನೆಗಳಾಗಿದ್ದು, ತಾಲ್ಲೂಕಿನ ತಹಶೀಲ್ದಾರರು ಮಂಜೂರಾತಿ ಪ್ರಾಧಿಕಾರಿಯಾಗಿರುತ್ತಾರೆ. ಯೋಜನೆಯಡಿ ಫಲಾನುಭವಿಗಳ ಸಂಖ್ಯೆಯು ಗಣನೀಯವಾಗಿ ಹೆಚ್ಚಳವಾಗುತ್ತಿರುತ್ತದೆ ಹಾಗೂ ಯೋಜನೆಗಳ ವಾರ್ಷಿಕ ವೆಚ್ಚವು ಸುಮಾರು ರೂ. 1200.00 ಕೋಟಿಗಳಾಗಿರುತ್ತದೆ. ಅಲ್ಲದೆ ಪ್ರತಿ ವರ್ಷ ಅನೇಕ ನೂತನ ಜನಹಿತ ಕಾರ್ಯಕ್ರಮಗಳನ್ನು ಸರ್ಕಾರವು ಅನುಷ್ಠಾನಗೊಳಿಸುತ್ತಿದೆ.

ಈ ಯೋಜನೆಯ ಅನುಷ್ಠಾನಕ್ಕಾಗಿ ನಿರ್ದೇಶನಾಲಯದಲ್ಲಿ ರಾಜ್ಯ ಮಟ್ಟದಲ್ಲಿ, ಜಿಲ್ಲಾ ಮಟ್ಟದಲ್ಲಿ ಹಾಗೂ ತಾಲ್ಲೂಕು ಮಟ್ಟದಲ್ಲಿ ಈ ಕೆಳಕಂಡ ಹುದ್ದೆಗಳನ್ನು ಸೃಜಿಸಲಾಗಿರುತ್ತದೆ.

| ಕ್ರ.ಸಂ | ಹುದ್ದೆಗಳು | ರಾಜ್ಯ ಮಟ್ಟದಲ್ಲಿ | ಜಿಲ್ಲಾ ಮಟ್ಟದಲ್ಲಿ | ತಾಲ್ಲೂಕು ಮಟ್ಟದಲ್ಲಿ |
|---|---|---|---|---|
| 1 | ನಿರ್ದೇಶಕರು | 1 | – | – |
| 2 | ಶಾಖಾಧಿಕಾರಿಗಳು | 1 | – | – |
| 3 | ಡಾಟಾ ಎಂಟ್ರಿ ಆಪರೇಟರ್ | 10 | – | – |
| 4 | ಶೀಘ್ರಲಿಪಿಗಾರರು | 2 | – | – |
| 5 | ವಾಹನ ಚಾಲಕ | 2 | – | – |

| | | | | |
|---|---|---|---|---|
| 6 | ಗ್ರೂಪ್–ಡಿ | 2 | – | – |
| 7 | ಸಾಂಖ್ಯಿಕ ಅಧಿಕಾರಿ (ಜಿಲ್ಲಾ ಮಟ್ಟದಲ್ಲಿ) | – | 27 | – |
| 8 | ಡಾಟಾ ಎಂಟ್ರಿ ಆಪರೇಟರ್ (ಜಿಲ್ಲಾ ಮಟ್ಟದಲ್ಲಿ) | – | 29 | – |
| 9 | ಡಾಟಾ ಎಂಟ್ರಿ ಆಪರೇಟರ್ (ತಾಲ್ಲೂಕು ಮಟ್ಟದಲ್ಲಿ) | – | – | 176 |

ಸಾಮಾಜಿಕ ಭದ್ರತಾ ಯೋಜನೆಗಳಿಗೆ ಸಂಬಂಧಿಸಿದಂತೆ ಯೋಜನೆಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವುದಕ್ಕಾಗಿ ಯೋಜನೆಗಳಡಿ ಫಲಾನುಭವಿಗಳ ಮಾಹಿತಿಗಳ ನಿರ್ವಹಣೆ ಹಾಗೂ ಮಾಹಿತಿ ತಂತ್ರಜ್ಞಾನ ಆಧಾರಿತ ಪಿಂಚಣಿಗಳ ವಿತರಣಾ ಯೋಜನೆ, ಇನ್ನೂ ಹಲವಾರು ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸುವ ಜವಾಬ್ದಾರಿಯು ಕಂದಾಯ ಇಲಾಖೆಯ ತಾಲ್ಲೂಕು ಕಛೇರಿಯಲ್ಲಿರುವ ಸಿಬ್ಬಂದಿಯ ಮೇಲಿರುತ್ತದೆ. ಆದರೆ ಈಗಾಗಲೇ ತಾಲ್ಲೂಕು ಕಛೇರಿಯಲ್ಲಿರುವ ಸಿಬ್ಬಂದಿಗಳ ಮೇಲೆ ಸಾಕಷ್ಟು ಕೆಲಸದ ಒತ್ತಡವಿರುವ ಅಂಶವನ್ನು ಸರ್ಕಾರವು ಮನಗಂಡು ಸಾಮಾಜಿಕ ಭದ್ರತಾಯೋಜನೆಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಿ ನಿರ್ವಹಿಸಲು ಪ್ರತಿ ತಾಲ್ಲೂಕಿನಲ್ಲಿ ಶಿರಸ್ತೇದಾರರು, ಪ್ರಥಮ ದರ್ಜೆ ಸಹಾಯಕರು ಹಾಗೂ ಕಂಪ್ಯೂಟರ್ ಆಪರೇಟರ್ ಹುದ್ದೆಗಳನ್ನು ಸೃಜಿಸುವುದು ಸೂಕ್ತವೆಂದು ಸರ್ಕಾರವು ತೀರ್ಮಾನಿಸಿರುವ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ಆರ್‌ಡಿ 75 ಡಿಎಸ್‌ಪಿ 2008, ದಿನಾಂಕ:31ನೇ ಜನವರಿ 2009**

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ರಾಜ್ಯದಲ್ಲಿ ಸಾಮಾಜಿಕ ಭದ್ರತಾ ಯೋಜನೆಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಪ್ರತಿ ತಾಲ್ಲೂಕಿನಲ್ಲಿನ ತಹಶೀಲ್ದಾರ್ ಕಛೇರಿಯಲ್ಲಿ ಒಂದು ಶೀರಸ್ತೆದಾರ್ ಹುದ್ದೆಯನ್ನು (ವೇತನ ಶ್ರೇಣಿ ರೂ 10000–250–10500–300–12300–352–14400–400–16800–450–18150), ಒಂದು ಪ್ರಥಮ ದರ್ಜೆ ಸಹಾಯಕರ ಹುದ್ದೆ (ವೇತನ ಶ್ರೇಣಿ ರೂ 7275–175–7800–200–8600–225–9500–250–10500–300–12300–350–13350) ಮತ್ತು ಒಂದು ಕಂಪ್ಯೂಟರ್ ಆಪರೇಟರ್ ಹುದ್ದೆಯ (ವೇತನ ಶ್ರೇಣಿ ರೂ. 5800–100–6000–125–6500–150–7100–175–7800–200–8600–225–9500–250–10500) ಹುದ್ದೆಗಳನ್ನು ರಾಜ್ಯದ 176 ತಾಲ್ಲೂಕು ಕೇಂದ್ರಗಳಲ್ಲಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಸೃಜಿಸಿ ಸರ್ಕಾರ ಮಂಜೂರಾತಿ ನೀಡಿ ಆದೇಶಿಸಿದೆ.

ಶಿರಸ್ತೇದಾರ್ ಮತ್ತು ಪ್ರಥಮ ದರ್ಜೆ ಸಹಾಯಕರ ಹುದ್ದೆಗಳನ್ನು ಕಂದಾಯ ಇಲಾಖೆಯಲ್ಲಿನ ವೃಂದಾ ಮತ್ತು ನೇಮಕಾತಿ ನಿಯಮಗಳನ್ನು ಪಾಲಿಸಿ ಭರ್ತಿ ಮಾಡಲು ಪ್ರಾದೇಶಿಕ ಆಯುಕ್ತರುಗಳಿಗೆ ಅಧಿಕಾರವನ್ನು ಪ್ರತ್ಯೋಜಿಸಲಾಗಿದೆ.

ಕಂಪ್ಯೂಟರ್ ಆಪರೇಟರ್ ಹುದ್ದೆಗಳನ್ನು ಹೊರಗುತ್ತಿಗೆ ಮೂಲಕ ಕರ್ನಾಟಕ ಸಾರ್ವಜನಿಕ ಖರೀದಿಯಲ್ಲಿ ಪಾರದರ್ಶಕತೆ ಅಧಿನಿಯಮಗಳನ್ನು ಪಾಲಿಸಿ ತುಂಬಲು ನಿರ್ದೇಶಕರು, ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯ ಇವರಿಗೆ ಅಧಿಕಾರವನ್ನು ಪ್ರತ್ಯೋಜಿಸಲಾಗಿದೆ.

ಇದಕ್ಕೆ ತಗಲುವ ವೇತನ ಭತ್ಯೆ ಇತರೇ ವೆಚ್ಚಗಳನ್ನು "ಸಾಮಾಜಿಕ ಭದ್ರತೆ ಮತ್ತು ಪಿಂಚಣಿಗಳ ನಿರ್ದೇಶನಾಲಯದ ಲೆಕ್ಕ ಶೀರ್ಷಿಕೆ 2235–60–001–0–01 ರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 1657 ವೆಚ್ಚ–7/2008, ದಿನಾಂಕ:16.1.2009ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 556

**ಎಂ.ಕೆ. ನರಸಿಂಹಲು**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ, (ಸಮನ್ವಯ)

## INFRASTRUCTURE DEVELOPMENT SECRETARIAT

**Sub :** Release of funds towards cost sharing Railway project Kotturu-Harihar new broad gauge railway line project.

**Read :**
1) G.O.No. IDD 1 NSW 2002 dated :22.3.02.
2) G.O.No. IDD 47 NSW 2003(P) dated :26.3.2004.
3) G.O.No. IDD 51 NSW 2004 dated :19.7.2004
4) G.O No. IDD 98 NSW 2003 dated 21.10.2006
5) G.O.No. IDD 98 NSW 2003 dated 20.12.2006

6) G.O.No. IDD 98 NSW 2003 dated 5.9.2007
7) G.O.No. IDD 15 NSW 2008 dated 22.10.2008
8) G.O.No. IDD 15 NSW 2008 dated 17.12.2008
9) G.O.No. IDD 15 NSW 2008 dated 20.1.2009
10) Letter No.W. 63/B/CN/BNC/Genl dated 26.12.2008 and 20.1.09 of Chief Engineer, (Con., )SWR, Bangalore.

**Preamble:**

In the Government Orders referred to at Sl.No. (1) to (9) above Government of Karnataka has so far released an amount of Rs .110.00 crore towards cost sharing for Kotturu-Harihar New railway line project.

2. The Chief Engineer, South Western Railway, Bangalore in his letter read at Sl.No. (10 )above, has stated that the railways had already spent Rs. 130.00 crore towards Kotturu Harihart new railway line project and requested for immediate deposit balance of Rs. 30.00 crore i.e. 2/3 share of Government of Karnataka, However in Government Order read at Sl.No. (9) above an amount of Rs .20.00 crores has been relaeased leaving the balance Rs. 10.00 crore to be released by the state Government.

3. The proposal of Railways has been examined and it has been decided to release an amount of Rs .10.00 crore out of the Budget of Rs. 100.00 crore provided under the Head of Account''5465-01-190-3-05'' (plan )211 investment towards cost sharing for new railway projects during 2008-09 .Hence this order.

**Government Order No. IDD 15 NSW 2008, Bangalore Dated:18th February, 2009.**

After careful examination of the request of Railways, Government is pleased to release Rs .10.00 crore (Rupees Ten Crore only) towards Kotturu-Harihar new railway line being the part of the balance 2/3rd share of Government of Karnataka., The above amount shall be met under the Head of Account ''5465-01-190-3-05'' (Plan) 211 investment out of the budget provision Rs .100.00 crore, towards cost sharing for new railway projectrs during 2008-09.

2. The Chief Executive Officer, K-RIDE is authorized to draw the amount on a payee's receipt duly countersigned by the Under Secretary to Government, Infrastructure Development Department and K-RIDE shall in turn deposit the same with the Financial Advisor and Chief Accounts Officer (Construction) ,South Western Railway, Bangalore.

3. This order is issued in accordance with the concurrence of Finance Department given vide U.O. Note No.FD 5 Exp-I/09 dated:17.2.2009.

By order and in the name of Governor of Karnataka

**N. MANJULA GEETHA**

P.R. 675

Under Secretary to Government

Infrastructure Development Department

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ:** ಧಾರವಾಡ ವಲಯ ಕಛೇರಿಯಲ್ಲಿ ಮಂಜೂರಾಗಿರುವ ನಗರ ಯೋಜನಾ ಜಂಟಿ ನಿರ್ದೇಶಕರ ಹುದ್ದೆಯನ್ನು ನಗರ ಯೋಜನಾ ಹೆಚ್ಚುವರಿ ನಿರ್ದೇಶಕರ ಹುದ್ದೆಗೆ ಮೇಲ್ದರ್ಜೆಗೇರಿಸುವ ಕುರಿತು.

**ಓದಲಾಗಿದೆ :** 1 ನಿರ್ದೇಶಕರು ನಗರ ಯೋಜನಾ ಇಲಾಖೆ ಇವರ ಏಕ ಕಡತ ಸಂಖ್ಯೆ :ನಯೋ:ಸಿ(1):96(2): ವೃನೇನಿ:2008 ದಿನಾಂಕ:19.3.2008.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಕಡತದಲ್ಲಿ ನಿರ್ದೇಶಕರು ನಗರ ಯೋಜನಾ ಇಲಾಖೆ, ಬೆಂಗಳೂರು ಇವರು ನಗರ ಯೋಜನಾ ನಿರ್ದೇಶಕರು, ಧಾರವಾಡ ವಲಯದಲ್ಲಿ ಮಂಜೂರಾಗಿರುವ ನಗರ ಯೋಜನಾ ಜಂಟಿ ನಿರ್ದೇಶಕರ ಹುದ್ದೆಯನ್ನು ನಗರ ಯೋಜನಾ ಹೆಚ್ಚುವರಿ ನಿರ್ದೇಶಕರ ಹುದ್ದೆಯನ್ನು ಮೇಲ್ದರ್ಜೆಗೇರಿಸಲು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸದರಿ ಮೇಲ್ದರ್ಜೆಗೇರಿಸುವ ಹೆಚ್ಚುವರಿ ನಿರ್ದೇಶಕರ ಮೇಲ್ವಿಚಾರಣೆಯಲ್ಲಿ ಬೆಳಗಾಂ ವಿಭಾಗ ಮತ್ತು ಗುಲ್ಬರ್ಗಾ ವಿಭಾಗೀಯ ಕಚೇರಿ ಹಾಗೂ ನಗರ ವ್ಯಾಪ್ತಿಯಲ್ಲಿ ಬರುವ ಶಾಖಾ ಕಛೇರಿಯಲ್ಲಿ ಕಾರ್ಯ ನಿರ್ವಹಿಸಲು ಅನುವಾಗುವಂತೆ ಪ್ರಸ್ತುತ ನಗರ ಯೋಜನಾ ನಿರ್ದೇಶಕರಿಗಿರುವ ಕೆಲವೊಂದು ಅಧಿಕಾರಿಗಳನ್ನು ನಗರ ಯೋಜನಾ ಹೆಚ್ಚುವರಿ ನಿರ್ದೇಶಕರಿಗೆ ಪ್ರತ್ಯಾಯೋಜನೆಗೊಳಿಸುವುದು. ಆಡಳಿತಾತ್ಮಕ ಹಾಗೂ ಪ್ರಾದೇಶಿಕ ಅಸಮತೋಲನೆಯನ್ನು ನಿವಾರಿಸುವ ಹಿತದೃಷ್ಟಿಯಿಂದ ನಗರ ಯೋಜನಾ ಜಂಟಿ ನಿರ್ದೇಶಕರ ಹುದ್ದೆಯನ್ನು ನಗರ ಯೋಜನಾ ಹೆಚ್ಚುವರಿ ನಿರ್ದೇಶಕರ ಹುದ್ದೆಗೆ ಮೇಲ್ದರ್ಜೆಗೇರಿಸಲು ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ.

ನಿರ್ದೇಶಕರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ನಅಇ 56 ನಯೋಸೇ 2008, ಬೆಂಗಳೂರು, ದಿನಾಂಕ:2ನೇ ಜುಲೈ 2008**

ನಗರ ಯೋಜನಾ ಇಲಾಖೆಯ ಧಾರವಾಡ ವಲಯ ಕಛೇರಿಯಲ್ಲಿ ನಗರ ಯೋಜನಾ ಹೆಚ್ಚುವರಿ ನಿರ್ದೇಶಕರು ಹುದ್ದೆಯನ್ನು ವೇತನ ಶ್ರೇಣಿ 22125–525–22650–600–26250–675–30300ಯಲ್ಲಿ ಸೃಜಿಸಲಾಗಿದೆ ಮತ್ತು ಹಾಲಿ ಧಾರವಾಡ ವಲಯ ಕಛೇರಿಯಲ್ಲಿರುವ ನಗರ ಯೋಜನಾ ಜಂಟಿ ನಿರ್ದೇಶಕರ ಹುದ್ದೆಯನ್ನು ಕೂಡಲೇ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ FD 353 Exp-9, 2008, ದಿನಾಂಕ:13.6.2008ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 447

**ಎಸ್.ಎನ್. ಕೃಷ್ಣಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ,

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ಕರ್ನಾಟಕ ಸಾಹಿತ್ಯ ಸಂಘ ಟ್ರಸ್ಟ್, ಬೀದರ್ ಸಂಸ್ಥೆಗೆ ಸಾಂಸ್ಕೃತಿ ಭವನ ನಿರ್ಮಾಣಕ್ಕೆ ಧನಸಹಾಯ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1 ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ರವರ ಪತ್ರ ಸಂಖ್ಯೆ ಕಸನಿ/ಸುಕ/22/2007–08, ದಿನಾಂಕ:18.11.2008.

2 ಸರ್ಕಾರದ ಪತ್ರ ಸಂಖ್ಯೆ:ಕಸಂವಾಪ್ರ 157 ಕಸನಿ 08, ದಿನಾಂಕ:20.4.2008.

**ಪ್ರಸ್ತಾವನೆ:**

ಮೇಲೆ ಓದಲಾದ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ದಿನಾಂಕ:18.11.2008ರ ಪತ್ರದಲ್ಲಿ ಕರ್ನಾಟಕ ಸಾಹಿತ್ಯ ಸಂಘ ಟ್ರಸ್ಟ್, ಬೀದರ್ ಸಂಸ್ಥೆಗೆ ಸಾಂಸ್ಕೃತಿಕ ಭವನ ನಿರ್ಮಾಣಕ್ಕೆ 25.00 ಲಕ್ಷಗಳನ್ನು ಹೆಚ್ಚುವರಿಯಾಗಿ ಬಿಡುಗಡೆ ಮಾಡುವಂತೆ ಕಳೆದ ಸಾಲಿನಲ್ಲಿ ಪ್ರಸ್ತಾವನೆ ಸಲ್ಲಿಸಲಾಗಿತ್ತೆಂದು ಮೇಲೆ (2) ರಲ್ಲಿ ಓದಲಾದ ದಿನಾಂಕ:22.4.2008ರ ಸರ್ಕಾರಿ ಪತ್ರದಲ್ಲಿ 2008–09ನೇ ಸಾಲಿನ ಆಯವ್ಯಯದಲ್ಲಿ ಅವಕಾಶ ಕಲ್ಪಿಸಿಕೊಂಡು ಪ್ರಸ್ತಾವನೆ ಸಲ್ಲಿಸುವಂತೆ ಸೂಚಿಸಲಾಗಿರುವುದರಿಂದ 2008–09ನೇ ಸಾಲಿನಲ್ಲಿ 2205–00–102–4–09–059 ಶೀರ್ಷಿಕೆಯಲ್ಲಿ ಗಡಿಭಾಗದಲ್ಲಿ ಸುವರ್ಣ ಗಡಿಭವನ ನಿರ್ಮಾಣಕ್ಕೆ ಒದಗಿಸಲಾಗಿರುವ ರೂ. 20.00 ಲಕ್ಷಗಳ ಒಟ್ಟಾರೆ ಅನುದಾನದಲ್ಲಿ ಉಳಿತಾಯವಾಗುವ ರೂ. 4.00 ಲಕ್ಷಗಳನ್ನು ಸದರಿ ಯೋಜನೆಗೆ ಬಿಡುಗಡೆ ಮಾಡಲು ಅನುಮತಿ ಕೋರಿರುತ್ತಾರೆ ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಕಸಂವಾಪ್ರ 153 ಕಸನಿ 2008, ಬೆಂಗಳೂರು, ದಿನಾಂಕ:6ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಕರ್ನಾಟಕ ಸಾಹಿತ್ಯ ಸಂಘ ಟ್ರಸ್ಟ್ ಬೀದರ್ ಸಂಸ್ಥೆಗೆ ಸಾಂಸ್ಕೃತಿಕ ಭವನ ನಿರ್ಮಾಣಕ್ಕೆ ರೂ. 4.00 ಲಕ್ಷಗಳನ್ನು (ರೂಪಾಯಿ ನಾಲ್ಕು ಲಕ್ಷಗಳು ಮಾತ್ರ) ಕರ್ನಾಟಕ ಸಾಹಿತ್ಯ ಸಂಘ ಟ್ರಸ್ಟ್ ಇವರಿಗೆ ಈ ಕೆಳಕಂಡ ಷರತ್ತಿಗೆ ಒಳಪಟ್ಟು ಬಿಡುಗಡೆ ಮಾಡಲು ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು ಇವರಿಗೆ ಸರ್ಕಾರದ ಅನುಮತಿ ನೀಡಲಾಗಿದೆ.

1) ಹಣವನ್ನು ಯಾವ ಉದ್ದೇಶಕ್ಕೆ ಬಿಡುಗಡೆ ಮಾಡಿದೆಯೊ ಅದೇ ಉದ್ದೇಶಕ್ಕೆ ಬಳಸತಕ್ಕದ್ದು.

2) ಹಣ ಬಳಕೆಯಾದ ಬಗ್ಗೆ ಹಣಬಳಕೆ ಪ್ರಮಾಣಪತ್ರವನ್ನು ಸಲ್ಲಿಸುವುದು.

3) ಈ ಕಾಮಗಾರಿಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕ ಕಾಯ್ದೆ 1999 ಮತ್ತು ಅದರ ನಿಯಮಗಳು 2000ನ್ನು ಅನುಸರಿಸಿ ಕ್ರಮ ವಹಿಸುವುದು.

ಈ ವೆಚ್ಚವನ್ನು 2008–09ನೇ ಸಾಲಿನ ಲೆಕ್ಕಶೀರ್ಷಿಕೆ 2205–00–102–4–09–059 (ಯೋಜನೆ) ಇದರಡಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ:ಇಡಿ 1725/ಐಎಫ್ (ಬಿಎ) 2008 ದಿನಾಂಕ:30–12–2008ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 539

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ, (ಆಡಳಿತ ಕನ್ನಡ)

## ಶಿಕ್ಷಣ ಸಚಿವಾಲಯ

**ವಿಷಯ:** ಬೆಂಗಳೂರು ದರ್ಶನ ಎಂಬ ಗ್ರಂಥದ ಪ್ರತಿಗಳನ್ನು ಖರೀದಿಸುವ ಬಗ್ಗೆ.

**ಓದಲಾಗಿದೆ :** 1 ಸರ್ಕಾರದ ಆದೇಶ ಸಂಖ್ಯೆ ಇಡಿ 78 ಯೋಯೋಕ 2008, ದಿನಾಂಕ:4.4.2008.

2 ಸನ್ಮಾನ್ಯ ಮುಖ್ಯಮಂತ್ರಿಯವರ ಟಿಪ್ಪಣಿ ಪತ್ರ ಸಂಖ್ಯೆ:ಮುಮಂ:468:ಆಕಾ:2008–09, ದಿನಾಂಕ: 16.8.2008.

**ಪ್ರಸ್ತಾವನೆ:**

(1) ಮೇಲೆ. ಓದಲಾದ (1)ರ ಸರ್ಕಾರದ ಆದೇಶದಲ್ಲಿ 2008–09ನೇ ಸಾಲಿಗೆ ಮುಂದುವರೆದ ಕಾರ್ಯಕ್ರಮವಾದ ಪುಸ್ತಕಾಲಯ ಮತ್ತು ಪ್ರಾಥಮಿಕ ಶಾಲೆಗಳ ಸುಧಾರಣೆ ಮತ್ತು ಪ್ರಧಾನಮಂತ್ರಿ ಗ್ರಾಮೋದಯ ಯೋಜನೆಯ ಲೆಕ್ಕಶೀರ್ಷಿಕೆ:2202–01–800–1–13–059 ಯಡಿ 600.00ಲಕ್ಷ ರೂಗಳನ್ನು ಒದಗಿಸಿ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಅನುಮೋದನೆ ನೀಡಿದೆ.

(2) ಮೇಲೆ ಓದಲಾದ (2) ರ ಪತ್ರದಲ್ಲಿ ಸನ್ಮಾನ್ಯ ಮುಖ್ಯಮಂತ್ರಿಯರು, "ಉದಯಭಾನು ಕಲಾ ಸಂಘವು" 1965 ರಲ್ಲಿ ಸ್ಥಾಪನೆಗೊಂಡು ಸಾಹಿತ್ಯಕ, ಸಾಂಸ್ಕೃತಿಕ, ಸಾಮಾಜಿಕ, ನಗರ ಕಲ್ಯಾಣ ಶೈಕ್ಷಣಿಕ, ವೈದ್ಯಕೀಯ ಹಾಗೂ ಕ್ರೀಡಾ–ಯುವಜನ ಕಲ್ಯಾಣ" ಮುಂತಾದ ಕ್ಷೇತ್ರಗಳಲ್ಲಿ ಗುರುತಿಸಿಕೊಂಡು ಅಬ್ಬರ ಆಡಂಬರವಿಲ್ಲದೇ ಸಕಾಲಿಕವೂ ಸಾಮಾಜಿಕ ಸ್ವಾಸ್ಥ್ಯಕ್ಕೆ ಪೂಕರವೂ ,ಆದ ಚಟುವಟಿಕೆಗಳನ್ನು ನಡೆಸಿಕೊಂಡು ಬರುತ್ತಿರುವುದಾಗಿ ತಿಳಿದು ಬಂದಿರುತ್ತದೆ ಸಾಹಿತ್ಯ ಸಂಸ್ಕೃತಿ ಮತು ಸಮಾಜ ಸೇವೆಯ ಕ್ಷೇತ್ರಗಳಲ್ಲಿ ಹೆಚ್ಚಿನ ಸೇವೆ ಸಲ್ಲಿಸುತ್ತಿರುವ "ಉದಯಭಾನು ಕಲಾ ಸಂಘವು" ನಾಲ್ಕು ದಶಕಗಳ ಸಾಧನಾ ಉತ್ಸವದ ಸಂದರ್ಭದಲ್ಲಿ, ಬೆಂಗಳೂರಿನ ಸಮಗ್ರ ಪರಿಚಯ ನೀಡುವ ಸರ್ವಕಾಲಿಕ ಉಪಯುಕ್ತ ಉದ್ಗ್ರಂಥ "ಬೆಂಗಳೂರು ದರ್ಶನ' 'ಎಂಬ ಗ್ರಂಥವನ್ನು ಪ್ರಕಟಿಸಿದ್ದು., ಸದರಿ ಗ್ರಂಥದ 5000 ಪ್ರತಿಗಳನ್ನು ಜನಪ್ರತಿನಿಧಿಗಳ, ಸಚಿವಾಲಯದ ಆಡಳಿತಗಾರರ ಹಾಗೂ ಗ್ರಂಥಾಲಯಗಳ ಉಪಯೋಗಕ್ಕಾಗಿ ಖರೀದಿಸುವಂತೆ ಆದೇಶಿಸಿರುತ್ತಾರೆ.

(3) ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ:206 :ಯೋಸಕ 2008, ಬೆಂಗಳೂರು, ದಿನಾಂಕ:30ನೇ ಜನವರಿ 2009**

**[ಇಡಿ:8:ಸ್ವಿಮರ (ಯುನಿಕ್) 2009, ದಿನಾಂಕ:30–1–2009]**

(4) ಜನಪ್ರತಿನಿಧಿಗಳ, ಸಚಿವಾಲಯದ ಆಡಳಿತಗಾರರ ಹಾಗೂ ಗ್ರಂಥಾಲಯಗಳ ಉಪಯೋಗಕ್ಕಾಗಿ, ಬೆಂಗಳೂರಿನ "ಉದಯಭಾನು ಕಲಾ ಸಂಘವು" ಹೊರತಂದಿರುವ "ಬೆಂಗಳೂರು ದರ್ಶನ" ಎಂಬ ಗ್ರಂಥದ ಒಂದು ಸಾವಿರ ಪ್ರತಿಗಳನ್ನು ಪ್ರತಿ ಪ್ರತಿಗೆ 1000.00 ರೂಗಳ ಮಿತಿಯಲ್ಲಿ [ಒಂದು ಸಾವಿರ ರೂಪಾಯಿಗಳು ಮಾತ್ರ] ಖರೀದಿಸಿ ಸರಬರಾಜು ಮಾಡಲು ಹಾಗೂ ಸದರ ಸಂಸ್ಥೆಗೆ ಒಂದು ಬಾರಿಯ ಸಹಾಯಾನುದಾನವಾಗಿ 5.00 ಲಕ್ಷರೂಗಳನ್ನು [ಐದು ಲಕ್ಷರೂಪಾಯಿಗಳು ಮಾತ್ರ] ಬಿಡುಗಡೆ ಮಾಡಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ರವರಿಗೆ ಸರ್ಕಾರವು ಅನುಮತಿಸಿದೆ.

(5) ಮೇಲ್ಕಂಡ ಮೊತ್ತವನ್ನು ಲೇಖನ ಸಾಮಗ್ರಿ ಮತ್ತು ಪುಸ್ತಕಗಳ ಸಗಟು ಖರೀದಿಗಾಗಿ [ಹೊಸ ಶಾಲೆಗಳೂ ಸೇರಿ] 2008–09ನೇ ಸಾಲಿನ ಲೆಕ್ಕಶೀರ್ಷಿಕೆ–2202–01–800–1–13–059ಯಡಿ ಒದಗಿಸಲಾಗಿರುವ 50.00ಲಕ್ಷರೂಗಳ ಮಿತಿಯೊಳಗೆ [ಐವತ್ತು ಲಕ್ಷ ರೂಪಾಯಿ ಗಳು ಮಾತ್ರ] ಭರಿಸತಕ್ಕದ್ದು.

(6) ಈ ಆದೇಶವನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ ಆಇ/1109/ವೆಚ್ಚ–8/08, ದಿನಾಂಕ:19.12.2008ರಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಐ.ಎಫ್. ಮಾಗಿ**

ಪಿ.ಆರ್. 543 ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ, ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ

(ಯೋಜನೆ)

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ವಿಷಯ:** ಶ್ರೀ ಎಂ.ಎಂ. ಪೂಣಚ್ಚ, ನಿವೃತ್ತ ಮಾಲಿ ಇವರು ಕಾಣೆಯಾಗಿದ್ದು, ಅವರ ಪತ್ನಿ ಶ್ರೀಮತಿ ಎಂ.ಎಂ. ದೇವಕಿ ಇವರಿಗೆ ಬಾಕಿ ಇರುವ ನಿವೃತ್ತಿ ವೇತನ ಹಾಗೂ ಕುಟುಂಬ ನಿವೃತ್ತಿ ವೇತನ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1 ಅಧಿಕೃತ ಜ್ಞಾಪನ ಸಂಖ್ಯೆ:ಆಇ (ವಿಶೇಷ )11 ಕುವಿವೇ 87, ದಿನಾಂಕ:21.3.1988.

2 ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರ ಪತ್ರ ಸಂಖ್ಯೆ:ಸಿಬ್ಬಂದಿ(2)/ಸಂಸಿ/ಕುವಿವೇ/36/2006–07, ದಿನಾಂಕ:22.11.2007, 16.1.2008 ಮತ್ತು 4.11.2008.

**ಪ್ರಸ್ತಾವನೆ:**

ಶ್ರೀ ಎಂ.ಎಂ. ಪೂಣಚ್ಚ, ನಿವೃತ್ತಿ ಮಾಲಿ ಇವರು ದಿನಾಂಕ:2.9.2000 ರಿಂದ ಕಾಣೆಯಾಗಿರುವುದರಿಂದ ಸದರಿ ಮಾಹೆಯಿಂದ ಬಾಕಿ ಇರುವ ಕುಟುಂಬ ನಿವೃತ್ತಿ ವೇತನ ಮಂಜೂರು ಮಾಡುವಂತೆ ನಿವೃತ್ತಿ ನೌಕರರ ಪತ್ನಿಯಾದ ಶ್ರೀಮತಿ ಎಂ.ಎಂ. ದೇವಕಿ ಇವರು ರೇಷ್ಮೆ ಉಪ ನಿರ್ದೇಶಕರು, ಜಿಲ್ಲಾ ಪಂಚಾಯತ್, ಮಡಿಕೇರಿ ಇವರನ್ನು ಕೋರಿರುವುದರಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದ ಪ್ರಕಾರ ಕಾಣೆಯಾದ ನೌಕರರ ಕುಟುಂಬಕ್ಕೆ ಲಭ್ಯವಾಗಲಿರುವ ಕುಟುಂಬ ವೇತನ ಪಾವತಿಸಲು ಮಂಜೂರಾತಿ ನೀಡುವಂತೆ ಮೇಲೆ ಓದಲಾದ ಕ್ರಮಸಂಖ್ಯೆ (2)ರ ಪತ್ರಗಳಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಸರ್ಕಾರವನ್ನು ಕೋರಿರುತ್ತಾರೆ. ಕಾಣೆಯಾಗಿರುವ ನೌಕರರಾದ ಶ್ರೀ ಎಂ.ಎಂ. ಪೂಣಚ್ಚ ಇವರು ರೇಷ್ಮೆ ಕೃಷಿ ಕ್ಷೇತ್ರ, ಕೂಡಿಗೆಯಲ್ಲಿ ಕಾರ್ಯನಿರ್ವಹಿಸಿ ದಿ:31.12.1997ರಲ್ಲಿ ನಿವೃತ್ತಿ ಹೊಂದಿದ್ದು, ದಿನಾಂಕ:2.9.2000ರಂದು ತನ್ನ ಮಗನ ಮನೆಯಿಂದ ಮನೆಗೆ ಹೋಗುವುದಾಗಿ ಹೇಳಿ ಹೋದವರು ವಾಪಸ್ಸು ಮನೆಗೆ ಬರದ ಕಾರಣ ಅವರ ಮಗ ಸತೀಶ್ ರವರು ಕುಶಾಲನಗರ ಪೊಲೀಸ್ ಠಾಣೆಯಲ್ಲಿ ದೂರು ದಾಖಲಿಸಿದ್ದು, ಸದರಿ ನೌಕರರ ಪತ್ತೆಗಾಗಿ ಪ್ರಕಟಣೆ ಹೊರಡಿಸಿದ್ದು, ಕಾಣೆಯಾದ ವ್ಯಕ್ತಿ ಪತ್ತೆಯಾಗಿರುವುದಿಲ್ಲವೆಂದು ಕುಶಾಲನಗರ ಪೊಲೀಸ್ ಠಾಣೆಯಿಂದ ದಿ:7.6.2007ರಂದು ವರದಿ ನೀಡಲಾಗಿರುತ್ತದೆ. ಕಾಣೆಯಾಗಿರುವ ನೌಕರರ ಪತ್ನಿಯು ಕುಟುಂಬ ನಿವೃತ್ತಿ ವೇತನವನ್ನು ಮಂಜೂರು ಮಾಡುವಂತೆ ಕೋರಿ ಮನವಿ ಸಲ್ಲಿಸಿದ್ದು ಮೇಲೆ ಓದಲಾದ ಕ್ರಮಸಂಖ್ಯೆ (1)ರ ಆದೇಶದಲ್ಲಿಯ ಎಲ್ಲಾ ಷರತ್ತುಗಳನ್ನು ಪೂರೈಸಿರುವುದನ್ನು ದೃಢೀಕರಿಸಿ ಶ್ರೀ ಎಂ.ಎಂ. ಪೂಣಚ್ಚ ಇವರ ಪತ್ನಿಯಾದ ಶ್ರೀಮತಿ ದೇವಕಿ ಇವರಿಗೆ ಲಭ್ಯವಾಗಬೇಕಾದ ಕುಟುಂಬ ವೇತನ ನಿವೃತ್ತಿ ಸೌಲಭ್ಯವನ್ನು ದಿನಾಂಕ:2.9.2000ರಿಂದ ಲೆಕ್ಕ ಹಾಕಿ ರೂ. 2,00,681/– ಗಳನ್ನು ಪಾವತಿಸಬೇಕಾಗಿದೆ ಎಂದು ತಿಳಿಸಿ ಇದನ್ನು ಪಾವತಿಸಲು ಮಂಜೂರಾತಿ ನೀಡುವಂತೆ ರೇಷ್ಮೆ ಕೃಷಿ ಆಯುಕ್ತರು ಸರ್ಕಾರವನ್ನು ಕೋರಿರುವ ಹಿನ್ನಲೆಯಲ್ಲಿ ಕಾಣೆಯಾಗಿರುವ ನೌಕರರ ಪತ್ನಿಯಾದ ಶ್ರೀಮತಿ ಎಂ.ಎಂ. ದೇವಕಿ ಇವರಿಗೆ ಕುಟುಂಬ ನಿವೃತ್ತಿ ವೇತನ ಮಂಜೂರು ಮಾಡುವುದಕ್ಕೆ ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ವಾಕೈ 179 ರೇಇವಿ 2007, ಬೆಂಗಳೂರು, ದಿನಾಂಕ:3ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ನೇಮಕಾತಿ ಪ್ರಾಧಿಕಾರವು, ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ:ಆಇ (ವಿಶೇಷ) 11 ಕುವಿವೇ 87, ದಿನಾಂಕ:21.3.1988ರಲ್ಲಿ ವಿಧಿಸಿರುವ ಮಾರ್ಗಸೂಚಿಗಳನ್ನು ಕಟ್ಟುನಿಟ್ಟಾಗಿ ಪಾಲಿಸಿರುವುದನ್ನು ಖಾತ್ರಿ ಪಡಿಸಿಕೊಂಡು ನಂತರ, ಶ್ರೀ ಎಂ.ಎಂ ಪೂಣಚ್ಚ, ನಿವೃತ್ತಿ ಮಾಲಿ ಇವರ ಪತ್ನಿಯಾದ ಶ್ರೀಮತಿ ಎಂ.ಎಂ. ದೇವಕಿ ಇವರಿಗೆ ದಿನಾಂಕ:2–9–2000 ರಿಂದ ಅನ್ವಯವಾಗುವಂತೆ ನಿಯಮಗಳನ್ವಯ ನೀಡಬಹುದಾದ ಕುಟುಂಬ ನಿವೃತ್ತಿ ವೇತನ ನೀಡುವುದಕ್ಕೆ ಮಂಜೂರಾತಿ ನೀಡಲಾಗಿದೆ.

ಆರ್ಥಿಕ ಇಲಾಖೆಯ ಅಧಿಕೃತ ಜ್ಞಾಪನ ಸಂಖ್ಯೆ: ಆಇ (ವಿಶೇಷ) 11 ಕುವಿವೇ 97, ದಿನಾಂಕ:21.3.1988ರ ಕಂಡಿಕೆ 6(ಊ) ರನ್ವಯ ವಿಮಾ ಸಂರಕ್ಷಣಾ ಹಣವನ್ನು ನಾಮನಿರ್ದೇಶಿತರಿಗೆ ಅಥವಾ ಕಾನೂನುಬದ್ದ ವಾರಸುದಾರರಿಗೆ ಕಾಣೆಯಾದ ತಿಂಗಳಿಂದ ಹಿಡಿದು ಏಳು ವರ್ಷಗಳ ನಂತರ ಸಂದಾಯ ಮಾಡಬಹುದು, ಪರಂತು ಹಕ್ಕುದಾರರು ಕ್ರಮಬದ್ಧವಾದ ಮತ್ತು ನಿರ್ವಿವಾದ ಪುರಾವೆಯನ್ನು ಕಾಣೆಯಾದ ನೌಕರನು ಮೃತ ಪ್ರಮಾಣ ಪತ್ರವನ್ನೂ ಹಾಜರುಪಡಿಸಬೇಕು ಅಥವಾ ಭಾರತೀಯ ಸಾಕ್ಷಿ ಕಾಯಿದೆಯ 108ನೇ ವಿಧಿಯ ಪ್ರಕಾರ ಕಾಣೆಯಾದ ನೌಕರನು (ಳು) ಮೃತನಾದನೆಂದು ಭಾವಿಸಿ, ಇದರ ಬಗ್ಗೆ ಕೋರ್ಟಿನಿಂದ ಪಡೆದ ಡಿಕ್ರಿಯನ್ನು ಹಾಜರು ಪಡಿಸಿದ ನಂತರ ವಿಮಾ ಹಣವನ್ನು ಸಂದಾಯ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 544

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ:** ತಮಿಳುನಾಡು ಪತ್ರಾಗಾರದಲ್ಲಿರುವ ಕರ್ನಾಟಕಕ್ಕೆ ಸಂಬಂಧಪಟ್ಟ ದಾಖಲೆಗಳ/ ವರ್ತಮಾನ ಪತ್ರಿಕೆಗಳ ಸ್ಕ್ಯಾನಿಂಗ್ ಮಾಡಿದ ವೆಚ್ಚವನ್ನು ಪಾವತಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** 1 ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಅವರ ಪತ್ರ ಸಂಖ್ಯೆ:ಎಆರ್ ಎಸ್ 09 ಎನ್ ಎಐ 2006 ದಿ:19.7.08.

2 ಸಂಕ ಇ 10 ರಾಪಸ 2006, ದಿನಾಂಕ:17.8.2006.

**ಪ್ರಸ್ತಾವನೆ:**

ಮೇಲೆ ಓದಲಾದ ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಅವರ ದಿನಾಂಕ: 19.7.2008ರ ಪತ್ರದಲ್ಲಿ ಮೇಲೆ (2) ಓದಲಾದ ಸರ್ಕಾರದ ಆದೇಶಾನುಸಾರ ತಮಿಳುನಾಡು ಪತ್ರಾಗಾರದಲ್ಲಿರುವ ಐತಿಹಾಸಿಕ ಮಹತ್ವದ ದಾಖಲೆಗಳ ಪೂರ್ವಭಾವಿ ಪರಿವೀಕ್ಷಣೆ ನಡೆಸಿ ಕರ್ನಾಟಕಕ್ಕೆ ಸಂಬಂಧಿಸಿದ ದಾಖಲೆಗಳ/ವರ್ತಮಾನ ಪತ್ರಿಕೆಗಳನ್ನು ಸ್ಕ್ಯಾನಿಂಗ್ ಮಾಡಿಸಿ ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಗೆ ಪಡೆಯಲಾಗಿದೆಯೆಂದು ಇದಕ್ಕಾಗಿ ತಗಲಿದ ವೆಚ್ಚ ರೂ. 1,92,885–00ನ್ನು ತಮಿಳುನಾಡು ಪತ್ರಾಗಾರ ಇಲಾಖೆಗೆ ಪಾವತಿಸಬೇಕಾಗಿರುವುದರಿಂದ ಸರ್ಕಾರದ ಅನುಮತಿ ನೀಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಕಸಂವಾಪ್ರ 12 ರಾಪಸ 2008, ಬೆಂಗಳೂರು, ದಿನಾಂಕ:5ನೇ ಫೆಬ್ರವರಿ 2009**

ತಮಿಳುನಾಡು ಪತ್ರಾಗಾರ ಇಲಾಖೆಯಿಂದ ಕರ್ನಾಟಕಕ್ಕೆ ಸಂಬಂಧಿಸಿದ ದಾಖಲೆಗಳ/ವರ್ತಮಾನ ಪತ್ರಿಕೆಗಳ/ ವರ್ತಮಾನ ಪತ್ರಿಕೆಗಳ ಸ್ಕ್ಯಾನಿಂಗ್ ಮಾಡಿಸಿದ ವೆಚ್ಚ ರೂ 1,92,.885–00(ರೂ. ಒಂದು ಲಕ್ಷದ ತೊಂಬತ್ತೇರಡು ಸಾವಿರದ ಎಂಟುನೂರ ಎಂಬತ್ತೈದು ಮಾತ್ರ) ಗಳನ್ನು ತಮಿಳುನಾಡು ಪತ್ರಾಗಾರ ಇಲಾಖೆಗೆ ಪಾವತಿಸಲು ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಇವರಿಗೆ ಸರ್ಕಾರ ಅನುಮತಿ ನೀಡಿದೆ.

ಈ ವೆಚ್ಚವನ್ನು 2008–09ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2205–00–104–01–051 ಸಾಮಾನ್ಯ ವೆಚ್ಚಗಳು (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2006 ದಿನಾಂಕ:10–7–1996ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 546

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ,
ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ, (ಆಡಳಿತ ಕನ್ನಡ)

## ವಾಣಿಜ್ಯ ಮತು ಕೈಗಾರಿಕಾ ಸಚಿವಾಲಯ

**ವಿಷಯ:** ಶ್ರೀ ಟಿ.ಎಸ್. ಮಲ್ಲಿಕಾರ್ಜುನ, ಸಹಾಯಕ ನಿರ್ದೇಶಕರು, (ಅಮಾನತ್ತು) ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಪುರ, ಧಾರವಾಡ ರವರನ್ನು ಅಮಾನತ್ತಿನಿಂದ ತೆರವುಗೊಳಿಸಿ ಸೇವೆಗೆ ಪುನರ್ ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :** 1 ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರದ ಸಂಖ್ಯೆ:ಲೋಕ್/ಐಎನ್‌ವಿ(ಜಿ)/ಎಲ್.22/ಸಿಆರ್–3/2008 ಡಿಹೆಚ್ ಆರ್ ದಿನಾಂಕ:6.3.2008.

2 ಕೈಗಾರಿಕಾಭಿವೃದ್ದಿ ಆಯುಕ್ತರ ಪತ್ರ ಸಂಖ್ಯೆ:ಕೈವಾಇ/ನಿರೀ–2/ಲೋಕಾ/2008–09 ದಿ:2.5.2008.

3 ಸರ್ಕಾರದ ಆದೇಶ ಸಂಖ್ಯೆ:ವಾಕ್ಕೈ 85 ಕೈಸೇವಿ 2008, ದಿ:14.5.2008.

4 ಕೈಗಾರಿಕಾಭಿವೃದ್ದಿ ಆಯುಕ್ತರ ಪತ್ರ ಸಂಖ್ಯೆ:ಆಡಳಿತ/ಸಿಬ್ಬಂದಿ/ಇ4/71/2008–09 ದಿ:8.7.2008.

5 ಸರ್ಕಾರದ ಅಧಿಸೂಚನೆ ಸಂಖ್ಯೆ:ವಾಕ್ಕೈ 85 ಕೈಸೇವಿ 2008, ದಿ:8.8.2008

6 ಶ್ರೀ ಟಿ.ಎಸ್. ಮಲ್ಲಿಕಾರ್ಜುನ ಸಹಾಯಕ ನಿರ್ದೇಶಕರು, (ಅಮಾನತ್ತು) ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಪುರ, ಧಾರವಾಡ ಇವರ ಮನವಿ ದಿ:6.9.2008

7 ಅಪರ ಪೊಲೀಸ್ ಮಾಹಾ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಬೆಂಗಳೂರು, ಇವರ ಪತ್ರದ ಸಂಖ್ಯೆ:ಲೋಕ್/.ಐಎನ್‌ವಿ(ಜಿ)/ಎಲ್.22/ಸಿಆರ್–3/2008/ಧಾರವಾಡ ದಿನಾಂಕ: 25.11.2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ(1)ರಲ್ಲಿ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಆರೋಪಿತ ಸರ್ಕಾರಿ ಅಧಿಕಾರಿ, ಶ್ರೀ ಟಿ.,ಎಸ್. ಮಲ್ಲಿಕಾರ್ಜುನ ಸಹಾಯಕ ನಿರ್ದೇಶಕರು, (ಅಮಾನತ್ತು) ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಪುರ, ಧಾರವಾಡ ರವರು ರೂ. 2,000/–ಗಳ ಲಂಚವನ್ನು ಫಿರ್ಯಾದುದಾರರಿಂದ ಸ್ವೀಕರಿಸಿ ಲೋಕಾಯುಕ್ತ ಪೊಲೀಸರ ಬಲೆಗೆ ಸಿಕ್ಕಿಬಿದ್ದಿದ್ದರಿಂದ ಅಮಾನತ್ತಿನಲ್ಲಿಡಬೇಕೆಂದು ಹಾಗೂ ಅವರ ಲೀನ್ (ಸ್ಥಾನ)ವನ್ನು ಬೇರೆ ಕಡೆಗೆ ವರ್ಗಾಯಿಸಬೇಕೆಂದು ಸರ್ಕಾರಕ್ಕೆ ಕೋರಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಶ್ರೀ ಟಿ.ಎಸ್ ಮಲ್ಲಿಕಾರ್ಜುನ, ಸಹಾಯಕ ನಿರ್ದೇಶಕರು ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಪುರ, ಧಾರವಾಡ ರವರು ದಿ:4.3.2008ರಂದು ಲಂಚ ಸ್ವೀಕರಿಸುತ್ತಿದ್ದಾಗ, ಲಂಚದ ಹಣದೊಡನೆ ಲೋಕಾಯುಕ್ತರ ಬಲೆಗೆ ಸಿಕ್ಕಿ ಬಿದ್ದಿದ್ದರಿಂದ ದಸ್ತಗಿರಿಯಾದ ದಿ:4.3.2008ರಿಂದಲೇ ಅಧಿಕಾರಿಯನ್ನು ಅಮಾನತ್ತಿನಲ್ಲಿಟ್ಟು, ಅವರ ಲೀನ್ (ಸ್ಥಾನ)ನ್ನು ಬೇರೆ ಕಡೆಗೆ ವರ್ಗಾಯಿಸಲು ಕೈಗಾರಿಕಾಭಿವೃದ್ಧಿ ಆಯುಕ್ತರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ಆಪಾದಿತ ಸರ್ಕಾರಿ ಅಧಿಕಾರಿಯಾದ ಶ್ರೀ ಟಿ.ಎಸ್. ಮಲ್ಲಿಕಾರ್ಜುನ, ಸಹಾಯಕ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ ರಾಯಪುರ, ಧಾರವಾಡ ರವರು ಫಿರ್ಯಾದುದಾರರಿಂದ ರೂ. 2,000/– (ರೂಪಾಯಿ ಎರಡು ಸಾವಿರ ಮಾತ್ರ) ಗಳ ಲಂಚದ ಹಣವನ್ನು ಸ್ವೀಕರಿಸಿರುವುದು ಮೇಲುನೋಟಕ್ಕೆ ಸಾಬೀತಾಗಿರುವುದರಿಂದ ಇವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ/ಇಲಾಖಾ ವಿಚಾರಣೆ ಕಾಯ್ದಿರಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(1)(ಎ)ರ ಅನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರಲ್ಲಿ ಕೈಗಾರಿಕಾಭಿವೃದ್ಧಿ ಆಯುಕ್ತರು, ಶ್ರೀ ಟಿ.ಎಸ್. ಮಲ್ಲಿಕಾರ್ಜುನ, ಸಹಾಯಕ ನಿರ್ದೇಶಕರು, (ಅಮಾನತ್ತು) ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಪುರ, ಧಾರವಾಡ, ಇವರ ಲೀನ್ (ಸ್ಥಾನ)ನ್ನು ಧಾರವಾಡದಿಂದ ಬೇರೆಡೆಗೆ ವರ್ಗಾಯಿಸಲು ಲೋಕಾಯುಕ್ತರ ಶಿಫಾರಸ್ಸಿನಂತೆ ಜಿಲ್ಲಾ ಕೈಗಾರಿಕಾ ಕೇಂದ್ರ ಹಾವೇರಿ/ಗದಗ್/ಬೆಳಗಾವಿಗಳಲ್ಲಿ ಸಹಾಯಕ ನಿರ್ದೇಶಕರ ಹುದ್ದೆಗಳು ಖಾಲಿ ಇದ್ದು, ಇವುಗಳಲ್ಲಿ ಯಾವುದಾದರೊಂದು ಹುದ್ದೆಗೆ ಲೀನ್‌ನ್ನು ವರ್ಗಾಯಿಸಿ ಸಚಿವಾಲಯದ ಹಂತದಲ್ಲಿ ಆದೇಶ ಹೊರಡಿಸಲು ಕೋರಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರಲ್ಲಿ ಶ್ರೀ ಟಿ.ಎಸ್ .ಮಲ್ಲಿಕಾರ್ಜುನ, ಸಹಾಯಕ ನಿರ್ದೇಶಕರು, (ಅಮಾನತ್ತು) ಜಿಲ್ಲಾ ಕೈಗಾರಿಕಾ ಕೇಂದ್ರ, ರಾಯಪುರ, ಧಾರವಾಡ, ಇವರ ಲೀನ್ (ಸ್ಥಾನ)ನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸಹಾಯಕ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ಹಾವೇರಿ ಇಲ್ಲಿ ಖಾಲಿಯಿರುವ ಹುದ್ದೆಗೆ ಸ್ಥಳಾಂತರಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರಲ್ಲಿ ಶ್ರೀ ಟಿ.ಎಸ್. ಮಲ್ಲಿಕಾರ್ಜುನ ಸಹಾಯಕ ನಿರ್ದೇಶಕರು (ಅಮಾನತ್ತು) ಇವರು ಲೋಕಾಯುಕ್ತ ತನಿಖೆ ಕಾಯ್ದಿರಿಸಿ ಮರು ನೇಮಕ ಮಾಡಿ ಕರ್ತವ್ಯಕ್ಕೆ ನಿಯೋಜಿಸಬೇಕೆಂದು ಸರ್ಕಾರಕ್ಕೆ ಕೋರಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (7)ರಲ್ಲಿ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಶ್ರೀ ಟಿ.ಎಸ್. ಮಲ್ಲಿಕಾರ್ಜುನ, ಸಹಾಯಕ ನಿರ್ದೇಶಕರು, ರವರನ್ನು ಅಮಾನತ್ತಿನಿಂದ ಬಿಡುಗಡೆ ಗೊಳಿಸುವ ಬಗ್ಗೆ ಸರ್ಕಾರಕ್ಕೆ ಸೂಕ್ತವೆನಿಸಿದ ಕ್ರಮ ಕೈಗೊಳ್ಳುವಂತೆ ತಿಳಿಸಿದ್ದಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ವಾಕೈ 85 ಕೈಸೇವಿ 2008, ಬೆಂಗಳೂರು, ದಿನಾಂಕ:7ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಈ ಪ್ರಕಣವನ್ನು ಸರ್ಕಾರವು ಪರಿಶೀಲಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10(5)(ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಟಿ.ಎಸ್. ಮಲ್ಲಿಕಾರ್ಜುನ, ಹಿಂದಿನ ಸಹಾಯಕ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ ರಾಯಪುರ, ಧಾರವಾಡ, ಇವರ ಮೇಲಿನ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ/ಕ್ರಿಮಿನಲ್ ಮೊಕದ್ದಮೆ ಶಿಸ್ತು ಕ್ರಮಗಳನ್ನು ಕಾಯ್ದಿರಿಸಿ ಇವರ ಅಮಾನತ್ತನ್ನು ತಕ್ಷಣದಿಂದ ಜಾರಿಗೆ ಬರುವಂತೆ ತೆರವುಗೊಳಿಸಿ ಸೇವೆಗೆ ಪುನರ್ ಸ್ಥಾಪಿಸಿದೆ.

ಅಮಾನತ್ತು ತೆರವುಗೊಳಿಸಿ ನಂತರ, ಶ್ರೀ ಟಿ.ಎಸ್.ಮಲ್ಲಿಕಾರ್ಜುನ, ಸಹಾಯಕ ನಿರ್ದೇಶಕರು, (ಅಮಾನತ್ತು) ಇವರನ್ನು ಸಹಾಯಕ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ ಬೆಳಗಾಂ, ಇಲ್ಲಿನ ಖಾಲಿ ಹುದ್ದೆಗೆ ಮುಂದಿನ ಆದೇಶದವರೆಗೆ ಸ್ಥಳ ನಿಯುಕ್ತಿಗೊಳಿಸಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.549

**ಬಿ.ಸಿ. ಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು)

**ವಿಷಯ:** ಶ್ರೀ ಕೆ. ಸಿದ್ದರಾಜಶೆಟ್ಟಿ, ರೇಷ್ಮೆ ಪ್ರವರ್ತಕರು (ಸಂ) ಇವರು ಕಾಣೆಯಾಗಿದ್ದು, ಈ ನೌಕರರ ಕುಟುಂಬ ವೇತನ ಮತ್ತಿತರ ಸೌಲಭ್ಯಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1 ರೇಷ್ಮೆ ಕೃಷಿ ಅಭಿವೃದ್ದಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪತ್ರ ಸಂಖ್ಯೆ:ಸಿಬ್ಬಂದಿ3/ಶಿಸ್ತು/ರೇಪ್ರವ/11/04–05, ದಿ:27.1.2005, 14.3.2008 ಮತ್ತು 10.10.2008.

2 ಅಧಿಕೃತ ಜ್ಞಾಪನ ಸಂಖ್ಯೆ:ಆಇ (ವಿಶೇಷ) 11 ಕುವಿವೇ 87, ದಿನಾಂಕ:21.3.1988

**ಪ್ರಸ್ತಾವನೆ:**

ಶ್ರೀ ಕೆ. ಸಿದ್ದರಾಜಶೆಟ್ಟಿ, ರೇಷ್ಮೆ ಪ್ರವರ್ತಕರು (ಸಂಖ್ಯಾತಿರಿಕ್ತ), ತಾಂತ್ರಿಕ ಸೇವಾ ಕೇಂದ್ರ, ಕಾಮಕೆರೆ ಇವರು ದಿನಾಂಕ:10.9.2001ರಿಂದ ಕಾಣೆಯಾಗಿರುತ್ತಾರೆ. ರೇಷ್ಮೆ ಉಪನಿರ್ದೇಶಕರು, ಜಿಲ್ಲಾ ಪಂಚಾಯತ್, ಚಾಮರಾಜನಗರ ಇವರು ವರದಿ ನೀಡಿ ಕಾಣೆಯಾದ ಸರ್ಕಾರಿ ನೌಕರರ ಕುಟುಂಬಕ್ಕೆ ಕುಂಟುಂಬ ವೇತನ ಮತ್ತು ಇತರೆ ಸೌಲಭ್ಯಗಳನ್ನು ಮಂಜೂರು ಮಾಡುವಂತೆ ಕ್ರಮ ಕೈಗೊಳ್ಳಲು ಕೋರಿರುತ್ತಾರೆ ರೇಷ್ಮೆ ಉಪನಿರ್ದೇಶಕರು, ಚಾಮರಾಜನಗರ ಇವರು ಸಲ್ಲಿಸಿರುವ ವರದಿಯನ್ವಯ ಶ್ರೀ ಕೆ. ಸಿದ್ದರಾಜಶೆಟ್ಟಿ ಇವರು ದಿ:10.9.2001 ರಿಂದ ಕಛೇರಿ ಕೆಲಸಕ್ಕೆ ಹಾಜರಾಗದಿರುವುದು ದಾಖಲೆಗಳಿಂದ ದೃಢಪಡುವುದಾಗಿ ತಿಳಿಸಲಾಗಿದೆ. ಕಾಣೆಯಾಗಿರುವ ನೌಕರರ ಪತ್ನಿ ದಿನಾಂಕ:17.9.2001ರಲ್ಲಿ ಕೊಳ್ಳೇಗಾಲ ಪಟ್ಟಣ, ಪೊಲೀಸ್ ಠಾಣೆಯಲ್ಲಿ ದೂರು ದಾಖಲಿಸಿರುತ್ತಾರೆ. ನೌಕರರು ಕೆಲಸಕ್ಕೆ ಬಾರದಿರುವುದರಿಂದ ಮೇಲಾಧಿಕಾರಿಗಳಾದ ರೇಷ್ಮೆ ವಿಸ್ತರಣಾಧಿಕಾರಿಗಳು, ತಾಂತ್ರಿಕ ಸೇವಾ ಕೇಂದ್ರ ಕಾಮಗೆರೆ ಇವರು ಕೆಲಸಕ್ಕೆ ಹಾಜರಾಗಲು ಸೂಚಿಸಿ ಜ್ಞಾಪನ ಕಳುಹಿಸಿದಾಗಲೂ ಪ್ರತ್ಯುತ್ತರ ಬಾರದಿರುವುದರಿಂದ ನೌಕರರ ಗೈರು ಹಾಜರಿಗೆ ಸಂಬಂಧಿಸಿದಂತೆ ಶಿಸ್ತು ಕ್ರಮ ಜರುಗಿಸಲು ರೇಷ್ಮೆ ಉಪನಿರ್ದೇಶಕರಿಗೆ ವರದಿ ಮಾಡಿರುತ್ತಾರೆ .ಶ್ರೀ ಕೆ. ಸಿದ್ದರಾಜಶೆಟ್ಟಿ ಇವರು ಕಾಣೆಯಾಗಿರುವ ಬಗ್ಗೆ ಅವರ ತಾಯಿಯಾದ ಶ್ರೀಮತಿ ಸಿದ್ದಮ್ಮರವರು ರೇಷ್ಮೆ ವಿಸ್ತರಣಾಧಿಕಾರಿಗಳು, ತಾಂತ್ರಿಕ ಸೇವಾ ಕೇಂದ್ರ, ಕಾಮಗೆರೆ ಇವರಿಗೆ 2 ಮನವಿಗಳನ್ನು ನೀಡಿ ತಮ್ಮ ಮಗ ಕಾಣೆಯಾಗಿರುವ ಬಗ್ಗೆ ತಿಳಿಸಿರುತ್ತಾರೆ. ರೇಷ್ಮೆ ವಿಸ್ತರಣಾಧಿಕಾರಿ ಹಾಗೂ ರೇಷ್ಮೆ ನಿರೀಕ್ಷಕರು ನಡೆಸಿರುವ ಮಹಜರಿನಂತೆ ಶ್ರೀ ಕೆ. ಸಿದ್ದರಾಜಶೆಟ್ಟಿ ಇವರ ಇರುವಿಕೆಯು ಪತ್ತೆಯಾಗಿರುವುದಿಲ್ಲ, ಮೈಸೂರಿನ ದಿನಪತ್ರಿಕೆಯಾದ ಆಂದೋಲನದಲ್ಲಿ ನೌಕರರ ನಿಗೂಡ ಕಣ್ಮರೆಯಾದ ಬಗ್ಗೆ ವರದಿ ಬಂದಿರುತ್ತದೆ. ಇಲಾಖೆಯಿಂದ ಶಿಸ್ತು ಕ್ರಮ ಜರುಗಿಸಲು ನಡೆಸಿದ ಇಲಾಖಾ ವಿಚಾರಣೆಗೂ ಸದರಿಯವರು ಪತ್ತೆಯಾಗದಿರುವುದರಿಂದ ಕ್ರಮ ಕೈಗೊಳ್ಳಲು ಸಾಧ್ಯವಾಗಿರುವುದಿಲ್ಲ, ಸ್ಥಳೀಯ ಪತ್ರಿಕೆಗಳಲ್ಲಿ ಗೈರು ಹಾಜರಿ ಸಂಬಂಧ ನೀಡಿದ ಪ್ರಕಟಣೆಗೂ ನೌಕರರು ಯಾವುದೇ ರೀತಿ ಸ್ಪಂದಿಸಿರುವುದಿಲ್ಲ. ಶ್ರೀ ಕೆ. ಸಿದ್ದರಾಜಶೆಟ್ಟಿ, ರೇಷ್ಮೆ ಪ್ರವರ್ತಕರು(ಸಂಖ್ಯಾತಿರಿಕ್ತ) ಇವರು ಕಾಣೆಯಾಗಿರುವ ಬಗ್ಗೆ ಪೊಲೀಸ್ ಠಾಣೆಯಲ್ಲಿ ದಾಖಲಾದ ದೂರಿನ ಬಗ್ಗೆ ಪೊಲೀಸ್ ವೃತ್ತ ನಿರೀಕ್ಷಕರು ದಿನಾಂಕ:23.11.2004 ರಂದು ವರದಿ ನೀಡಿದ್ದು, ಪ್ರಕರಣವು ದಾಖಲೆಯಾದ ದಿನಾಂಕದಿಂದ ಇಲ್ಲಿಯವರೆಗೆ ಕಾಣೆಯಾದ ನೌಕರರ ಪತ್ತೆ ಬಗ್ಗೆ ಮಾಡಿದ ಎಲ್ಲಾ ಪ್ರಯತ್ನವು ವಿಫಲವಾಗಿದ್ದು, ಈ ಪ್ರಕರಣವು ಪತ್ತೆಯಾಗದೆಂದು ಪರಿಗಣಿಸಲಾಗಿದೆ ಎಂದು ದೃಢೀಕರಣ ನೀಡಿರುತ್ತಾರೆ. ಈ ಎಲ್ಲಾ ಅಂಶಗಳನ್ನು ಗಮನಿಸಿದಾಗ ಶ್ರೀ ಕೆ. ಸಿದ್ದರಾಜಶೆಟ್ಟಿ, ಇವರು ಕಾಣೆಯಾಗಿರುವುದು ದಾಖಲೆ ಹಾಗೂ ಪೊಲೀಸ್ ವರದಿಯಿಂದ ದೃಡಪಡುತ್ತದೆ. ಶ್ರೀ ಕೆ. ಸಿದ್ದರಾಜಶೆಟ್ಟಿ, ರೇಷ್ಮೆ ಪ್ರವರ್ತಕರ ಇವರ ಪತ್ನಿ ಶ್ರೀಮತಿ ಎಸ್ ಲೀಲಾ ಇವರು ಮನವಿ ಸಲ್ಲಿಸಿ, ಶ್ರೀ ಕೆ. ಸಿದ್ದರಾಜಶೆಟ್ಟಿ ಇವರು ಕಾಣೆಯಾಗಿರುವುದರಿಂದ ಕುಟುಂಬ ವೇತನ ಮತ್ತಿತರ ಸೌಲಭ್ಯಗಳನ್ನು ಮಂಜೂರು ಮಾಡುವಂತೆ ಕೋರಿದ್ದು, ಕಾಣೆಯಾದ ಸರ್ಕಾರಿ ನೌಕರರ ಕುಟುಂಬಕ್ಕೆ ಕುಟುಂಬ ವೇತನ ಮತ್ತು ಇತರೆ ಸೌಲಭ್ಯಗಳನ್ನು ಮಂಜೂರು ಮಾಡುವ ಬಗ್ಗೆ ಕೋರಿರುವುದು ನ್ಯಾಯಸಮ್ಮತವಾಗಿರುತ್ತದೆಯಾದ್ದರಿಂದ ಕಾಣೆಯಾದ ನೌಕರರ ಕುಟುಂಬಕ್ಕೆ ಸಲ್ಲಬೇಕಾದ ಸೌಲಭ್ಯಗಳನ್ನು ನೀಡಲು ಆದೇಶ ಹೊರಡಿಸುವಂತೆ ಮೇಲೆ ಓದಲಾದ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು, ಸರ್ಕಾರವನ್ನು ಕೋರಿರುತ್ತಾರೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ನೀಡಿರುವ ಮೇಲಿನ ಮಾಹಿತಿಯನ್ವಯ ಶ್ರೀ ಕೆ. ಸಿದ್ದರಾಜಶೆಟ್ಟಿ, ಇವರು ದಿನಾಂಕ:10.9.2001ರಿಂದ ಕಾಣೆಯಾಗಿರುತ್ತಾರೆ. ನೌಕರರು ಕಾಣೆಯಾಗಿರುವ ಬಗ್ಗೆ ಇವರ ಪತ್ನಿ ಶ್ರೀಮತಿ ಲೀಲಾ ಇವರು ದಿನಾಂಕ:17.9.2001ರಂದು ಕೊಳ್ಳೇಗಾಲ ಪೊಲೀಸ್ ಠಾಣೆಯಲ್ಲಿ ದೂರು ದಾಖಲಿಸಿರುತ್ತಾರೆ. ಸದರಿ ದೂರಿನನ್ವಯ ಪ್ರಕರಣವು ದಾಖಲಾದ ದಿನದಿಂದ ದಿನಾಂಕ:23.11.2004ರ ವರೆಗೆ ಕಾಣೆಯಾಗಿರುವ ಶ್ರೀ ಕೆ. ಸಿದ್ದರಾಜಶೆಟ್ಟಿ ಇವರ ಪತ್ತೆಯ ಬಗ್ಗೆ ಎಲ್ಲಾ ಪ್ರಾಮಾಣಿಕ ಪ್ರಯತ್ನಗಳನ್ನು ನಡೆಸಿದ್ದು, ಅದು ವಿಫಲವಾಗಿರುವುದರಿಂದ ಈ ಪ್ರಕಣವು ಪತ್ತೆಯಾಗದ್ದದೆಂದು ಪರಿಗಣಿಸಿದೆ ಎಂದು ಪೊಲೀಸ್ ಠಾಣೆಯಿಂದ ವರದಿ ನೀಡಲಾಗಿದೆ. ಇಲಾಖೆಯು ನಡೆಸಿರುವ ಮಹಜರಿನಂತೆಯೂ ಶ್ರೀ ಕೆ. ಸಿದ್ದರಾಜಶೆಟ್ಟಿ ಇವರ ಇರುವಿಕೆಯು ಪತ್ತೆಯಾಗಿರುವುದಿಲ್ಲ ಮೈಸೂರಿನ ದಿನಪತ್ರಿಕೆಯಲ್ಲಿ ನೌಕರರು ಕಣ್ಮರೆಯಾದ ಬಗ್ಗೆ ವರದಿ ಬಂದಿರುತ್ತದೆ. ಪೊಲೀಸ್ ಇಲಾಖೆಯು ಪ್ರಕರಣವು ಪತ್ತೆಯಾಗದ ಪ್ರಕರಣವೆಂದು ಪರಿಗಣಿಸಿರುವ ಹಿನ್ನಲೆಯಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಕೋರಿರುವಂತೆ ಕಾಣೆಯಾದ ನೌಕರರ ಅವಲಂಬಿತರಿಗೆ ಕುಟುಂಬ ವೇತನ ಮತ್ತಿತರ ಸೌಲಭ್ಯಗಳನ್ನು ಮಂಜೂರು

ಮಾಡುವ ಕುರಿತಂತೆ ಪರಿಶೀಲಿಸಿದ್ದು, ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದನ್ವಯ ಎಲ್ಲಾ ಕ್ರಮಗಳನ್ನು ಪ್ರಸ್ತುತ ಪ್ರಕರಣದಲ್ಲಿ ಕೈಗೊಳ್ಳಲಾಗಿರುವುದರಿಂದ ನೌಕರರ ಅವಲಂಬಿತರಿಗೆ ನಿಯಮಾನುಸಾರ ನೀಡಬೇಕಾಗಿರುವ ಕುಟುಂಬ ವೇತನ ಮತ್ತಿತರ ಸೌಲಭ್ಯಗಳನ್ನು ಮಂಜೂರು ಮಾಡಲು ತೀರ್ಮಾನಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ವಾಕೈ 63 ರೇಇವಿ 2008, ಬೆಂಗಳೂರು, ದಿನಾಂಕ:5ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ನೇಮಕಾತಿ ಪ್ರಾಧಿಕಾರವು, ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ:ಆಇ (ವಿಶೇಷ) 11 ಕುವಿವೇ 87, ದಿನಾಂಕ:21.3.1988ರಲ್ಲಿ ವಿಧಿಸಿರುವ ಮಾರ್ಗಸೂಚಿಗಳನ್ನು ಕಟ್ಟುನಿಟ್ಟಾಗಿ ಪಾಲಿಸಿರುವುದನ್ನು ಖಾತ್ರಿ ಪಡಿಸಿಕೊಂಡು ನಂತರ, ಶ್ರೀ ಕೆ. ಸಿದ್ದರಾಜಶೆಟ್ಟಿ, ರೇಷ್ಮೆ ಪ್ರವರ್ತಕರು (ಸಂಖ್ಯಾತಿರಿಕ್ತ) ತಾಂತ್ರಿಕ ಸೇವಾ ಕೇಂದ್ರ ಕಾಮಗೆರೆ ಇವರ ಪತ್ನಿಯಾದ ಶ್ರೀಮತಿ ಲೀಲಾ ಇವರಿಗೆ ನಿಯಮಗಳನ್ವಯ ನೀಡಬಹುದಾದ ಕುಟುಂಬ ವೇತನ ಹಾಗೂ ಮತ್ತಿತರ ಸೌಲಭ್ಯಗಳನ್ನು ನೀಡುವುದಕ್ಕೆ ಮಂಜೂರಾತಿ ನೀಡಲಾಗಿದೆ.

ಆರ್ಥಿಕ ಇಲಾಖೆಯ ಅಧಿಕೃತ ಜ್ಞಾಪನ ಸಂಖ್ಯೆ:ಆಇ (ವಿಶೇಷ) 11 ಕುವಿವೇ 97, ದಿನಾಂಕ:21.3.1988ರ ಕಂಡಿಕೆ 6(ಊ) ರನ್ವಯ ವಿಮಾ ಸಂರಕ್ಷಣಾ ಹಣವನ್ನು ನಾಮ ನಿರ್ದೇಶಿತರಿಗೆ ಅಥವಾ ಕಾನೂನುಬದ್ಧ ವಾರಸುದಾರರಿಗೆ ಕಾಣೆಯಾದ ತಿಂಗಳಿನಿಂದ ಹಿಡಿದು ಏಳು ವರ್ಷಗಳ ನಂತರ ಸಂದಾಯ ಮಾಡಬಹುದು. ಪರಂತು ಹಕ್ಕುದಾರರು ಕ್ರಮಬದ್ದವಾದ ಮತ್ತು ನಿರ್ವಿವಾದ ಪುರಾವೆಯನ್ನು ಕಾಣೆಯಾದ ನೌಕರನು ಮೃತ ಪ್ರಮಾಣ ಪತ್ರವನ್ನು ಹಾಜರುಪಡಿಸಬೇಕು ಅಥವಾ ಭಾರತೀಯ ಸಾಕ್ಷಿ ಕಾಯಿದೆಯ 108ನೇ ವಿಧಿಯ ಪ್ರಕಾರ ಕಾಣೆಯಾದ ನೌಕರನು(ಳು) ಮೃತನಾದನೆಂದು ಬಾವಿಸಿ, ಇದರ ಬಗ್ಗೆ ಕೋರ್ಟಿನಿಂದ ಪಡೆದ ಡಿಕ್ರಿಯನ್ನು ಹಾಜರುಪಡಿಸಿದ ವಿಮಾ ಹಣವನ್ನು ಸಂದಾಯ ಮಾಡುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.550

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ರಾಜ್ಯಕ್ಕೆ ಹೆಚ್ಚುವರಿ ಅಡ್ವೋಕೇಟ್ ಜನರಲ್ ಹುದ್ದಯೆನ್ನು ಸೃಜಿಸುವ ಬಗ್ಗೆ.

**ಪ್ರಸ್ತಾವನೆ:**

ರಾಜ್ಯದಲ್ಲಿ ದಿನಾಂಕ:4.7.2008ರಂದು ಧಾರವಾಡದಲ್ಲಿ ಮತ್ತು ದಿನಾಂಕ:5.7.2008ರಂದು ಗುಲ್ಬರ್ಗಾದಲ್ಲಿ ಉಚ್ಚನ್ಯಾಯಾಲಯದ ಸಂಚಾರಿ ಪೀಠಗಳನ್ನು ಸ್ಥಾಪನೆ ಮಾಡಲಾಗಿರುತ್ತದೆ. ಸಂಚಾರಿ ಪೀಠಗಳು ಕಾರ್ಯಾರಂಭ ಮಾಡಿರುವ ಹಿನ್ನಲೆಯಲ್ಲಿ ಅಡ್ವೋಕೇಟ್ ಜನರಲ್ ಅವರಿಗೆ ಕೆಲಸದ ಒತ್ತಡ ಹೆಚ್ಚಾಗಿರುವುದನ್ನು ಸರ್ಕಾರವು ಮನಗಂಡಿರುತ್ತದೆ ಹಾಗೂ ರಾಜ್ಯದ ಪ್ರಕರಣಗಳನ್ನು ಇನ್ನೂ ಹೆಚ್ಚು ಸಮರ್ಪಕವಾಗಿ ನಿರ್ವಹಿಸಲು ಒಂದು ಹೆಚ್ಚುವರಿ ಅಡ್ವೋಕೇಟ್ ಜನರಲ್‌ರ ಅವಶ್ಯಕತೆ ಉಂಟಾಗಿರುವುದಾಗಿ ಅಭಿಪ್ರಾಯಪಡಲಾಗಿದೆ. ಆದಕಾರಣ, ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮ, 1977ರ ಅಡಿಯಲ್ಲಿ ರಾಜ್ಯಕ್ಕೆ ಒಂದು ಹೆಚ್ಚುವರಿ ಅಡ್ವೋಕೇಟ್ ಜನರಲ್ ಹುದ್ದೆಯನ್ನು ಸೃಜಿಸಲು ತೀರ್ಮನಿಸಲಾಗಿದೆ.

ಈ ಹಿನ್ನೆಲೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಲಾ 06 ಎಲ್‌ಎಜಿ 2009, ಬೆಂಗಳೂರು, ದಿನಾಂಕ:3ನೇ ಫೆಬ್ರವರಿ 2009**

ಪ್ರಸ್ತಾವನೆಯ ಎಲ್ಲಾ ಅಂಶಗಳನ್ನು ಕೂಲಂಕಷವಾಗಿ ಪರಿಗಣಿಸಿ, ತಕ್ಷಣದಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರಾಜ್ಯಕ್ಕೆ ಒಂದು ಹೆಚ್ಚುವರಿ ಅಡ್ವೋಕೇಟ್ ಜನರಲ್ ಹುದ್ದೆಯನ್ನು ಸೃಜಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಹೊಸದಾಗಿ ಸೃಜಿಸಲಾದ ಸದರಿ ಹುದ್ದೆಗೆ ಅಡ್ವೋಕೇಟ್ ಜನರಲ್ ಹುದ್ದೆಗೆ ಸಮನಾಗಿ ವೇತನ ಮತ್ತು ಭತ್ಯೆಗಳು ಅನ್ವಯವಾಗುತ್ತವೆ.

ಈ ಸಂಬಂಧದಲ್ಲಿ ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮ, 1977ಕ್ಕೆ ಸೂಕ್ತ ತಿದ್ದುಪಡಿ ಹೊರಡಿಸಲಾಗುವುದು.

ಈ ಆದೇಶವನ್ನು ಟಿಪ್ಪಣಿ ಸಂಖ್ಯೆ:ಆಇ 55 ವೆಚ್ಚ 10/2009 ದಿನಾಂಕ:3.2.2009ರಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್.552

**ಎಸ್. ಸಿದ್ದಲಿಂಗೇಶ್**

ಸರ್ಕಾರದ ಕಾರ್ಯದರ್ಶಿ, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಸಿ.ಎಂ. ಹಿರೇಮಠ ಹಿಂದಿನ ತಹಶೀಲ್ದಾರ್, ರೋಣ ಪ್ರಸ್ತುತ ನಿವೃತ್ತರು, ಇವರ ವಿರುದ್ಧದ ಇಲಾಖಾ ವಿಚಾರಣೆ ಬಗ್ಗೆ–ದೋಷಮುಕ್ತಗೊಳಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :** 1 ಸರ್ಕಾರದ ಆದೇಶ ಸಂ:ಆರ್‌ಡಿ 56 ಎಡಿಇ 2006, ದಿನಾಂಕ:11.3.2008.

2 ಶ್ರೀ ಎನ್. ಸುಬ್ಬಾರಾವ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ಇವರ ವಿಚಾರಣಾ ವರದಿ ದಿನಾಂಕ:1.3.2008.

**ಪ್ರಸ್ತಾವನೆ:**

ಶ್ರೀ ಸಿ,.ಎಂ. ಹಿರೇಮಠ, ಹಿಂದಿನ ತಹಶೀಲ್ದಾರ್, ರೋಣ ತಾಲ್ಲೂಕು ಪ್ರಸ್ತುತ ನಿವೃತ್ತರು, ಇವರು ರೋಣ ತಾಲ್ಲೂಕು ತಹಶೀಲ್ದಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಮೆ. ವೆಂಕಟೇಶ್ವರ ಆಯಿಲ್ ಏಜೆನ್ಸಿ ಗಜೇಂದ್ರಗಡ, ಇವರು ಕಾರ್ಡುದಾರರಿಗೆ ಸರಿಯಾಗಿ ಸೀಮೆಎಣ್ಣೆ ವಿತರಣೆ ಮಾಡಿಲ್ಲದ ಕಾರಣ, ಜಿಲ್ಲಾಧಿಕಾರಿಗಳು ಗದಗ್ ಇವರಿಗೆ ತಿಳಿಸಿದಾಗ ಸದರಿ ಏಜನ್ಸಿಯ ಲೈಸೆನ್ಸ್ ತೆಗೆದುಹಾಕಿ, ಅವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ ಹೂಡಲು ಜಿಲ್ಲಾಧಿಕಾರಿಗಳು ತಿಳಿಸಿದಾಗ್ಯೂ ಶ್ರೀ ಸಿ.ಎಂ. ಹಿರೇಮಠ, ಇವರು ಶ್ರೀ ಮೆ. ವೆಂಕಟೇಶ್ವರ ಆಯಿಲ್ ಏಜೆನ್ಸಿ ಇವರ ವಿರುದ್ಧ FIR ದಾಖಲಿಸುವ ಬದಲು ಜುಗಲ್ ಕಿಶೋರ್ ಮಂತ್ರಿ ಎಂಬುವರ ವಿರುದ್ಧ ಕ್ರಮ ಕೈಗೊಂಡ ಕರ್ತವ್ಯ ಚ್ಯುತಿ ಎಸಗಿದ ಕಾರಣ, ಇವರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಮೇಲೆ ಕ್ರ.ಸಂ 1ರಲ್ಲಿ ಓದಲಾದ ದಿನಾಂಕ:11.3.2008ರ ಸರ್ಕಾರಿ ಆದೇಶದಲ್ಲಿ ಶ್ರೀ ಎನ್. ಸುಬ್ಬಾರಾವ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶಿಸ್ತು ಪ್ರಾಧಿಕಾರದ ಪರವಾಗಿ ವಿಚಾರಣಾಧಿಕಾರಿ ಮುಂದೆ ಮಂಡಿಸಲು ಗದಗ್ ಜಿಲ್ಲಾಧಿಕಾರಿಯವರ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಯವರು ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆಯನ್ನು ಜರುಗಿಸಿ ಮೇಲೆ ಕ್ರ.ಸಂ (2)ರಲ್ಲಿ ಓದಲಾದ ದಿನಾಂಕ:1.3.2008ರ ಪತ್ರದೊಂದಿಗೆ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಅದರಲ್ಲಿ ಸದರಿಯವರ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿಲ್ಲವೆಂದು ವರದಿ ಮಾಡಿರುತ್ತಾರೆ.

ವಿಚಾರಣಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸಿದ್ದ ವಿಚಾರಣಾ ವರದಿಯು ಹಾಗೂ ಅದಕ್ಕೆ ಸಂಬಂಧಪಟ್ಟ ದಾಖಲೆಗಳನ್ನು ಪರಿಶೀಲಿಸಿ, ಸರ್ಕಾರವು ವಿಚಾರಣಾಧಿಕಾರಿಗಳ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಶ್ರೀ ಸಿ.ಎಂ. ಹಿರೇಮಠ, ಹಿಂದಿನ ತಹಶೀಲ್ದಾರ್, ರೋಣ (ಪ್ರಸ್ತುತ ನಿವೃತ್ತರು) ಇವರ ವಿರುದ್ಧದ ಆರೋಪಗಳು ಸಾಬೀತಾಗದಿರುವುದು ಸ್ಪಷ್ಟವಾಗಿರುವುದರಿಂದ ಇವರನ್ನು ಆರೋಪ ಮುಕ್ತರನ್ನಾಗಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ:ಆರ್‌ಡಿ 56 ಎಡಿಇ 2006, ಬೆಂಗಳೂರು, ದಿನಾಂಕ:6ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಶ್ರೀ ಸಿ.ಎಂ. ಹಿರೇಮಠ, ಹಿಂದಿನ ತಹಶೀಲ್ದಾರ್, ರೋಣ (ಪ್ರಸ್ತುತ ನಿವೃತ್ತರು) ಇವರ ವಿರುದ್ಧ ದಿನಾಂಕ:11.5.2008ರ ಆದೇಶದಲ್ಲಿ ಹೊರಡಿಸಲಾದ ಆರೋಪಗಳಿಂದ ಮುಕ್ತಗೊಳಿಸಲಾಗಿದೆ.

ಈ ಪ್ರಕರಣದ ಮಟ್ಟಿಗೆ ಸಂಬಂಧಿಸಿದಂತೆ ಸದರಿ ಅಧಿಕಾರಿಯವರ ವಿರುದ್ಧ ಈ ಇಲಾಖಾ ವಿಚಾರಣೆಯು ನಡೆಯದಿದ್ದಲ್ಲಿ ಅವರು ಯಾವ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅಂತಹ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ. ಹಾಗೂ ಇವರು ಅಮಾನತ್ತಿನಲ್ಲಿ ಕಳೆದ ಅವಧಿ ದಿನಾಂಕ:2.8.2006ರಿಂದ 4.1.2007ರ ವರೆಗಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 100(1)(ಬಿ)ರ ಪ್ರಕಾರ ಕರ್ತವ್ಯದ ಅವಧಿಯೆಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 553

**ಬಿ.ವಿ. ಚೌಕಿಮಠ**

ಸರ್ಕಾರ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

## REVENUE SECRETARIAT

**Sub :** Appointment of Master Trainers in Revenue Departmetn at District level-reg

**PREAMBLE:**

Revenue Department is implementing various e-Governance initiative projects like Bhoomi, Rural Digital Service under Nemmadi and Bhoomaojini at the taluk level. Revenue Department has also taken up carious spectial activities such as clearing pending Dharkasht podi, introduction of Tatkal podi, marking of pkyki RTC & NA lands in Bhoomi database, RTC correction drive etc.,

The changes brought by Government are informed to the field staffs by way of Circulars & Governement Ordes. Most of the times due to heavy work load of the Tahsildars, these guidelines are not properly understood and communicated to the field staffs (Revenue Inspectors & Village Accountants) As a result the objectives of the Government in improving the efficiency of the administration are not fully achieved.

The only way by which the progremmes could be made understood to all the Revenue officials is through imparting training to all the Revenue Officials i.e. from the level of Tahsildar to village Accountant, This training cannot be done at the State level to all the Revenue Officials as there are no adequate resources at the Government level to take up the training activity for 10000 officials & officers.

Therefore Government has now decided to appoint one Tahsildar in each district as the ''Master Trainer'' and train these 29 master trainer, who inturn will train all the Tahsildars and other Revenue staffs in their respective district.

Hence the following order.

**Government Order No. RD 57 ASD 2009, Bangalore, Dated:31st January 2009**

In the Circumstances explained in the preamble, Government is pleased to appoint one Tahsildar rank officer as ''Master trainer'' in each district

2) The following''Selection Committee'' is constituted for recommending the names of master trainers to the Governement.

1. Special Secretary (Bhoomi),Revenue Departement –Chairmen
2. Deputy Secretary (Services) ,Revenue Department-Member
3. Project Officer, Bhoomi, Monitoring Cell-Member Secretary.

The above committee can co-opt more members if required.

All the Deputy Commissioners shall send the name of the Tahsildar working in their district to special Secretary (Bhoomi), Revenue Department along with their bio data.

3) The selection Committee will interview as many Tahsildars as are required and suggest 29 Tahsildars to Governement for appointing them as master trainers The Selection Committee can also recommend more than 29 names for Government under the following circumstances.

1 Incase more Tahsildars with aptitude for training are available

2. More master trainers are required in bigger districts like Gulbarga, Belgaum, Uttar Kannada, Tumkur where there are more than 10 taluks.

3. The Tahsildars appointed as ''Master Trainer'' will not be transferred from that district without the prior concurrence the Selection Committee or in case of urgency chairmen of the Selection Committee.

4. All the master trainers will be trained by Special Secretary (Bhoomi), Revenue Department at Bangalore.

5. Government will ensure that the training will be for not more than 5 days at a stretch, Under Special circumstances if the training exceeds 5 days approval of Principal Secretary, Revenue Department would be taken. This is to ensure that there is no undue disruption of work in taluk when master trainer is working as Tahsildar.

6. The Selection Committee will meet once on a month and review the performance of the master trainers. If Selection Committee feels that the performance of the master trainers is not up to the mark, he can recommend such names to Government for taking disciplinary action against the officer as negligence of duty and also suggest alternate master trainers for that district.

7. Incase any other department want to use the services of these master trainer, it will be done with prior approval of the Selection Committee only.

8 .The appointment of master trainer will be done through a separate order based on the recommendation made by Selection Committee.

By order and in the name of the Governor of Karnataka

**B.V. CHOUKIMATH**

P.R. 554

Under Secretary to Government

Revenue Department(Services-3)

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಕೆ.ವಿ. ವೆಂಕಟೇಶುಡು, ಹಿಂದಿನ ತಹಶೀಲ್ದಾರ್, ನಾಗಮಂಗಲ ತಾಲ್ಲೂಕು ಹಾಲಿ ನಿವೃತ್ತರು ಹಾಗೂ ಶ್ರೀ ವಿ., ಕೆಂಪಯ್ಯ ಹಿಂದಿನ ರಾಜಸ್ವ ನಿರೀಕ್ಷಕರು ತಾಲ್ಲೂಕು ಕಛೇರಿ, ನಾಗಲಮಂಗಲ, ಹಾಲಿ ನಿವೃತ್ತರು ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ–ಶ್ರೀ ಕೆ. ಗೋಪಾಲಕೃಷ್ಣ ಗ್ರಾಮಲೆಕ್ಕಿಗರು ಇವರನ್ನು ದೊಷಮುಕ್ತರನ್ನಾಗಿರುಸುವ ಬಗ್ಗೆ.

**ಓದಲಾಗಿದೆ :**
1 ಮಂಡ್ಯ ಜಿಲ್ಲಾಧಿಕಾರಿಗಳು ಇವರ ಪತ್ರ ಸಂ:ಸಿಬ್ಬಂದಿ (2) :62:2000–01, ದಿನಾಂಕ:10–2–2003.
2 ದಿನಾಂಕ:24/30–09–2003ರ ತಿಳುವಳಿಕೆ ಪತ್ರ ಸಂ:ಕಂಇ 36 ಎಡಿಇ 03
3 ಶ್ರೀ ಕೆ.ವಿ. ವೆಂಕಟೇಶುಡು, ನಿವೃತ್ತ ತಹಶೀಲ್ದಾರ್ ರವರ ದಿನಾಂಕ: 4.3.2004ರ ಪತ್ರ
4 ಶ್ರೀ ವಿ. ಕೆಂಪಯ್ಯ ನಿವೃತ್ತ ರಾಜಸ್ವನಿರೀಕ್ಷಕರು ಇವರ ದಿನಾಂಕ:14.2.2004ರ ಲಿಖಿತ ಸಮಜಾಯಿಷಿ.
5 ಶ್ರೀ ಕೆ. ಗೋಪಾಲಕೃಷ್ಣ ಗ್ರಾಮಲೆಕ್ಕಿಗರು ಇವರ ದಿನಾಂಕ:10–11–2003ರ ಲಿಖಿತ ಸಮಜಾಯಿಷಿ
6 ಸರ್ಕಾರದ ಆದೇಶ ಸಂ:ಆರ್ ಡಿ 36 ಎಡಿಇ 2003, ದಿನಾಂಕ:14.6.2004.
7 ವಿಚಾರಣಾಧಿಕಾರಿಗಳ ವರದಿ ದಿನಾಂಕ:18.5.2005.

**ಪ್ರಸ್ತಾವನೆ:**

ಶ್ರೀ ಕೆ.ವಿ ವೆಂಕಟೇಶುಡು, ನಿವೃತ್ತ ತಹಶೀಲ್ದಾರ್, ಶ್ರೀ ವಿ. ಕೆಂಪಯ್ಯ ಹಿಂದಿನ ರಾಜಸ್ವ ನಿರೀಕ್ಷಕರು, ತಾಲ್ಲೂಕು ಕಛೇರಿ, ನಾಗಮಂಗಲ (ಹಾಲಿ ನಿವೃತ್ತರು) ಹಾಗೂ ಶ್ರೀ ಗೋಪಾಲಕೃಷ್ಣ ಗ್ರಾಮಲೆಕ್ಕಿಗರು ಇವರುಗಳು ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಸದರಿ ತಾಲ್ಲೂಕಿನ ಗದೇಭೂವನಹಳ್ಳಿ ಗ್ರಾಮದ ಸ.ನಂ. 109ರಲ್ಲಿ ಮೂಲ ದಾಖಲಾತಿಗಳ ಪ್ರಕಾರ ಸರ್ಕಾರಿ ಬೀಳು ಆಗಿದ್ದು, ಸದರಿ ನಿವೃತ್ತ ಅಧಿಕಾರಿಯು ಶ್ರೀಮತಿ ಪುಟ್ಟಬಸಮ್ಮ ಕೋಂ ಹುಚ್ಚಯ್ಯ ಎಂಬುವವರಿಗೆ ಆದೇಶ ಸಂ:ಆರ್‌ಕೆ ಬೀಳು:ಸಿಆರ್:13:98–99, ದಿನಾಂಕ:24.7.2000ರಲ್ಲಿ ಈ ಜಮೀನನ್ನು ಬೀಳು ರೆಸ್ಟೋರ್ ಮಾಡಿ ಅಕ್ರಮವಾಗಿ ಹಕ್ಕು ಪತ್ರವನ್ನು ನೀಡಿ ಕರ್ತವ್ಯಲೋಪ ಎಸಗಿರುವುದರಿಂದ ಸದರಿ ಓದಲಾದ ಪತ್ರದಲ್ಲಿ ಮಂಡ್ಯ ಜಿಲ್ಲಾಧಿಕಾರಿಗಳು ಕೋರಿರುತ್ತಾರೆ.

ಅದರಂತೆ ಆಪಾದಿತ ಅಧಿಕಾರಿ/ನೌಕರರಿಗೆ ಮೇಲೆ ಓದಲಾದ ಕ್ರ.ಸಂ. (2)ರ ದಿನಾಂಕ:24/30–9–2003ರಲ್ಲಿ ಕಾರಣ ಕೇಳುವ ನೋಟೀಸ್ ಜಾರಿ ಮಾಡಿ ಅವರುಗಳಿಂದ ಲಿಖಿತ ಹೇಳಿಕೆ ಪಡೆದು ಪರಿಶೀಲಿಸಿ, ಹೇಳಿಕೆ ತೃಪ್ತಿಕರವಾಗಿರದ ಕಾರಣ, ಈ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯಲು, ಸರ್ಕಾರವು ಮೇಲೆ ಓದಲಾದ ಕ್ರ.ಸಂ (6)ರ ದಿನಾಂಕ:14.6.2004ರಲ್ಲಿ ಈ ಕೆಳಕಂಡ ಆಪಾದಿತ ಅಧಿಕಾರಿ. ನೌಕರರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 13ರಡಿ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಸಂಗೊಳ್ಳಿ ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

1) ಶ್ರೀ ಕೆ.ವಿ ವೆಂಕಟೇಶುಡು, ನಿವೃತ್ತ ತಹಶೀಲ್ದಾರ್,
2) ಶ್ರೀ ವಿ. ಕೆಂಪಯ್ಯ, ಹಿಂದಿನ ರಾಜಸ್ವ ನಿರೀಕ್ಷಕರು, ತಾಲ್ಲೂಕು ಕಛೇರಿ, ನಾಗಮಂಗಲ (ಹಾಲಿ ನಿವೃತ್ತರು) ಹಾಗೂ
3) ಶ್ರೀ ಗೋಪಾಲಕೃಷ್ಣ, ಗ್ರಾಮಲೆಕ್ಕಿಗರು

ವಿಚಾರಣಾಧಿಕಾರಿಗಳು ಮೇಲೆ ಓದಲಾದ ಕ್ರ.ಸಂ (7)ರ ದಿನಾಂಕ:18.5.2005ರಲ್ಲಿ ಈ ಪ್ರರಕಣದ ಕುರಿತು ಜಂಟಿ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿ, ಈ ಕೆಳಕಂಡ ಅಧಿಕಾರಿ. ನೌಕರರ ವಿರುದ್ಧ ಮಾಡಲಾದ ಆಪಾದನೆಗಳು ಸಾಬೀತಾಗಿವೆ ಎಂದು ವರದಿ ಮಾಡಿರುತ್ತಾರೆ.

1) ಶ್ರೀ ಕೆ.ವಿ ವೆಂಕಟೇಶುಡು, ನಿವೃತ್ತ ತಹಶೀಲ್ದಾರ್,
2) ಶ್ರೀ ವಿ. ಕೆಂಪಯ್ಯ, ಹಿಂದಿನ ರಾಜಸ್ವ ನಿರೀಕ್ಷಕರು, ತಾಲ್ಲೂಕು ಕಛೇರಿ, ನಾಗಮಂಗಲ (ಹಾಲಿ ನಿವೃತ್ತರು) ಹಾಗೂ

ಶ್ರೀ ಗೋಪಾಲಕೃಷ್ಣ, ಗ್ರಾಮಲೆಕ್ಕಿಗ (ಪ್ರಸ್ತುತ ಗ್ರಾಮಲೆಕ್ಕಿಗ ಮೊದೂರು ವೃತ್ತ, ಭೂಕಿನಕೆರೆ ಹೋಬಳಿ, ಕೆ.ಆರ್. ಪೇಟೆ ತಾಲ್ಲೂಕು) ಇವರ ವಿರುದ್ಧ ಹೂಡಲಾಗಿರುವ ಆಪಾದನೆಗಳು ಸಾಬೀತಾಗಿಲ್ಲವೆಂದು ವಿಚಾರಣಾ ವರದಿಯಲ್ಲಿ ತಿಳಿಸಿರುತ್ತಾರೆ.

ಸದರಿ ವಿಚಾರಣಾಧಿಕಾರಿಗಳ ವರದಿಯನ್ನು ಸರ್ಕಾರವು ಒಪ್ಪಿಕೊಂಡು ಆರೋಪ ಸಾಬೀತಾಗಿರುವ ಅಧಿಕಾರಿ/ನೌಕರರ ವಿರುದ್ಧ ಪ್ರತ್ಯೇಕವಾಗಿ ದಂಡನೆ ವಿಧಿಸುವ ಬಗ್ಗೆ ಕ್ರಮ ಕೈಗೊಳ್ಳಲಾಗುತ್ತಿದೆ. ಪ್ರಸ್ತುತ ಆರೋಪ ಸಾಬೀತಾಗಿಲ್ಲದ ನೌಕರರ ಬಗ್ಗೆ ಆದೇಶ ಮಾಡಬೇಕಾಗಿರುವುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂ:ಆರ್‌ಡಿ 36 ಎಡಿಇ 2003, ಬೆಂಗಳೂರು, ದಿನಾಂಕ:27ನೇ ಜನವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಈ ಪ್ರಕಣದಲ್ಲಿ ಭಾಗಿಯಾಗಿರುವ ಶ್ರೀಗೋಪಾಲಕೃಷ್ಣ ಗ್ರಾಮಲೆಕ್ಕಿಗರು (ಪ್ರಸ್ತುತ ಗ್ರಾಮಲೆಕ್ಕಿಗ, ಮೊದೂರು ವೃತ್ತ, ಭೂಕಿನಕೆರೆ ಹೋಬಳಿ, ಕೆ.ಆರ್. ಪೇಟೆ ತಾಲ್ಲೂಕು) ಇವರ ವಿರುದ್ಧ ಆರೋಪ ಸಾಬೀತಾಗಿಲ್ಲವೆಂದು ವಿಚಾರಣಾಧಿಕಾರಿಗಳು ವರದಿ ಮಾಡಿರುವ ಹಿನ್ನಲೆಯಲ್ಲಿ ಇವರ ವಿರುದ್ಧ ಹೂಡಲಾಗಿದ್ದ ಆರೋಪಗಳಿಂದ ಈ ಪ್ರಕಣದ ಮಟ್ಟಿಗೆ ದೋಷಮುಕ್ತರನ್ನಾಗಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 555

**ಬಿ.ವಿ. ಚೌಕಿಮಠ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು–3)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಹಾಸನ ಸ್ಥಳೀಯ ಯೋಜನಾ ಪ್ರದೇಶಕ್ಕೆ ತಯಾರಿಸಿರುವ ಮಹಾಯೋಜನೆ (ಪರಿಷ್ಕೃತ–1)ಕ್ಕೆ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**
1 ಸರ್ಕಾರದ ಆದೇಶ ಸಂಖ್ಯೆ:ವನಿ:464:ಟಿಟಿಪಿ:92 ಬೆಂಗಳೂರು, ದಿನಾಂಕ:29.12.1992.
2 ಹಾಸನ ನಗರಾಭಿವೃದ್ಧಿ ಪ್ರಾಧಿಕಾರದ ಪತ್ರ ಸಂಖ್ಯೆ:ಹಾನಪ್ರಾ/ನಯೋಸ/ಮಯೋಪ/77/2008–09 ದಿನಾಂಕ:10–7–2008.
3 ನಗರದ ಯೋಜನಾ ನಿರ್ದೇಶಕರ ಕಛೇರಿಯ ಏಕ ಕಡತ ಸಂಖ್ಯೆ: ನಯೋ(20)/ಹಾಸನ/ ಮಯೋಪ/– I/2/7/2008 ದಿನಾಂಕ:

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಹಾಸನ ಸ್ಥಳೀಯ ಯೋಜನಾ ಪ್ರದೇಶದ ಮಹಾಯೋಜನೆಗೆ ದಿನಾಂಕ:29.12.1992 ರಂದು ಅಂತಿಮ ಅನುಮೋದನೆಯನ್ನು ನೀಡಿ ಆದೇಶಿಸಿದೆ.

ಮೇಲೆ ಓದಲಾದ (2)ರ ಪತ್ರದಲ್ಲಿ ಹಾಸನ ನಗರಾಭಿವೃದ್ಧಿ ಪ್ರಾಧಿಕಾರವು ಹಾಸನ ಸ್ಥಳೀಯ ಯೋಜನಾ ಪ್ರದೇಶದ ಮಹಾ ಯೋಜನೆಯನ್ನು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(ಡಿ) ರನ್ವಯ ಪರಿಷ್ಕರಿಸಿ, ಮಹಾ ಯೋಜನೆ (ಪರಿಷ್ಕೃತ–1)ನ್ನು ರೂಪಿಸಿ ಸರ್ಕಾರದ ತಾತ್ಕಾಲಿಕ ಅನುಮೋದನೆಗಾಗಿ ಪ್ರಸ್ತಾವನೆಯನ್ನು ಸಲ್ಲಿಸಿದೆ.

ಮೇಲೆ ಓದಲಾದ (3)ರ ಏಕ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು, ಹಾಸನ ಸ್ಥಳೀಯ ಯೋಜನಾ ಪ್ರದೇಶದ ಜನಸಂಖ್ಯೆಯು 2021 ರಲ್ಲಿ 4.00 ಲಕ್ಷಗಳಿಗೆ ಬೆಳವಣಿಗೆಯಾಗುವುದಾಗಿ ಅಂದಾಜಿಸಿ ಮಹಾಯೋಜನೆ (ಪರಿಷ್ಕೃತ–1) ನ್ನು ರೂಪಿಸಲಾಗಿದೆ. ಹಾಸನ ನಗರ ಹಾಗೂ ಇತರ ಗ್ರಾಮಗಳನ್ನೊಳಗೊಂಡ ಸ್ಥಳಿಯ ಯೋಜನಾ ಪ್ರದೇಶದ ಜನಸಂಖ್ಯೆ, ಸಾಮಾಜಿಕ ಮತು ಆರ್ಥಿಕ ಸ್ಥಿತಿಗತಿ, ಹಾಲಿ ಬೆಳವಣಿಗೆಯ ಗತಿ, ಹವಾಗುಣ, ರಸ್ತೆಗಳ ಹಾಲಿ ಪರಿಚಲನೆ ವ್ಯವಸ್ಥೆಯ ಸಮಸ್ಯೆಗಳನ್ನು ವಿಶ್ಲೇಷಿಸಿ ಯೋಜನಾ ತತ್ವಗಳಿಗೆ ಅನುಗುಣವಾಗಿ ಹಾಗೂ ಮಹಾ ಯೋಜನೆಯ ತಯಾರಿಕೆ ಬಗ್ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಪ್ರಕರಣ (9) ರಿಂದ (12)ರವರೆಗೆ ನಿಗಧಿಪಡಿಸಿರುವ ಅಂಶಗಳನ್ನು ಪರಿಗಣಿಸಿ ನಗರದ ಯೋಜಿತ ಬೆಳವಣಿಗೆಗಾಗಿ ಪ್ರಸ್ತಾಪಿಸಿರುವ ಒಟ್ಟು 6718.55 ಹೆಕ್ಟೇರ್ ಪ್ರದೇಶದಲ್ಲಿ ವಸತಿಗಾಗಿ 2908.12 ಹೆಕ್ಟೇರ್ (ಶೇಕಡ 43.28) ವಾಣಿಜ್ಯಕ್ಕಾಗಿ 183.14 ಹೆಕ್ಟೇರ್ (ಶೇಕಡ 2.72) ಕೈಗಾರಿಕೆಗಾಗಿ 388.65 ಹೆಕ್ಟೇರ್ (ಶೇಕಡ 5.78), ಸಾರ್ವಜನಿಕ/ಅರೆ ಸಾರ್ವಜನಿಕ ವಲಯಕ್ಕೆ 529.15 ಹೆಕ್ಟೇರ್ (ಶೇಕಡ 7.87) ಉದ್ಯಾನವನ/ಬಯಲು ಜಾಗೆಗಳಿಗೆ 576.12 ಹೆಕ್ಟೇರ್ (ಶೇಕಡ 8.57), ಸಾರಿಗೆ ಮತ್ತು ಸಂಪರ್ಕ ವಲಯಕ್ಕೆ 2128.77 ಹೆಕ್ಟೇರ್ (ಶೇಕಡ 31.68?) ಹಾಗೂ ನಾಗರೀಕ ಸೌಲಭ್ಯಕ್ಕಾಗಿ 4.60 ಹೆಕ್ಟೇರ್ (ಶೇಕಡ 0.,068) ಪ್ರದೇಶವನ್ನು ನಿಗಧಿಪಡಿಸಲಾಗಿದೆ. ಮಹಾಯೋಜನೆಯನ್ನು ಅನುಷ್ಠಾನಕ್ಕೆ ತರಲು ಅಗತ್ಯವಿರುವ ವಲಯ ನಿಯಮಾವಳಿಗಳನ್ನು ರೂಪಿಸಲಾಗಿದೆ. ಸದರಿ ಮಹಾಯೋಜನೆಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(1) ರನ್ವಯ ಸರ್ಕಾರದ ತಾತ್ಕಾಲಿಕ ಅನುಮೋದನೆ ನೀಡಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ನಅಇ 874 ಮೈಅಪ್ರಾ 2008, ಬೆಂಗಳೂರು, ದಿನಾಂಕ:4ನೇ ಫೆಬ್ರವರಿ 2009**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಹಾಸನ ಸ್ಥಳೀಯ ಯೋಜನಾ ಪ್ರದೇಶಕ್ಕೆ ರೂಪಿಸಿರುವ ಮಹಾಯೋಜನೆ (ಪರಿಷ್ಕೃತ–1) ಗೆ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 13(1)ರನ್ವಯ ತಾತ್ಕಾಲಿಕ ಅನುಮೋದನೆಯನ್ನು ನೀಡಲಾಗಿದೆ.

ಮಹಾ ಯೋಜನೆ (ಪರಿಷ್ಕೃತ–1)ಗೆ ತಾತ್ಕಾಲಿಕ ಅನುಮೋದನೆ ನೀಡಿದ ಗುರುತಾಗಿ ವರದಿ ಹಾಗೂ ನಕ್ಷೆಗಳ ಮೇಲೆ ಸರ್ಕಾರದ ಮುದ್ರೆಯನ್ನು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 557 **ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ,

## ಸಾರಿಗೆ ಸಚಿವಾಲಯ

**ವಿಷಯ:** ಸಾರಿಗೆ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳ ಪೈಕಿ ಶೇ. 80 ರಷ್ಟು ಹುದ್ದೆಗಳನ್ನು ರದ್ದುಗೊಳಿಸುವ ಬಗ್ಗೆ–ಖಾಲಿ ಇರುವ ಗ್ರೂಪ್–ಡಿ ಹುದ್ದೆಗಳ ರದ್ದು ಆದೇಶ.

**ಓದಲಾಗಿದೆ :** 1 ದಿನಾಂಕ:20.11.2007 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಅಧಿಕಾರಯುತ ಸಮಿತಿಯ ಸಭೆಯ ನಡವಳಿಗಳು.

2 ಸರ್ಕಾರದ ಆದೇಶ ಸಂಖ್ಯೆ ಸಾರಿಇ 2 ಸಾಇಸೇ 208 ದಿನಾಂಕ:11.1.2008

3 ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ/ಎಫ್‌ಡಿ 869 ವೆಚ್ಚ–6/ 2008 ದಿನಾಂಕ:29.11.2008

**ಪ್ರಸ್ತಾವನೆ:**

ದಿನಾಂಕ:1–4–2000 ರಂದು ಸಾರಿಗೆ ಇಲಾಖೆಯಲ್ಲಿ ಖಾಲಿ ಇದ್ದ ಹುದ್ದೆಗಳ ಪೈಕಿ ಶೇ 80 ರಷ್ಟು ಹುದ್ದೆಗಳನ್ನು ರದ್ದುಪಡಿಸುವ ಸಂಬಂಧ, ದಿನಾಂಕ:20–11–2007 ರಂದು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಸಾರಿಗೆ ಇಲಾಖೆಯಲ್ಲಿ ಖಾಲಿಯಿರುವ ಹುದ್ದೆಗಳಲ್ಲಿ 40 ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳನ್ನು ರದ್ದುಗೊಳಿಸಲು ತೀರ್ಮಾನಿಸಿತ್ತು, ಹಾಗೂ ಬಾಹ್ಯ ಮೂಲದಿಂದ ಗ್ರೂಪ್–ಡಿ ಹುದ್ದೆಗಳನ್ನು ತುಂಬಬಹುದಾಗಿದ್ದು ಅದಕ್ಕೆ ಅಗತ್ಯವಾದ ಅನುದಾನವನ್ನು ಆರ್ಥಿಕ ಇಲಾಖೆಯು ಒದಗಿಸುವ ಷರತ್ತಿಗೊಳಪಟ್ಟು 49 ಗ್ರೂಪ್–ಡಿ ಹುದ್ದೆಗಳನ್ನು ರದ್ದುಪಡಿಸಲು ತೀರ್ಮಾನಿಸಲಾಗಿತ್ತು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ, ಸಾರಿಗೆ ಇಲಾಖೆಯಲ್ಲಿ ಇರುವ ದ್ವಿತೀಯ ದರ್ಜೆ ಸಹಾಯಕರ ಹುದ್ದೆಗಳ ಪೈಕಿ ಹಾಲಿ ಖಾಲಿ ಇದ್ದ ಹುದ್ದೆಗಳಲ್ಲಿ 40 ಹುದ್ದೆಗಳನ್ನು ರದ್ದುಪಡಿಸಲಾಗಿತ್ತು ಆರ್ಥಿಕ ಇಲಾಖೆಯು ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿನ ಟಿಪ್ಪಣಿಯಲ್ಲಿ ಸಾರಿಗೆ ಇಲಾಖೆಗೆ ಹಂಚಿಕೆ ಮಾಡಲಾದ ಆಯವ್ಯಯ ಅನುದಾನದಲ್ಲಿ ಹೆಚ್ಚುವರಿ/ಉಳಿತಾಯ ವಾಗಬಹುದಾದ ಅನುದಾನವನ್ನು ಗುರುತಿಸುವಂತೆ, ಒಂದು ವೇಳೆ ಹೆಚ್ಚುವರಿ/ಉಳಿತಾಯ ಅನುದಾನ ಲಭ್ಯವಿಲ್ಲದಿದ್ದಲ್ಲಿ, ಹೆಚ್ಚುವರಿ ಅನುದಾನಕ್ಕೆ ಆರ್ಥಿಕ ಇಲಾಖೆಯನ್ನು ಸಂಪರ್ಕಿಸುವಂತೆ ತಿಳಿಸಿ ಹುದ್ದೆಗಳನ್ನು ರದ್ದುಪಡಿಸುವಂತೆ ಸೂಚಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಸಾರಿಇ 2 ಸಾಇಸೇ 2008, ಬೆಂಗಳೂರು, ದಿನಾಂಕ:3ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸಾರಿಗೆ ಇಲಾಖೆಯಲ್ಲಿ ಖಾಲಿ ಇರುವ 32 ಗೂಪ್–ಡಿ ಹುದ್ದೆಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 558 **ಎಂ.ಆರ್. ಚಂದ್ರಶೇಖರಾರಾಧ್ಯ**

ಪೀಠಾಧಿಕಾರಿ, ಸಾರಿಗೆ ಇಲಾಖೆ,

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಮೈಸೂರು ನಗರ ಜೆ.ಸಿ.ಎಸ್.ಟಿ.ಜಿ ಮತ್ತು ಹೆಚ್ ಬಡಾವಣೆಯ ನಿವೇಶನ ಸಂಖ್ಯೆ 1031:ಬಿರ ತುಂಡುಜಾಗ (8.84+9.75) 24.38=226.62 ಚ.ಮೀ. ವಿಸ್ತೀರ್ಣದ ನಿವೇಶನವನ್ನು ವಸತಿ ವಲಯದಿಂದ ವಾಣಿಜ್ಯ ಉದ್ದೇಶಕ್ಕೆ ಭೂ ಉಪಯೋಗ ಬದಲಾವಣೆ ಮಾಡಲು ಕೋರಿರುವ ಬಗ್ಗೆ

**ಓದಲಾಗಿದೆ :** 1 ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರ ಪತ್ರ ಸಂಖ್ಯೆ: ಮೈನಪ್ರಾ: ನಯೋ:ಸಭೆ:85:08–09 ದಿನಾಂಕ:7.11.2008.

2 ದಿ:16.12.2008ರಂದು ಕಡತ ಸಂಖ್ಯೆ:ನಯೋ:ಉನಿ:ಭೂಉಬ:ಜೆಸಿಎಸ್‌ಟಿ:220:2008–09ರಲ್ಲಿ ನಗರ ಯೋಜನಾ ನಿರ್ದೇಶಕರು ನೀಡಿರುವ ಅಭಿಪ್ರಾಯ

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ನಗರಾಭಿವೃದ್ಧಿ ಪ್ರಾಧಿಕಾರ, ಮೈಸೂರು ಇವರು ಮೈಸೂರು ನಗರ ಜೆ.,ಸಿ.ಎಸ್.ಟಿ.ಜಿ. ಮತ್ತು ಹೆಚ್ ಬಡಾವಣೆಯ ನಿವೇಶನ ಸಂಖ್ಯೆ 1031:ಬಿರ ತುಂಡುಜಾಗ (8.84+9.75) 24.38=226.62 ಚ.ಮೀ. ವಿಸ್ತೀರ್ಣದ ನಿವೇಶನವನ್ನು ವಸತಿ ವಲಯದಿಂದ ವಾಣಿಜ್ಯ ಉದ್ದೇಶಕ್ಕೆ ಭೂ ಉಪಯೋಗ ಬದಲಾಯಿಸುವ ಕುರಿತು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(ಎ)ರನ್ವಯ ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಣೆಯನ್ನು ಹೊರಡಿಸಿದ್ದು, ಈ ಬಗ್ಗೆ ಯಾವುದೇ ಆಕ್ಷೇಪಣೆ ಬಂದಿರುವುದಿಲ್ಲವೆಂದು ತಿಳಿಸುತ್ತಾ ಪ್ರಸ್ತಾವನೆಯನ್ನು ಶಿಫಾರಸ್ಸು ಮಾಡಿ ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರ ಮುಖಾಂತರ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಕಡತದಲ್ಲಿ ನಗರ ಯೋಜನಾ ನಿರ್ದೇಶಕರು ಪ್ರಸ್ತಾವನೆಯನ್ನು ಪರಿಗಣಿಸಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ನಅಇ 866 ಮೈಅಪ್ರಾ 2008, ಬೆಂಗಳೂರು, ದಿನಾಂಕ:2ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ, 1961ರ ಕಲಂ 14(1)(ಎ)ರ ಪ್ರಕಾರ ಮೈಸೂರು ನಗರ ಜೆ.ಸಿ.ಎಸ್.ಟಿ.ಜಿ ಮತು ಹೆಚ್ ಬಡಾವಣೆಯ ನಿವೇಶನ ಸಂಖ್ಯೆ 1031:ಬಿರ ತುಂಡುಜಾಗ (8.84+9.75) 24. 38=226.62 ಚ.ಮೀ., ವಿಸ್ತೀರ್ಣದ ನಿವೇಶನವನ್ನು ವಸತಿ ವಲಯದಿಂದ ವಾಣಿಜ್ಯ ಉದ್ದೇಶಕ್ಕೆ ಭೂ ಬದಲಾವಣೆ ಮಾಡಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಸರ್ಕಾರದ ಅನುಮೋದನೆ ನೀಡಲಾಗಿದೆ.

1 ಪ್ರಸ್ತಾಪಿತ ಜಮೀನಿನ ಭೂ ಉಪಯೋಗ ಬದಲಾವಣೆ ಸಂಬಂಧ ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆಯ ಪ್ರಕರಣ 18ರನ್ವಯ ಶಾಸನಬದ್ದ ಶುಲ್ಕವನ್ನು ಪ್ರಾಧಿಕಾರಕ್ಕೆ ಅರ್ಜಿದಾರರು ಪಾವತಿಸತಕ್ಕದ್ದು.

2 ಈ ಭೂ ಉಪಯೋಗ ಬದಲಾವಣೆಯನ್ನು ಮಹಾ ಯೋಜನೆಯಲ್ಲಿ ಪ್ರಾಧಿಕಾರವು ಅಳವಡಿಸಿಕೊಳ್ಳತಕ್ಕದ್ದು

3 ಪ್ರಸ್ತಾಪಿತ ಜಮೀನಿನಲ್ಲಿ ಯಾವುದೇ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುವ ಮುನ್ನ ಅನುಮೋದಿತ ವಲಯ ನಿಯಮಾವಳಿಗಳನ್ವಯ ವಾಣಿಜ್ಯ ವಿನ್ಯಾಸಕ್ಕೆ ನಗರಾಭಿವೃದ್ಧಿ ಪ್ರಾಧಿಕಾರದಿಂದ ಅನುಮೋದನೆ ಪಡೆಯತಕ್ಕದ್ದು.

4 ಮಾಸ್ಟರ್ ಪ್ಲಾನ್ ಪರಿಷ್ಕರಣೆ ಸಂದರ್ಭದಲ್ಲಿ ಯೋಜನೆಯಲ್ಲಿ ಅಳವಡಿಸಬಹುದಾದ ಉದ್ದೇಶಿತ ರಸ್ತೆ ಪರಿಚಲನೆಗೆ ಬೇಕಾಗುವ ಅಗತ್ಯ ಜಮೀನನ್ನು ಬಿಟ್ಟುಕೊಡತಕ್ಕದ್ದು.

5 ಪ್ರಸ್ತಾವಿತ ವಾಣಿಜ್ಯ ಕಟ್ಟಡದಲ್ಲಿ ವಾಹನ ನಿಲುಗಡೆಗೆ ಅಗತ್ಯ ಸೌಲಭ್ಯವನ್ನು ಕಲ್ಪಿಸಿಕೊಳ್ಳತಕದ್ದು.

6 ಅರ್ಜಿದಾರರೇ ಸದರಿ ಜಮೀನಿನಲ್ಲಿ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಳ್ಳತಕ್ಕದ್ದು..

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 559

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ,

**ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ**

**ಸರ್ಕಾರಿ ಆದೇಶ ಸಂಖ್ಯೆ:ಪಸಂಮೀ 08 ಪಸಸೇ 2009, ಬೆಂಗಳೂರು, ದಿನಾಂಕ:5ನೇ ಫೆಬ್ರವರಿ 2009**

**ವಿಷಯ:** ಡಾ:ರುದ್ರಗೌಡ ಪಾಟೀಲ, ಪಶುವೈದ್ಯಾಧಿಕಾರಿ, ಪಶುಚಿಕಿತ್ಸಾಲಯ, ಹಳ್ಳೂರ, ಬಾಗಲಕೋಟೆ ಜಿಲ್ಲೆ ಇವರು ಪರೀಕ್ಷಾರ್ಥ ಅವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ದುರ್ವರ್ತನೆ ತೋರಿರುವುದರಿಂದ ಸರ್ಕಾರಿ ಸೇವೆಯಿಂದ ತೆಗೆದುಹಾಕುವ (Discharge) ಬಗ್ಗೆ.

**ಓದಲಾಗಿದೆ :** 1 ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ:ಆಪಸಂ/ಸಿಬ್ಬಂದಿ–2/ವಿವ–38/2007–08 ದಿನಾಂಕ:20–12–2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು, ಇವರ ಪಶು ಚಿಕಿತ್ಸಾಲಯ, ಹಳ್ಳೂರ, ಬಾಗಲಕೋಟೆ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ಇಲ್ಲಿ ಕಾರ್ಯನಿರ್ವಹಿಸುತ್ತಿರುವ ಡಾ:ರುದ್ರಗೌಡ ಪಾಟೀಲ, ಪಶುವೈದ್ಯಾಧಿಕಾರಿ ಇವರು ವೈಯಕ್ತಿಕ ಕಾರಣದ ಮೇಲೆ

ದಿನಾಂಕ:18.12.2007ರಿಂದ 27.,12.2007ರವರೆಗೆ 10 ದಿನಗಳು ಗಳಿಕೆ ರಜೆಯನ್ನು ಹಾಗೂ ವೈದ್ಯಕೀಯ ಕಾರಣದ ಮೇಲೆ ದಿನಾಂಕ:28.12.2007 ರಿಂದ 27.3.2008ರವರೆಗೆ ವೇತನ ರಹಿತ ರಜೆ ಪಡೆದಿದ್ದು ದಿನಾಂಕ:28.3.2008ರಂದು ಕರ್ತವ್ಯಕ್ಕೆ ಹಾಜರಾಗಬೇಕಾಗಿರುತ್ತದೆಂದು, ಆದರೆ ಸದರಿ ಅಧಿಕಾರಿಗಳು ಕಛೇರಿಗೆ ಮಾಹಿತಿ ನೀಡದೆ ದಿನಾಂಕ:28.3.2008ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿದ್ದು, ಕರ್ತವ್ಯಕ್ಕೆ ಹಾಜರಾಗುವಂತೆ ಸದರಿ ಅಧಿಕಾರಿಗಳ ಖಾಯಂ ವಿಳಾಸಕ್ಕೆ ಪತ್ರ ಬರೆಯಲಾಗಿದ್ದರೂ ಸಹ ಸದರಿ ಅಧಿಕಾರಿಗಳು ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ .ಈ ಬಗ್ಗೆ ಉಪನಿರ್ದೇಶಕರು, ಪಶುಪಾಲನಾ ಇಲಾಖೆ, ಬಾಗಲಕೋಟೆ ಇವರು ಸದರಿ ಅಧಿಕಾರಿಗಳು ಉನ್ನತ ವ್ಯಾಸಂಗಕ್ಕಾಗಿ ವಿದೇಶಕ್ಕೆ ತೆರಳಲಿರುವ ಬಗ್ಗೆ ಶಂಕೆ ವ್ಯಕ್ತಪಡಿಸಿ, ಅವರನ್ನು ಸೇವೆಯಿಂದ ವಜಾಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ. ಆದ್ದರಿಂದ ಡಾ:ರುದ್ರಗೌಡ ಪಾಟೀಲ, ಪಶುವೈದ್ಯಾಧಿಕಾರಿ ಇವರು ಖಾಯಂ ಪೂರ್ವ ಸೇವಾವಧಿಯಲ್ಲಿರುವಾಗಲೇ ಕರ್ತವ್ಯಕ್ಕೆ ಅನದಿಕೃತ ಗೈರುಹಾಜರಾಗಿರುವುದರಿಂದ ಉಪನಿರ್ದೇಶಕರ ಶಿಫಾರಸ್ಸಿನನ್ವಯ ಅವರನ್ನು ಸೇವೆಯಿಂದ ತೆಗೆದುಹಾಕುವಂತೆ ಆಯುಕ್ತರು ಸರ್ಕಾರವನ್ನು ಕೋರಿರುತ್ತಾರೆ.

2. ಡಾ: ರುದ್ರಗೌಡ ಪಾಟೀಲ, ಪಶುವೈದ್ಯಾಧಿಕಾರಿ ಇವರು ಪರೀಕ್ಷಾರ್ಥ ಅವಧಿಯಲ್ಲಿರುವಾಗಲೇ ಮೇಲಾಧಿಕಾರಿಗಳಿಂದ ರಜೆ ಮಂಜೂರಾತಿ ಮಾಡಿಸಿಕೊಳ್ಳದೇ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುತ್ತಾರೆ. ಕರ್ತವ್ಯಕ್ಕೆ ಹಾಜರಾಗುವಂತೆ ಸದರಿ ಅಧಿಕಾರಿಗಳ ಖಾಯಂ ವಿಳಾಸಕ್ಕೆ ಪತ್ರ ಬರೆದಿದ್ದರೂ ಸಹ ಅವರು ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ ಇದರಿಂದಾಗಿ ಅವರಿಗೆ ಸರ್ಕಾರಿ ಸೇವೆಯಲ್ಲಿ ಕಾರ್ಯನಿರ್ವಹಿಸಲು ಇಷ್ಟವಿಲ್ಲದಿರುವುದು ಎದ್ದು ಕಾಣುತ್ತದೆ. ಈ ದಿಸೆಯಲ್ಲಿ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಡಾ: ರುದ್ರಗೌಡ ಪಾಟೀಲ, ಪಶುವೈದ್ಯಾಧಿಕಾರಿ ಇವರಿಗೆ ಸರ್ಕಾರಿ ಸೇವೆಯಲ್ಲಿ ಮುಂದುವರೆಯುವಲ್ಲಿ ಅನಾಸಕ್ತಿ ಹಾಗೂ ಪರೀಕ್ಷಾರ್ಥ ಅವಧಿಯಲ್ಲಿ ದುರ್ವರ್ತನೆ ತೋರಿರುವ ಹಿನ್ನೆಲೆಯಲ್ಲಿ ಸದರಿ ಅಧಿಕಾರಿಯನ್ನು ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು 1977ರ ನಿಯಮ 6(1)ರನ್ವಯ ಸರ್ಕಾರಿ ಸೇವೆಯಿಂದ ತೆಗೆದುಹಾಕಲು ಸರ್ಕಾರ ತೀರ್ಮಾನಿಸಿದೆ. ಅದರಂತೆ ಈ ಆದೇಶ

**ಆದೇಶ**

3. ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಡಾ: ರುದ್ರಗೌಡ ಪಾಟೀಲ, ಪಶುವೈದ್ಯಾಧಿಕಾರಿ ಪಶುಚಿಕಿತ್ಸಾಲಯ, ಹಳ್ಳೂರ ,ಬಾಗಲಕೋಟೆ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ಇವರು ಮೇಲಾಧಿಕಾರಿಗಳಿಂದ ರಜೆ ಮಂಜೂರಾತಿ ಮಾಡಿಸಿಕೊಳ್ಳದೇ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದರಿಂದ ಹಾಗೂ ಪರೀಕ್ಷಾರ್ಥ ಅವಧಿಯಲ್ಲಿ ದುರ್ವರ್ತನೆ ತೋರಿ ಕರ್ತವ್ಯಲೋಪವೆಸಗಿರುವುದು ದೃಢಪಟ್ಟಿರುವುದರಿಂದ, ಆಯುಕ್ತರ ಶಿಫಾರಸ್ಸಿನನ್ವಯ ಡಾ:ರುದ್ರಗೌಡ ಪಾಟೀಲ ಪಶುವೈದ್ಯಾಧಿಕಾರಿ ಇವರನ್ನು ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು 1977ರ ನಿಯಮ 6(1)ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ತೆಗೆದುಹಾಕಲು (Discharge) ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 568

**ಎಂ.ಪಿ. ನಾಗರಾಜ**

ಸರ್ಕಾರದ ಅಧೀನ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ,
(ಪಶುಸಂಗೋಪನೆ–ಎ)

## ಕಾನೂನು. ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಬೆಂಗಳೂರು ನಗರದಲ್ಲಿ ಖಾಲಿಯಿರುವ ಎರಡು (ನೋಟರಿ ಹುದ್ದೆಗಳನ್ನು ಭರ್ತಿ ಮಾಡುವ ಕುರಿತು (ಶ್ರೀ ಸಿ. ದಿವಾಕರ್, ಮತ್ತು ಶ್ರೀ ಬಿ.ಎನ್. ಅಶೋಕ ಕುಮಾರ್ ರವರಿಂದ ತೆರವಾದ)– ಶ್ರೀಯುತರಾದ ಬಿ. ರಾಜಶೇಖರ್ ಮತ್ತು ಬಿ,ಆರ್, ಕೃಷ್ಣ ಇವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**

1 ಪ್ರಧಾನ ನಗರ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು, ನಗರ ಇವರ ಪತ್ರ ಸಂಖ್ಯೆ ಸಿಸಿಸಿ ಆಡಳಿತ ವಿಭಾಗ 1(ಬಿ)237:2007 ದಿನಾಂಕ:16.10.2007

2 ಸರ್ಕಾರಿ ಆದೇಶ ಸಂ.ಲಾ 156 ಎಲ್‌ಸಿಎಲ್ 07, ದಿನಾಂಕ:26.10.2007.

3 ಸರ್ಕಾರಿ ಪತ್ರ ಸಂಖ್ಯೆ ಲಾ 105 ಎಲ್‌ಸಿಎಲ್ 07, ದಿನಾಂಕ:28.11.2007 ಹಾಗೂ ಜ್ಞಾಪಕ ಪತ್ರ ದಿನಾಂಕ:6.2.2008

4 ಪ್ರಧಾನ ನಗರ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ನಗರ ಇವರ ಪತ್ರ ಸಂಖ್ಯೆ ಸಿಸಿಸಿ ಆಡಳಿತ 1(ಬಿ)36:2008 ದಿನಾಂಕ:12.2.2008

5 ಸರ್ಕಾರಿ ಪತ್ರ ಸಂಖ್ಯೆ ಲಾ 105 ಎಲ್ ಸಿಎಲ್ 07, ದಿನಾಂಕ:14.5.2008 ಹಾಗೂ ಜ್ಞಾಪಕ ಪತ್ರ ದಿನಾಂಕ:5.8.2008

6 ಪ್ರಧಾನ ನಗರ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು, ನಗರ ಇವರ ಪತ್ರ ಸಂಖ್ಯೆ ಎಡಿಎಂ–1(ಬಿ )197:2008 ದಿನಾಂಕ:12.8.2008.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:16.10.2007ರ ಪತ್ರದಲ್ಲಿ ಪ್ರಧಾನ ನಗರ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ನಗರ ಇವರು ಶ್ರೀ ಸಿ. ದಿವಾಕರ್, ನೊಟರಿ, ಬೆಂಗಳೂರು ನಗರ ಇವರು ದಿನಾಂಕ: 16.4.2007ರಂದು ನಿಧನರಾಗಿರುತ್ತಾರೆಂದು ಶ್ರೀಯುತರಿಂದ ತೆರವಾದ ಜಾಗ ಭರ್ತಿ ಮಾಡಬಹುದೆಂಬ ಅಭಿಪ್ರಾಯದೊಂದಿಗೆ ಮರಣ ಪ್ರಮಾಣ ಪತ್ರವನ್ನು ಸಲ್ಲಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ:26.10.2007ರ ಸರ್ಕಾರಿ ಆದೇಶದಲ್ಲಿ ಶ್ರೀ ಬಿ.ಎನ್. ಅಶೋಕ್ ಕುಮಾರ್ ನೋಟರಿ ಬೆಂಗಳೂರು ನಗರ ರವರ ಕೋರಿಕೆಯಂತೆ ಇವರ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ತೆಗೆದುಹಾಕಲಾಗಿರುತ್ತದೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ:28.11.2007ರ ಸರ್ಕಾರದ ಪತ್ರ ಹಾಗೂ ದಿನಾಂಕ:6.2.2008 ಜ್ಞಾಪಕ ಪತ್ರದಲ್ಲಿ ಉಲ್ಲೇಖಿತ ಎರಡು ನೋಟರಿ ಹುದ್ದೆಗಳನ್ನು ಭರ್ತಿ ಮಾಡಲು ನೋಟರಿ ಅಧಿನಿಯಮ ಹಾಗೂ ನಿಯಮಗಳ ಮೇರೆಗೆ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಕಳುಹಿಸಿಕೊಡುವಂತೆ ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು, ನಗರ ಇವರನ್ನು ಕೊರಲಾಗಿತ್ತು, ಅದರಂತೆ ಮೇಲೆ (4) ರಲ್ಲಿ ಓದಲಾದ ದಿನಾಂಕ:12.2.2008ರ ಪತ್ರದಲ್ಲಿ ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ನಗರ ಇವರು 39 ಜನರ ಮನವಿಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಆದರೆ, ಸದರಿ ಮನವಿಗಳಿಗೆ ಸಂಬಂಧಿಸಿದಂತೆ ನೊಟರಿ ನಿಯಮ 7(3)ರನ್ವಯ ಪರಿಶೀಲನಾ ವರದಿ ಸಲ್ಲಿಸಿರಲಿಲ್ಲವಾದ್ದರಿಂದ, ಮೇಲೆ (5)ರಲ್ಲಿ ಓದಲಾದ ದಿನಾಂಕ:14.5.2008 ಹಾಗೂ 5.8.2008ರ ಜ್ಞಾಪಕ ಪತ್ರದಲ್ಲಿ ನೋಟರಿ ನಿಯಮಗಳು 1956ರ ನಿಯಮ 7(3)ರ ರೀತ್ಯಾ ಹಾಗೂ ಕಾನೂನು ಅಧಿಕಾರಿಗಳ ನಿಯಮಾವಳಿ 1977ರ ನಿಯಮ 12(ಬಿ) ರನ್ವಯ ಮನವಿದಾರರು ಮತ್ತೊಂದು ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವರೇ? ಇಲ್ಲವೇ? ಎಂಬ ಬಗ್ಗೆ ಪರಿಶೀಲಿಸಿ ಪರಿಶೀಲನಾ ವರದಿಯೊಂದಿಗೆ ಪ್ರಸ್ತಾವನೆಯನ್ನು ಮರು ಸಲ್ಲಿಸುವಂತೆ ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು, ನಗರ ಇವರನ್ನು ಕೊರಲಾಗಿತ್ತು.

ಮೇಲೆ (6)ರಲ್ಲಿ ಓದಲಾದ ದಿನಾಂಕ:12.,8.2008 ಪತ್ರದಲ್ಲಿ ಪ್ರಧಾನ ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ನಗರ ಇವರು ನೇಮಕಾತಿಗಾಗಿ ಹಿಂದೆ ಹೊರಡಿಸಿದ್ದ ಅಧಿಸೂಚನೆಯನ್ನು ರದ್ದುಗೊಳಿಸಿ ಪುನಃ ಅರ್ಜಿಗಳನ್ನು ಆಹ್ವಾನಿಸಿ ಆ ಬಗ್ಗೆ ಸ್ವೀಕರಿಸಿದ 36 ಜನರ ಮನವಿಯನ್ನು ಈ ಹಿಂದೆ ಸಲ್ಲಿಸಿದ್ದ 39 ಜನರ ಮನವಿಗಳೊಂದಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ ಅವುಗಳನ್ನು ಪರಿಶೀಲಿಸಲಾಗಿದೆ. ಕೆಲವರು ಎರಡು ಬಾರಿಯು ಮನವಿಗಳನ್ನು ಸಲ್ಲಿಸಿದ್ದಾರೆ.

ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರಿಂದ ಸ್ವೀಕೃತಗೊಂಡ (36+39) ಎಲ್ಲಾ ಮನವಿಗಳನ್ನು ಪರಿಗಣಿಸಿ 2 ಖಾಲಿ ಹುದ್ದೆಗಳಿಗಾಗಿ ಅವರಲ್ಲಿ ಇಬ್ಬರನ್ನು ನೇಮಕಗೊಳಿಸಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ:ಲಾ 105 ಎಲ್‌ಸಿಎಲ್ 2007, ಬೆಂಗಳೂರು, ದಿನಾಂಕ:2ನೇ ಫೆಬ್ರವರಿ 2009**

ನೋಟರಿ ಅಧಿನಿಯಮ (1952) ಹಾಗೂ ಇದರ ಅಡಿಯಲ್ಲಿ ರಚಿಸಲಾಗಿರುವ ನೋಟರಿ ನಿಯಮಗಳು (1956)ರ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ಈ ಕೆಳಕಂಡ ಇಬ್ಬರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಬೆಂಗಳೂರು ನಗರ ಕಂದಾಯ ತಾಲ್ಲೂಕಿಗೆ ನೋಟರಿಯನ್ನಾಗಿ ನೇಮಿಸಿದೆ.

1 ಶ್ರೀ ಬಿ.ರಾಜಶೇಖರ, ವಕೀಲರು, ನಂ 1130/13, 2ನೇ ಕ್ರಾಸ್ 3ನೇ ಮುಖ್ಯ ರಸ್ತೆ, ವಿಜಯನಗರ, ಬೆಂಗಳೂರು–40

2 ಶ್ರೀ ಬಿ.ಆರ್. ಕೃಷ್ಣ ವಕೀಲರು, ನಂ. 30, 6ನೇ ಕ್ರಾಸ್, 6ನೇ ಮೈನ್, ಸಂಪಂಗಿರಾಮನಗರ, ಬೆಂಗಳೂರು–27

ಸದರಿ ವಕೀಲರು, ನಿಯಮಾನುಸಾರ ನಿಗಧಿಪಡಿಸಲಾದ ರೂ. 1000/– (ರೂಪಾಯಿ ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಲೆಕ್ಕ ಶೀರ್ಷಿಕೆ 0070–ಇತರೆ–ಆಡಳಿತಾತ್ಮಕ ಸೇವೆಗಳು–01–ನ್ಯಾಯ ಪರಿಪಾಲನೆ–501–0–ಇತರೆ ಸ್ವೀಕೃತಿಗಳು–06–ಇತರೆ ಬಾಬುಗಳಿಗೆ (0070–01–501–0–06) ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ವೃತ್ತಿ ಪ್ರಮಾಣ ಪತ್ರವನ್ನು ನೀಡಲಾಗುವುದು. ತದನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ 1952ರ ಸೆಕ್ಷನ್ 4ರಡಿಯಲ್ಲಿ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು, ಈ ಸಂಬಂಧದ ವೆಚ್ಚವನ್ನು ವಕೀಲರೆ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 570

**ಹೆಚ್.ಆರ್. ಶಕುಂತಲ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2), ಕಾನೂನು. ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**

**ಸುತ್ತೋಲೆ**

**ಸಂಖ್ಯೆ:ಸಿಐ 242 ಎಸ್‌ಪಿಐ 2007, ಬೆಂಗಳೂರು, ದಿನಾಂಕ:4ನೇ ಫೆಬ್ರವರಿ 2009**

**ವಿಷಯ:** ಕೈಗಾರಿಕಾ ನೀತಿ 2006–11ರ ಕೆಲವು ಕಂಡಿಕೆಗಳಿಗೆ ತಿದ್ದುಪಡಿ ಮಾಡುವ ಬಗ್ಗೆ.

**ಓದಲಾಗಿದೆ :** 1 ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ : FD 33 Exp-I/08 ದಿನಾಂಕ:28.5.2008

2 ಆಯುಕ್ತರು ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ರವರ ಪತ್ರ ಸಂಖ್ಯೆ:ಕೈಅ/ಇ3/ಕೈ.ನೀ/08–09 ದಿನಾಂಕ:28.1.2009.

**2. ವಿವಿಧ ಕೈಗಾರಿಕೆಗಳ ವರ್ಗಗಳಲ್ಲಿ ಆಗಿಂದಾಗ್ಗೆ ಕೇಂದ್ರ ಸರ್ಕಾರವು ಬಂಡವಾಳ ಮಿತಿಯನ್ನು ಬದಲಾಯಿಸುತ್ತಿರುವುದನ್ನು ಕೈಗಾರಿಕಾ ನೀತಿಯಲ್ಲಿ ಅಳವಡಿಸಿಕೊಳ್ಳುವ ಬಗ್ಗೆ:**

ಕೈಗಾರಿಕಾ ನೀತಿ 2006–11ರ ಕಂಡಿಕೆ 5.6 (ಸಿ)ಯಲ್ಲಿ ತಿಳಿಸಿದಂತೆ ಹಾಗೂ ಈ ಕಂಡಿಕೆಗೆ ಆರ್ಥಿಕ ಇಲಾಖೆಯು ಉಲ್ಲೇಖ (1)ರಲ್ಲಿ ಒಪ್ಪಿಗೆ ನೀಡಿರುವುದರಿಂದ ವಿವಿಧ ಕೈಗಾರಿಕೆಗಳ ವರ್ಗಗಳಲ್ಲಿ ಕೇಂದ್ರ ಸರ್ಕಾರವು ಬಂಡವಾಳ ಹೂಡಿಕೆ ಮಿತಿಯನ್ನು ಬದಲಾಯಿಸುತ್ತಿರುವುದನ್ನು ಕರ್ನಾಟಕ ಸರ್ಕಾರ ಕೈಗಾರಿಕಾ ನೀರಿ 2006–11ರಲ್ಲಿ ಅಳವಡಿಸಿಕೊಳ್ಳಬಹದಾಗಿದೆ.

**2. ಕೈಗಾರಿಕಾ ಘಟಕಗಳು ತಮ್ಮ ನಿವೇಶನ/ಮಳಿಗೆಗಳ ಶುದ್ಧ ಕ್ರಯ ಪತ್ರ ನೊಂದಾಯಿಸಿಕೊಳ್ಳಲು ಮುದ್ರಾಂಕ ಶುಲ್ಕ ವಿನಾಯಿತಿ ಪಡೆಯುವ ಬಗ್ಗೆ.**

2006–11 ಕೈಗಾರಿಕಾ ನೀತಿ ಅವಧಿಯ ಅನುಷ್ಠಾನಕ್ಕೆ ಮುನ್ನ ಕೆ.ಎಸ್.ಎಸ್.ಐ.ಡಿ.ಸಿ ಮತ್ತು ಕೆ.ಐ.ಎ.ಡಿ.ಬಿ ವತಿಯಿಂದ ಫ್ಲಾಟ್‌ಗಳನ್ನು/ಶೆಡ್‌ಗಳನ್ನು ಲೀಸ್–ಕಂ–ಸೇಲ್ ಆಧಾರದ ಮೇಲೆ ಪಡೆದು ಕೈಗಾರಿಕಾ ಘಟಕಗಳನ್ನು ಸ್ಥಾಪಿಸಿ ಲೀಸ್ ಅವಧಿ ಮುಗಿದ ನಂತರ ಶುದ್ಧ ಕ್ರಯ ಪತ್ರವನ್ನು ಸಂಬಂಧಿಸಿದ ನಿಗಮ ಮತ್ತು ಮಂಡಳಿಗಳೊಂದಿಗೆ ನೋಂದಣಿ ಮಾಡಿಕೊಳ್ಳುವಾಗ ಮುದ್ರಾಂಕ ಶುಲ್ಕಕ್ಕೆ ಕೆಳಕಂಡಂತೆ ವಿನಾಯಿತಿ ನೀಡಲಾಗಿದೆ.

ಮುದ್ರಾಂಕ ಶುಲ್ಕ ವಿನಾಯಿತಿ

ವಲಯ–1ರಲ್ಲಿ ಪೂರ್ಣ ವಿನಾಯಿತಿ

ವಲಯ–2ರಲ್ಲಿ ಶೇ. 75 ರಷ್ಟು ವಿನಾಯಿತಿ

ವಲಯ–3ರಲ್ಲಿ ಯಾವುದೇ ರೀತಿಯ ವಿನಾಯಿತಿ ಲಭ್ಯವಿರುವುದಿಲ್ಲ.

3. ಈ ಸುತ್ತೋಲೆಯ ಕಾಲಾವಧಿಯು ಹೊಸ ಕೈಗಾರಿಕಾ ನೀತಿ 2009–14 ಜಾರಿಗೆ ತರುವವರೆವಿಗೂ ಅಸ್ಥಿತ್ವದಲ್ಲಿರುತ್ತದೆ.

**ಸುಬೀರ್ ಹರಿಸಿಂಗ್**

ಪಿ.ಆರ್. 571 ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ವಿಷಯ:** ಶಿವಮೊಗ್ಗದಲ್ಲಿ ಆಹಾರ ಪಾರ್ಕ್ ಸ್ಥಾಪನೆಗೆ ಎರಡನೇ ಕಂತಿನ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1 ಅಧಿಕ ನಿರ್ದೇಶಕರು (ಸಪ್ರಕೈ), ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ರವರ ಪತ್ರ ಸಂಖ್ಯೆ: ಸಪಕೈ/ಎಸ್1/ಆಹಾರ ಪಾರ್ಕ್/17/2008–09 ದಿನಾಂಕ:30–12–2008.

2 ಸರ್ಕಾರಿ ಆದೇಶ ಸಂಖ್ಯೆ:ಸಿಐ 282 ಎಸ್ ಪಿಐ 2009 ದಿನಾಂಕ:29–1–2009

3 ಅಧಿಕ ನಿರ್ದೇಶಕರು (ಸಪ್ರಕೈ), ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ರವರ ಪತ್ರ ಸಂಖ್ಯೆ:ಸಪ್ರಕೈ/ಎಸ್ 1/ಆಹಾರ ಪಾರ್ಕ್/17/2008–09 ದಿನಾಂಕ:6.2.2009.

**ಪ್ರಸ್ತಾವನೆ:**

ಮಾನ್ಯ ಮುಖ್ಯಮಂತ್ರಿ ಯವರು ಕರ್ನಾಟಕ ರಾಜ್ಯದ ಆಯವ್ಯಯ 2008–09 ರಲ್ಲಿ ಶಿವಮೊಗ್ಗ ಜಿಲ್ಲೆಯಲ್ಲಿ ಆಹಾರ ಸಂಸ್ಕರಣ ಪಾರ್ಕ್ ಸ್ಥಾಪಿಸಲಾಗುವುದೆಂದು ತಿಳಿಸಿರುತ್ತಾರೆ

ಈ ಯೋಜನೆ ಅನುಷ್ಠಾನಗೊಳಿಸುವ ಸಂಬಂಧ ಆಹಾರ ಕರ್ನಾಟಕ ನಿಯಮಿತ, ಜಿಲ್ಲಾ ಕೈಗಾರಿಕಾ ಕೇಂದ್ರ, ಕಂದಾಯ ಇಲಾಖೆ ಮತ್ತು ಕೆ.ಐ.ಎ.ಡಿ.ಬಿ. ರವರುಗಳು ಸೋಗಾನೆ ಗ್ರಾಮ, ನಿಧಿಗೆ ಹೋಬಳಿ ಶಿವಮೊಗ್ಗ ತಾಲ್ಲೂಕಿನ ಬಿ.ಹೆಚ್ ರಸ್ತೆಯಲ್ಲಿರುವ ಸರ್ವೆ ನಂ 120 ರಲ್ಲಿರುವ 100 ಎಕರೆ ಭೂಮಿಯನ್ನು ಆಹಾರ ಪಾರ್ಕ್ ಸ್ಥಾಪನೆಗಾಗಿ ಗುರುತಿಸಿರುತ್ತಾರೆ. ಸದರಿ ಜಮೀನನ್ನು ಸ್ವಾಧೀನಪಡಿಸಿಕೊಳ್ಳಲು ಹಾಗೂ ಮೆ:ಐಡೆಕ್ ಲಿಮಿಟೆಡ್, ಬೆಂಗಳೂರು ಸಂಸ್ಥೆಗೆ ಆಹಾರ ಪಾರ್ಕ್ ಸ್ಥಾಪನೆಗೆ ಸಂಬಂಧಿಸಿದಂತೆ ಪ್ರಿ ಇನ್ವೆಸ್ಟ್‌ಮೆಂಟ್ ಫೀಸಿಬಿಲಿಟಿ ವರದಿ ತಯಾರಿಸಲು ರೂ. 2.00ಕೋಟಿ ಬಿಡುಗಡೆ ಮಾಡುವಂತೆ ಅಧಿಕ

ನಿರ್ದೇಶಕರು (ಸಪ್ರಕೈ) ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ರವರು ಮೇಲೆ ಓದಲಾದ ಉಲ್ಲೇಖ (1)ರಲ್ಲಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಅದರಂತೆ, ಮೇಲೆ ಓದಲಾದ ಉಲ್ಲೇಖ (2)ರಲ್ಲಿ ಸರ್ಕಾರಿ ಆದೇಶವನ್ನು ಹೊರಡಿಸಿ, ಮೊದಲನೇ ಕಂತು ರೂ. 1.00 ಕೋಟಿಯನ್ನು ಈಗಾಲೇ ಬಿಡುಗಡೆ ಮಾಡಲಾಗಿದೆ. ಈಗ ಉಲ್ಲೇಖ (3)ರಲ್ಲಿ ಉಳಿದ ರೂ. 1.00 ಕೋಟಿಗಳನ್ನು ಬಿಡುಗಡೆ ಮಾಡುವಂತೆ ಅಧಿಕ ನಿರ್ದೇಶಕರು (ಸಪ್ರಕೈ) ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ರವರು ಕೋರಿರುತ್ತಾರೆ. ಆದುದರಿಂದ ಈ ಕೆಳಕಂಡ ಆದೇಶ:

**ಸರ್ಕಾರಿ ಆದೇಶ ಕ್ರಮ ಸಂಖ್ಯೆ:ಸಿಐ 282 ಎಸ್‌ಪಿಐ 2008, ಬೆಂಗಳೂರು, ದಿನಾಂಕ:9ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಶಿವಮೊಗ್ಗದಲ್ಲಿ ಆಹಾರ ಪಾರ್ಕ್ ಸ್ಥಾಪನೆಗಾಗಿ ಸೋಗಾನೆ ಗ್ರಾಮ, ನಿಧಿಗೆ ಹೋಬಳಿ, ಶಿವಮೊಗ್ಗ ತಾಲ್ಲೂಕು, ಇಲ್ಲಿಯ ಬಿ.ಹೆಚ್. ರಸ್ತೆಯಲ್ಲಿರುವ ಸರ್ವೆ ನಂ 120 ರಲ್ಲಿರುವ 100 ಎಕರೆ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಲು ಹಾಗೂ ಪ್ರಿ ಇನ್ವೆಸ್ಟ್‌ಮೆಂಟ್ ಫಿಸಿಬಿಲಿಟಿ ವರದಿ ತಯಾರಿಸಲು 2008–09ನೇ ಸಾಲಿನ ಲೆಕ್ಕ ಶೀರ್ಷಿಕೆ ಶಿವಮೊಗ್ಗ ಆಹಾರ ಪಾರ್ಕ್ "4851–00–800–5–00–132" Capital Expenses ರಡಿಯಲ್ಲಿ ಎರಡನೇ ಕಂತಿನ ರೂ. 1.00 ಕೋಟಿ (ರೂಪಾಯಿ ಒಂದು ಕೋಟಿ ಮಾತ್ರ) ಅನುದಾನವನ್ನು ಬಿಡುಗಡೆ ಮಾಡಲಾಗಿದೆ.

ಸದರಿ ಮೊತ್ತವನ್ನು ವಿಶೇಷ ಅಧಿಕಾರಿ, ಆಹಾರ ಕರ್ನಾಟಕ ನಿಯಮಿತ, ಬೆಂಗಳೂರು ರವರು ಸ್ವೀಕೃತಿ ರಸೀದಿಯ ಮೇಲೆ ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆರವರ ಮೇಲು ರುಜು ಪಡೆದು ಖಜಾನೆಯಿಂದ ಡ್ರಾ ಮಾಡಲು ಆದೇಶಿಸಿದೆ.

ಈ ಮೊತ್ತವನ್ನು 2008–09 ಸಾಲಿನಲ್ಲಿ ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಯ ಲೆಕ್ಕಶೀರ್ಷಿಕೆ ಶಿವಮೊಗ್ಗ ಆಹಾರ ಪಾರ್ಕ್"4851–00–800–5–00–132" Capital Expenses ಅಡಿ ಲಭ್ಯವಿರುವ ಆಯವ್ಯಯದಿಂದ ಭರಿಸುವುದು.

ಆರ್ಥಿಕ ಇಲಾಖೆ ಆದೇಶ ಸಂಖ್ಯೆ:ಎಫ್ ಡಿ 1 ಟಿಎಫ್‌ಪಿ 2008 ದಿನಾಂಕ:16.5.2008 ರನ್ವಯ ಕಾರ್ಯದರ್ಶಿಗಳಿಗೆ ಅನುದಾನ ಬಿಡುಗಡೆ ಮಾಡಲು ಪ್ರತ್ಯಾಯೋಜಿಸಿರುವ ಅಧಿಕಾರದಡಿ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 572

**ಅಪರ್ಣ ಪಾವಟೆ**

ಪೀಠಾಧಿಕಾರಿ (ತಾಂತ್ರಿಕ ಕೋಶ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,

**URBAN DEVELOPMENT SECRETARIAT**

**Sub :** Creation of 6 additional Accountant posts in Expert Management Cell under Directorate of Municipal Administration for F.B. A.S project-reg

**Read :**
1) Government Order No. UDD 92 PRJ 2005, dated:25.5.2005.
2) Government Order No. UDD 16 CRJ 2006, dated:1.2.2006.
3) Government Order No. UDD 2 CSR 2008, dated:11.3.2008.
4) Meting proceedings of 11 the meeting of empowered committee held on 5.12.2008

**PREAMBLE:**

The Government in its orders cited under reference 1,2 and 3 have accorded sanction for creation of an Expert Management Cell under Directorate of Municipal Administration with the following posts:

| Sl. No. | Name of the Post | No. of Posts |
|---|---|---|
| 1 | Deputy Controller | 2 |
| 2 | Accounts Superintendent | 1 |
| 3 | Stenographer | 2 |
| 4 | First Division Assistant | 2 |
| 5 | Second Division Assistant | 1 |
| 6 | System Analyst/Data Entry Operator | 2 |
| 7 | Accountant | 1 |

| | | |
|---|---|---|
| 8 | Office Manager | 1 |
| 9 | Group-D | 2 |

The Director, Directorate of Municipal Administration, has proposed to Empowerd Committee for creation of 6 additional Accountant posts in Expert Management Cell under Directorate Municipal Administration considering the quantum of work involved. The proposal of the Director has been approved by the Empowered Committee in its 11th meeting held on 5.12.2008 for creation of 6 additional Accountant posts in the pay scale of Rs 8,000-14,800, if filled on deputation or a consolidated pay of Rs 12,000 if filled on contract basis in lieu of existing vacant posts of stenographers (2), System Analyst/Data Entry operator (2) and Group-D (2) with a condition that these posts will be co-terminus with the project.

Considering the above aspects, the Director, Directorate of Municipal Administration, has sent the proposal to Government to accord sanction for creation of 6 Accountant posts and abolition of posts of Stenographers (2), System Analyst/Data Entry Operator (2) and Group-D(2) The proposal has been examined and the following order is issued.

**Government Order No:UDD 15 BMS 2009, Bangalore, dated:7th February 2009,**

In the circumstances explained above, sanction is accorded for creation of six additional Accountant posts in the pay scale of Rs 8,000-14,800 if filled on deputation or a consolidated pay of Rs .12,000 if filled on contract basis to strengthen the Expert Management Cell subject to the condition that these posts shall be co-terminus with the project and the posts cited below abolished with immediate effect:

| Sl. No. | Name of the Post | No. of Posts |
|---|---|---|
| 1 | Stenographer | 2 |
| 2 | System Analyst /Data Entry Operator | 2 |
| 3 | Group-D | 2 |

This proposal is approved by the Empowered Committee for the World Bank Assisted Karnataka Municipal Reforms Project (KMRP), KUIDFC vide proceedings dated:5.12.2008.

The expenditure for newly created posts shall be met under KMR Project fund.

By order and in the name of the Governor of Karnataka

P.R. 577 **C.R. RAVINDRA**

Under Secretary to Government, Urban Development, Department

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಕರ್ನಾಟಕ ವೈದ್ಯಕೀಯ ವಿಜ್ಞಾನಿಗಳ ಸಂಸ್ಥೆ, ಹುಬ್ಬಳ್ಳಿ ಮತ್ತು ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬಳ್ಳಾರಿ ಇವುಗಳ ಆಡಳಿತ ಮಂಡಳಿ ಮತ್ತು ಆರ್ಥಿಕ ಸಮಿತಿಗಳನ್ನು ಪುನರ್ ರಚಿಸುವ ಬಗ್ಗೆ.

**ಪ್ರಸ್ತಾವನೆ:**

ಕರ್ನಾಟಕ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹುಬ್ಬಳ್ಳಿ ಮತ್ತು ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬಳ್ಳಾರಿ ಇವುಗಳ ಆಡಳಿತ ಮಂಡಳಿ ಮತ್ತು ಆರ್ಥಿಕ ಸಮಿತಿಗಳನ್ನು ಪುನರ್ ರಚಿಸಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ :ಆಕುಕ 138 ಕೆವಿಎಂ 2008, ಬೆಂಗಳೂರು, ದಿನಾಂಕ:31ನೇ ಜನವರಿ 2009**

**1. ಆಡಳಿ ಮಂಡಳಿ:**

| | | |
|---|---|---|
| 1 | ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು, ಕರ್ನಾಟಕ ಸರ್ಕಾರ, ವಿಧಾನಸೌಧ, ಬೆಂಗಳೂರು, | ಅಧ್ಯಕ್ಷರು |
| 2 | ಸರ್ಕಾರದ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ), ವಿಧಾನ ಸೌಧ, ಬೆಂಗಳೂರು | ಉಪಾಧ್ಯಕ್ಷರು |

| | | |
|---|---|---|
| 3 | ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಆರ್ಥಿಕ ಇಲಾಖೆ, ವಿಧಾನ ಸೌಧ ಬೆಂಗಳೂರು, | ಸದಸ್ಯರು |
| 4 | ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಬೆಂಗಳೂರು, | ಸದಸ್ಯರು |
| 5 | ಕುಲಪತಿಗಳು, ರಾಜೀವ್ ಗಾಂಧಿ ಆರೋಗ್ಯ ವಿಶ್ವವಿದ್ಯಾಲಯ, ಬೆಂಗಳೂರು | ಸದಸ್ಯರು |
| 6 | ಸರ್ಕಾರದ ಅಪರ ಕಾರ್ಯದರ್ಶಿ/ಜಂಟಿ ಕಾರ್ಯದರ್ಶೀ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)_ ವಿಕಾಸ ಸೌಧ, ಬೆಂಗಳೂರು | ಸದಸ್ಯರು |
| 7 | ನಿರ್ದೇಶಕರು, ವೈದ್ಯಕೀಯ ಶಿಕ್ಷಣ, ಆನಂದರಾವ್ ವೃತ್ತ, ಬೆಂಗಳೂರು, | ಸದಸ್ಯರು |
| 8 | ಒಬ್ಬರು ಅಥವಾ ಇಬ್ಬರು ನುರಿತ ತಜ್ಞರು, ವೈದ್ಯಕೀಯ ಶಿಕ್ಷಣ ವಲಯದಿಂದ | ಸದಸ್ಯರು |
| 9 | ನಿರ್ದೇಶಕರು, ಸಂಬಂಧಪಟ್ಟ ಸಂಸ್ಥೆ | ಸದಸ್ಯರು ಕಾರ್ಯದರ್ಶಿ |

**2. ಆರ್ಥಿಕ ಸಮಿತಿ::**

| | | |
|---|---|---|
| 1 | ಸರ್ಕಾರದ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ), ವಿಧಾನ ಸೌಧ, ಬೆಂಗಳೂರು | ಅಧ್ಯಕ್ಷರು |
| 2 | ಸರ್ಕಾರದ ಅಪರ ಕಾರ್ಯದರ್ಶಿ/ಜಂಟಿ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)_ ಬೆಂಗಳೂರು | ಸದಸ್ಯರು |
| 3 | ಸರ್ಕಾರದ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆ ಇಲ್ಲದ ಆರ್ಥಿಕ ಇಲಾಖೆಯ ಪ್ರತಿನಿಧಿ, ವಿಧಾನಸೌಧ, ಬೆಂಗಳೂರು | ಸದಸ್ಯರು |
| 4 | ನಿರ್ದೇಶಕರು, ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಆನಂದರಾವ್ ವೃತ್ತ, ಬೆಂಗಳೂರು, ಅಥವಾ ಅವರ ಪ್ರತಿನಿಧಿ ಜಂಟಿ ನಿರ್ದೇಶಕರಿಗಿಂತ ಕಡಿಮೆ ಇಲ್ಲದ ಅಧಿಕಾರಿ | ಸದಸ್ಯರು |
| 5 | ಆರ್ಥಿಕ ಸಲಹೆಗಾರರು ಮತ್ತು ಮುಖ್ಯ ಲೆಕ್ಕಾಧಿಕಾರಿ, ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು | ಸದಸ್ಯರು |
| 6 | ಪ್ರಾಂಶುಪಾಲರು, ಸಂಬಂಧಪಟ್ಟ ಸಂಸ್ಥೆ | ಸದಸ್ಯರು |
| 7 | ನಿರ್ದೇಶಕರು, ಸಂಬಂಧಪಟ್ಟ ಸಂಸ್ಥೆ | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 583

**ವಿ. ಶ್ರೀರಾಮರೆಡ್ಡಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ(ವೈದ್ಯಕೀಯ ಶಿಕ್ಷಣ),

**ವಿಷಯ:** ಕರ್ನಾಟಕ ರಾಜ್ಯದಲ್ಲಿ ಸ್ಥಾಪಿತವಾಗಿರುವ ಆರು ಹೊಸ ವೈದ್ಯಕೀಯ ಕಾಲೇಜುಗಳ ಆಡಳಿತ ಮಂಡಳಿ ಮತ್ತು ಆರ್ಥಿಕ ಸಮಿತಿಗಳನ್ನು ಪುನರ್ ರಚಿಸುವ ಬಗ್ಗೆ.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯದಲ್ಲಿ ಸ್ಥಾಪಿತವಾಗಿರುವ ಆರು ಹೊಸ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಹಾಸನ, ಮಂಡ್ಯ, ಬೆಳಗಾಂ, ಶಿವಮೊಗ್ಗ, ರಾಯಚೂರು, ಮತ್ತು ಬೀದರ್ ಇವುಗಳ ಆಡಳಿತ ಮಂಡಳಿ ಮತ್ತು ಆರ್ಥಿಕ ಸಮಿತಿಗಳನ್ನು ಪುನರ್ ರಚಿಸಲು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ :ಆಕುಕ 467 ಎಂಎಂಎಸಿ 2008, ಬೆಂಗಳೂರು, ದಿನಾಂಕ:**

ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹಾಸನ, ಮಂಡ್ಯ, ಬೆಳಗಾಂ, ಶಿವಮೊಗ್ಗ, ರಾಯಚೂರು, ಮತ್ತು ಬೀದರ್ ಇವುಗಳ ಆಡಳಿತ ಮಂಡಳಿ ಮತ್ತು ಆರ್ಥಿಕ ಸಮಿತಿಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ ಪುನರ್ ರಚಿಸಲಾಗಿದೆ.

**1. ಆಡಳಿತ ಮಂಡಳಿ:**

| | | |
|---|---|---|
| 1 | ವೈದ್ಯಕೀಯ ಶಿಕ್ಷಣ ಸಚಿವರು, ಕರ್ನಾಟಕ ಸರ್ಕಾರ, ವಿಧಾನಸೌಧ, ಬೆಂಗಳೂರು, | ಅಧ್ಯಕ್ಷರು |

| | | |
|---|---|---|
| 2 | ಸರ್ಕಾರದ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ), ವಿಧಾನ ಸೌಧ, ಬೆಂಗಳೂರು, | ಉಪಾಧ್ಯಕ್ಷರು |
| 3 | ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಆರ್ಥಿಕ ಇಲಾಖೆ, ಅಥವಾ ಅವರ ಪ್ರತಿನಿಧಿಯಾಗಿ ಸರ್ಕಾರದ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆ ಇಲ್ಲದ ಅಧಿಕಾರಿ, ವಿಧಾನ ಸೌಧ ಬೆಂಗಳೂರು, | ಸದಸ್ಯರು |
| 4 | ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ವಿಕಾಸ ಸೌಧ ಬೆಂಗಳೂರು, | ಸದಸ್ಯರು |
| 5 | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಯೋಜನಾ ಇಲಾಖೆ ಅಥವಾ ಅವರ ಪ್ರತಿನಿಧಿಯಾಗಿ ಸರ್ಕಾರದ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆ ಇಲ್ಲದ ಅಧಿಕಾರಿ, ಬಹುಮಹಡಿ ಕಟ್ಟಡ, ಬೆಂಗಳೂರು | ಸದಸ್ಯರು |
| 6 | ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆ, ಆನಂದರಾವ್ ವೃತ್ತ, ಬೆಂಗಳೂರು ಅಥವಾ ಅವರ ಪ್ರತಿನಿಧಿಯಾಗಿ ಅಪರ ನಿರ್ದೇಶಕರ ದರ್ಜೆಗಿಂತ ಕಡಿಮೆ ಇಲ್ಲದ ಅಧಿಕಾರಿ, ಆನಂದರಾವ್ ವೃತ್ತ, ಬೆಂಗಳೂರು | ಸದಸ್ಯರು |
| 7 | ಕುಲಪತಿಗಳು, ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, 4ನೇ ಹಂತ, ಜಯನಗರ, ಬೆಂಗಳೂರು | ಸದಸ್ಯರು |
| 8 | ಸರ್ಕಾರದ ಅಪರ ಕಾರ್ಯದರ್ಶಿ/ಜಂಟಿ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ) ಬೆಂಗಳೂರು, | ಸದಸ್ಯರು |
| 9 | ನಿರ್ದೇಶಕರು, ವೈದ್ಯಕೀಯ ಶಿಕ್ಷಣ, ನಿರ್ದೇಶನಾಲಯ ಆನಂದರಾವ್ ವೃತ್ತ, ಬೆಂಗಳೂರು, | ಸದಸ್ಯರು |
| 10 | ಮುಖ್ಯ ಅಭಿಯಂತರರು, ಸಿ & ಬಿ, ಅಥವಾ ಅವರ ಪ್ರತಿನಿಧಿಯಾಗಿ ಅಧೀಕ್ಷಕ ಅಭಿಯಂತರ ದರ್ಜೆಗಿಂತ ಕಡಿಮೆ ಇಲ್ಲದ ಅಧಿಕಾರಿ, ಸಂಬಧಂಪಟ್ಟ ಸಂಸ್ಥೆಯ ವ್ಯಾಪ್ತಿಯಲ್ಲಿ | ಸದಸ್ಯರು |
| 11 | ಜಿಲ್ಲಾಧಿಕಾರಿ, ಸಂಬಂಧಪಟ್ಟ ಜಿಲ್ಲೆ | ಸದಸ್ಯರು |
| 12 | ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್ ಸಂಬಂಧಪಟ್ಟ ಜಿಲ್ಲೆ | ಸದಸ್ಯರು |
| 13 | ವೈದ್ಯಕೀಯ ಅಧೀಕ್ಷಕರು, ಸಂಬಂಧಪಟ್ಟ ಆಸ್ಪತ್ರೆ, | ಸದಸ್ಯರು |
| 14 | ಮುಖ್ಯ ಆಡಳಿತಾಧಿಕಾರಿ, ಸಂಬಂಧಪಟ್ಟ ಸಂಸ್ಥೆ | ಸದಸ್ಯರು |
| 15 | ಆರ್ಥಿಕ ಸಲಹೆಗಾರ, ಸಂಬಂಧಪಟ್ಟ ಸಂಸ್ಥೆ | ಸದಸ್ಯರು |
| 16 | ಇಬ್ಬರು ತಜ್ಞರು, ವೈದ್ಯಕೀಯ ಶಿಕ್ಷಣ ವಲಯದಿಂದ | ಸದಸ್ಯರು |
| 17 | ನಿರ್ದೇಶಕರು, ಸಂಬಂಧಪಟ್ಟ ಸಂಸ್ಥೆ | ಸದಸ್ಯ ಕಾರ್ಯದರ್ಶಿ |

**2. ಆರ್ಥಿಕ ಸಮಿತಿ:**

| | | |
|---|---|---|
| 1 | ಸರ್ಕಾರದ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ), ವಿಧಾನ ಸೌಧ, ಬೆಂಗಳೂರು, | ಅಧ್ಯಕ್ಷರು |
| 2 | ಸರ್ಕಾರದ ಕಾರ್ಯದರ್ಶಿ, ಆರ್ಥಿಕ ಇಲಾಖೆ ಅಥವಾ ಅವರ ಪ್ರತಿನಿಧಿಯಾಗಿ ಸರ್ಕಾರದ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆ ಇಲ್ಲದ ಅಧಿಕಾರಿ ವಿಧಾನ ಸೌಧ | ಸದಸ್ಯರು |
| 3 | ಸರ್ಕಾರದ ಕಾರ್ಯದರ್ಶಿ, ಯೋಜನಾ ಇಲಾಖೆ ಅಥವಾ ಅವರ ಪ್ರತಿನಿಧಿಯಾಗಿ ಸರ್ಕಾರದ ಉಪ ಕಾರ್ಯದರ್ಶಿ ದರ್ಜೆಗಿಂತ ಕಡಿಮೆ ಇಲ್ಲದ ಅಧಿಕಾರಿ, ಬಹುಮಹಡಿ ಕಟ್ಟಡ, ಬೆಂಗಳೂರು | ಸದಸ್ಯರು |
| 4 | ಸರ್ಕಾರದ ಅಪರ ಕಾರ್ಯದರ್ಶಿ/ಜಂಟಿ ಕಾರ್ಯದರ್ಶೀ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ), ವಿಕಾಸ ಸೌಧ, ಬೆಂಗಳೂರು, | ಸದಸ್ಯರು |
| 5 | ನಿರ್ದೇಶಕರು, ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಆನಂದರಾವ್ ವೃತ್ತ ಬೆಂಗಳೂರು ಅಥವಾ ಅವರ ಪ್ರತಿನಿಧಿಯಾಗಿ ಸಹ ನಿರ್ದೇಶಕರ ದರ್ಜೆಗಿಂತ ಕಡಿಮೆ ಇಲ್ಲದ ಅಧಿಕಾರಿ | ಸದಸ್ಯರು |

| | | |
|---|---|---|
| 6 | ನಿರ್ದೇಶಕರು ಸಂಬಂಧಪಟ್ಟ ಸಂಸ್ಥೆ | ಸದಸ್ಯರು |
| 7 | ಮುಖ್ಯ ಆಡಳಿತಾಧಿಕಾರಿ, ಸಂಬಂಧಪಟ್ಟ ಸಂಸ್ಥೆ | ಸದಸ್ಯರು |
| 8 | ಪ್ರಾಂಶುಪಾಲರು, ಸಂಬಂಧಪಟ್ಟ ಸಂಸ್ಥೆ | ಸದಸ್ಯರು |
| 9 | ಆರ್ಥಿಕ ಸಲಹೆಗಾರರು, ಸಂಬಂಧಪಟ್ಟ ಸಂಸ್ಥೆ | ಸದಸ್ಯ ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 584

**ವಿ. ಶ್ರೀರಾಮರೆಡ್ಡಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ),

**ವಿಷಯ:** ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಮೈಸೂರು ಹಾಗೂ ಸರ್ಕಾರಿ ದಂತ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವುಗಳ ಆಡಡಳಿತ ಮಂಡಳಿ ಮತ್ತು ಆರ್ಥಿಕ ಸಮಿತಿಗಳನ್ನು ಪುನರ್ ರಚಿಸುವ ಬಗ್ಗೆ

**ಪ್ರಸ್ತಾವನೆ:**

ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಮೈಸೂರು ಹಾಗೂ ಸರ್ಕಾರಿ ದಂತ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವುಗಳ ಆಡಳಿತ ಮಂಡಳಿ ಮತ್ತು ಆರ್ಥಿಕ ಸಮಿತಿಗಳನ್ನು ಪುನರ್ ರಚಿಸಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ :ಆಕುಕ 466 ಎಂಎಂಇ 2008, ಬೆಂಗಳೂರು, ದಿನಾಂಕ:31ನೇ ಜನವರಿ 2009**

ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಮೈಸೂರು ಹಾಗೂ ಸರ್ಕಾರಿ ದಂತ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವುಗಳ ಆಡಳಿತ ಮಂಡಳಿ ಮತ್ತು ಆರ್ಥಿಕ ಸಮಿತಿಗಳನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ ಪುನರ್ ರಚಿಸಲಾಗಿದೆ.

**1. ಆಡಳಿತ ಮಂಡಳಿ:**

| | | |
|---|---|---|
| 1 | ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು, ಕರ್ನಾಟಕ ಸರ್ಕಾರ, ವಿಧಾನಸೌಧ ಬೆಂಗಳೂರು, | ಅಧ್ಯಕ್ಷರು |
| 2 | ಸರ್ಕಾರದ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ), ವಿಧಾನ ಸೌಧ, ಬೆಂಗಳೂರು, | ಉಪಾಧ್ಯಕ್ಷರು |
| 3 | ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಆರ್ಥಿಕ ಇಲಾಖೆ, ವಿಧಾನ ಸೌಧ ಬೆಂಗಳೂರು | ಸದಸ್ಯರು |
| 4 | ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ವಿಕಾಸ ಸೌಧ ಬೆಂಗಳೂರು, | ಸದಸ್ಯರು |
| 5 | ಕುಲಪತಿಗಳು, ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಅಥವಾ ಇವರಿಂದ ನಾಮನಿರ್ದೇಶಿತರು | ಸದಸ್ಯರು |
| 6 | ಸರ್ಕಾರದ ಅಪರ ಕಾರ್ಯದರ್ಶಿ/ಜಂಟಿ ಕಾರ್ಯದರ್ಶೀ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)_ ವಿಕಾಸ ಸೌಧ, ಬೆಂಗಳೂರು | ಸದಸ್ಯರು |
| 7 | ನಿರ್ದೇಶಕರು, ವೈದ್ಯಕೀಯ ಶಿಕ್ಷಣ, ಇಲಾಖೆ ಆನಂದರಾವ್ ವೃತ್ತ, ಬೆಂಗಳೂರು, | ಸದಸ್ಯರು |
| 8 | ಡೀನ್–ಕಂ–ಡೈರಕ್ಟರ್, ಸಂಬಂಧಪಟ್ಟ ಸಂಸ್ಥೆ | ಸದಸ್ಯ ಕಾರ್ಯದರ್ಶಿ |

**2. ಆರ್ಥಿಕ ಸಮಿತಿ:**

| | | |
|---|---|---|
| 1 | ಸರ್ಕಾರದ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, (ವೈದ್ಯಕೀಯ ಶಿಕ್ಷಣ), ವಿಧಾನ ಸೌಧ, ಬೆಂಗಳೂರು | ಅಧ್ಯಕ್ಷರು |

| | | |
|---|---|---|
| 2 | ಸರ್ಕಾರದ ಕಾರ್ಯದರ್ಶಿ ಆರ್ಥಿಕ ಇಲಾಖೆ, ವಿಧಾನಸೌಧ, ಬೆಂಗಳೂರು | ಸದಸ್ಯರು |
| 3 | ಸರ್ಕಾರದ ಕಾರ್ಯದರ್ಶಿ ಯೋಜನಾ ಇಲಾಖೆ, ಬಹುಮಹಡಿ ಕಟ್ಟಡ, ಬೆಂಗಳೂರು | ಸದಸ್ಯರು |
| 4 | ಸರ್ಕಾರದ ಅಪರ ಕಾರ್ಯದರ್ಶಿ/ಜಂಟಿ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ), ಬೆಂಗಳೂರು | ಸದಸ್ಯರು |
| 5 | ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇಲಾಖೆ, ಆನಂದರಾವ್ ವೃತ್ತ, ಬೆಂಗಳೂರು, | ಸದಸ್ಯರು |
| 6 | ಡೀನ್ –ಕಂ–ಡೈರೆಕ್ಟರ್, ಸಂಬಂಧಪಟ್ಟ ಸಂಸ್ಥೆ | ಸದಸ್ಯರು |
| 7 | ಮುಖ್ಯ ಆಡಳಿತಾಧಿಕಾರಿ, ಸಂಬಂಧಪಟ್ಟ ಸಂಸ್ಥೆ | ಸದಸ್ಯರು |
| 8 | ಮುಖ್ಯ ಆರ್ಥಿಕಾಧಿಕಾರಿ/ಲೆಕ್ಕಾಧಿಕಾರಿ | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 585

**ವಿ. ಶ್ರೀರಾಮರೆಡ್ಡಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ),

**ಶಿಕ್ಷಣ ಸಚಿವಾಲಯ**

**ವಿಷಯ:** ರಾಜ್ಯ ಮಟ್ಟದ ಪುಸ್ತಕ ಆಯ್ಕೆ ಸಮಿತಿಯನ್ನು ಪುನರ್ ರಚಿಸುವ ಬಗ್ಗೆ.

**ಓದಲಾಗಿದೆ :** 1 ಸರ್ಕಾರದ ದಿನಾಂಕ:1.9.2006ರ ಆದೇಶ ಸಂಖ್ಯೆ:ಇಡಿ 57 ಎಲ್ ಐಬಿ 2006.

2 ಸರ್ಕಾರದ ದಿನಾಂಕ:7.2.2005ರ ಆದೇಶ ಸಂಖ್ಯೆ:ಇಡಿ 1 ಎಲ್ ಬಿಪಿ 2004

3 ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು ಇವರ ಏಕಕಡತ ಸಂಖ್ಯೆ:ಲೋ.ಶಿ.ಗ್ರಂ.ಸ.ಉ/41/2008–09.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:1.9.2006ರ ಸರ್ಕಾರಿ ಆದೇಶದನ್ವಯ ಸಾರ್ವಜನಿಕ ಗ್ರಂಥಾಲಯ ಇಲಾಖೆಗೆ ಸಂಬಂಧಿಸಿದಂತೆ ಪುಸ್ತಕಗಳನ್ನು ಆಯ್ಕೆ ಮಾಡಲು ರಾಜ್ಯ ಮಟ್ಟದ ಪುಸ್ತಕ ಆಯ್ಕೆ ಸಮಿತಿಯನ್ನು ಪುನರ್ ರಚಿಸಲಾಗಿತ್ತು. ಆ ಆದೇಶದನ್ವಯ, ಸದರಿ ಸಮಿತಿಯ ಕಾಲಾವಧಿಯು ಅಸ್ತಿತ್ವಕ್ಕೆ ಬರುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಇತ್ತು. ಮೇಲೆ (2)ರಲ್ಲಿ ಓದಲಾದ ದಿನಾಂಕ:7.2.2005ರ ಸರ್ಕಾರದ ಆದೇಶದನ್ವಯ, ಇತರೆ ಅಂಶಗಳ ಜೊತೆಗೆ ರಾಜ್ಯ ಮಟ್ಟದ ಪುಸ್ತಕ ಆಯ್ಕೆ ಸಮಿತಿಯು ಪಾಲಿಸಬೇಕಾದ ಕಾರ್ಯವಿಧಾನ, ಅದರ ಸ್ವರೂಪ ಮತ್ತು ಕಾರ್ಯ ವ್ಯಾಪ್ತಿಯನ್ನು ನಿಗಧಿಪಡಿಸಲಾಗಿದೆ. ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು ಇವರು ಮೇಲೆ (3)ರಲ್ಲಿ ಓದಲಾದ ಏಕಕಡತದನ್ವಯ, ಸದರಿ ಸಮಿತಿಯನ್ನು ಪುನರ್ ರಚಿಸುವ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ನಿರ್ದೇಶಕರ ಪ್ರಸ್ತಾವನೆಯನ್ನು ಸರ್ಕಾರವು ಕುಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಇಡಿ 308 ಎಲ್ ಐಬಿ 2008, ಬೆಂಗಳೂರು, ದಿನಾಂಕ:3ನೇ ಫೆಬ್ರವರಿ 2009**

2. ಮೇಲೆ (2)ರಲ್ಲಿ ಓದಲಾದ ದಿನಾಂಕ:7.2.2005ರ ಸರ್ಕಾರಿ ಆದೇಶದ ಅನುಬಂಧ–2ರನ್ವಯ ನಿಗಧಿಪಡಿಸಿದ ಸಾರ್ವಜನಿಕ ಗ್ರಂಥಾಲಯ ಇಲಾಖೆಗೆ ಸಂಬಂಧಿಸಿದ ರಾಜ್ಯ ಮಟ್ಟದ ಪುಸ್ತಕ ಆಯ್ಕೆ ಸಮಿತಿಯ ಸ್ವರೂಪದ ಪ್ರಕಾರ ಅದನ್ನು ಈ ಕೆಳಕಂಡತೆ ಪುನರ್ ರಚಿಸಲು ಸರ್ಕಾರದ ಈ ಮೂಲಕ ಆದೇಶಿಸಿದೆ.

| | | |
|---|---|---|
| 1 | ಡಾ॥ ಗುರುಲಿಂಗ ಕಾಪಸೆ,<br>ದುರ್ಗಾದೇವಿ ಕಾಲೋನಿ, ಸಪ್ತಾಪುರ, ಧಾರವಾಡ | ಅಧ್ಯಕ್ಷರು |
| 2 | ಪ್ರೊ॥ ಕೆ.ಇ. ರಾಧಕೃಷ್ಣ,<br>ನಂ 06, ಆರ್ ಇಹೆಚ್ ಎಸ್, ಜೆ.ಸಿ. ನಗರ, ಮಹಾಲಕ್ಷ್ಮೀಪುರ ಬೆಂಗಳೂರು,–86 | ಸದಸ್ಯರು |
| 3 | ಶ್ರೀ ಜಾಣಗೆರೆ ವೆಂಕಟರಾಮಯ್ಯ (ಜಾವೆಂ),<br>ನಂ.3 2ನೇ ಮುಖ್ಯರಸ್ತೆ ಪಶ್ಚಿಮ ಕಾರ್ಡ್ ರಸ್ತೆ, ಶಿವನಗರ, ರಾಜಾಜಿನಗರ, ಬೆಂಗಳೂರು–10 | ಸದಸ್ಯರು |
| 4 | ಶ್ರೀ ಮಾನಸ, ನಿಕಟಪೂರ್ವ ಅಧ್ಯಕ್ಷರು, ಜಿಲ್ಲಾ ಕನ್ನಡ<br>ಸಾಹಿತ್ಯ ಪರಿಷತ್ತು, "ಕಾವ್ಯಲೋಕ" 1267, ಹೆಚ್.ಐ.ಜಿ., 1ನೇ ಅಡ್ಡ ರಸ್ತೆ, 2ನೇ ಹಂತ, | ಸದಸ್ಯರು |

| | | |
|---|---|---|
| | ಶ್ರೀರಾಂಪುರ ಬಡಾವಣೆ, ಮೈಸೂರು–23 | |
| 5 | ಪ್ರೊ॥ ಚಂದ್ರಶೇಕರ ವಸ್ತ್ರದ,<br>"ಬೆಳಗು" ಆನಂದಾಶ್ರಮ ರಸ್ತೆ, ಮಸಾರಿ, ಗದಗ–582101. | ಸದಸ್ಯರು |
| 6 | ಡಾ॥ ಹೆಚ್. ಚಂದ್ರಶೇಖರ,<br>ಸಾಹಿತಿಗಳು, ಸಂಶೋಧಕರು, ಎಂಐಜಿ–77, ಕೆಹೆಚ್‌ಬಿ ಕಾಲೋನಿ, ಬಸವೇಶ್ವರನಗರ, 2ನೇ ಹಂತ, 6ನೇ ಮುಖ್ಯ ರಸ್ತೆ,ಬೆಂಗಳೂರು | ಸದಸ್ಯರು |
| 7 | ಶ್ರೀಮತಿ ವೇದ,<br>ಕನ್ನಡ ಪ್ರಾಧ್ಯಾಪಕರು, ಮಹಾರಾಣಿ ಕಾಲೇಜು, ಮೈಸೂರು | ಮಹಿಳಾ ಸದಸ್ಯರು |
| 8 | ಡಾ॥ ಸರೋಜಿನ ಚವಲಾರ,<br>ನಂ.ಸಿ–10, ಅಪರ್ಣ ಅಪಾರ್ಟ್‌ಮೆಂಟ್ಸ್,<br>ದೇಶಪಾಂಡೆ, ನಗರ, ಹುಬ್ಬಳ್ಳಿ–580029. | ಸದಸ್ಯರು |
| 9 | ಡಾ॥ ಕೆ. ಚಿದಾನಂದಗೌಡ,<br>ನಂ. 3004, ಉದಯರವಿ, ಕುವೆಂಪು ಹೌಸ್<br>5ನೇ ಮುಖ್ಯ ರಸ್ತೆ 12ನೇ ಅಡ್ಡರಸ್ತೆ, ವಿ.ವಿ. ಪುರಂ. ಮೈಸೂರು–570002 | ಸದಸ್ಯರು |
| 10 | ಡಾ॥ ಹೆಚ್.ಎಂ. ರಾಜಶೇಖರ್<br>ನಂ. 630/ಹೆಚ್ ಅನಿಕೇತನ ರಸ್ತೆ,6ನೇ ಅಡ್ಡರಸ್ತೆ (ಉತ್ತರ), ಕುವೆಂಪುನಗರ, ಮೈಸೂರು–23 | ಸದಸ್ಯರು |
| 11 | ಶ್ರೀ ಹರಿಕೃಷ್ಣಪುನರೂರು,<br>"ಶುಭವಾಗಲಿ" ಪುನರೂರು, ಮುಲ್ಕಿ ವಯಾ ಮಂಗಳೂರು ತಾಲ್ಲೂಕು, ದಕ್ಷಿಣ ಕನ್ನಡ ಜಿಲ್ಲೆ | ಸದಸ್ಯರು |
| 12 | ಡಾ॥ ಟಿ.ವೈ. ಮಲ್ಲಯ್ಯ<br>ಉಪ ಗ್ರಂಥಪಾಲಕರು, ಗ್ರಂಥಾಲಯ ವಿಭಾಗ, ಮಂಗಳೂರು ವಿಶ್ವವಿದ್ಯಾಲಯ, ಮಂಗಳ ಗಂಗ್ರೋತ್ರಿ ಮಂಗಳೂರು | ಸದಸ್ಯರು |
| 13 | ಅಧ್ಯಕ್ಷರು, ಕನ್ನಡ ಪುಸ್ತಕ ಪ್ರಾಧಿಕಾರ ಅಥವಾ ಅವರಿಂದ ನಾಮ ನಿರ್ದೇಶನಗೊಂಡ ಪ್ರಾಧಿಕಾರದ ಒಬ್ಬ ಸದಸ್ಯರು | ಸದಸ್ಯರು |
| 14 | ಶ್ರೀ ಸಿದ್ದಲಿಂಗೇಶ್ವರ ಪ್ರಕಾಶನ<br>ಸರಸ್ವತಿ ಗೋದಾಮು, ಗುಲ್ಬರ್ಗಾ–585101 | ಸದಸ್ಯರು |
| 15 | ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್, ಅಥವಾ ಅವರಿಂದ ನಾಮನಿರ್ದೇಶಗೊಂಡ ಒಬ್ಬ ಸದಸ್ಯರು | ಸದಸ್ಯರು |
| 16 | ನಿರ್ದೇಶಕರು, ಪ್ರಸಾರಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ | ಸದಸ್ಯರು |
| 17 | ಅಧ್ಯಕ್ಷರು, ಕನ್ನಡ ವಿಜ್ಞಾನ ಪರಿಷತ್, ಬೆಂಗಳೂರು ಅಥವಾ ಅವರಿಂದ ನಾಮನಿರ್ದೇಶನಗೊಂಡ ಒಬ್ಬ ಸದಸ್ಯರು | ಸದಸ್ಯರು |
| 18 | ಡಾ॥ ವಿ.ಜಿ. ತಳವಾರ್ ಗ್ರಂಥಾಲಯ ವಿಜ್ಞಾನ ವಿಭಾಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು ಹಾಗೂ ಸದಸ್ಯರು ರಾಜ್ಯ ಗ್ರಂಥಾಲಯ ಪ್ರಾಧಿಕಾರ | ಸದಸ್ಯರು |
| 19 | ಅಧ್ಯಕ್ಷರು, ಬೆಂಗಳೂರು ಪುಸ್ತಕ ಮಾರಾಟಗಾರರ ಹಾಗೂ ಪ್ರಕಾಶಕರ ಸಂಘ, 147, ಪೊಲೀಸ್ ಆಯುಕ್ತರ ಕಛೇರಿ ಎದುರು, ಇನ್ ಫಾಂಟ್ರಿರಸ್ತೆ, ಬೆಂಗಳೂರು, | ಸದಸ್ಯರು |
| 20 | ನಿರ್ದೇಶಕರು., ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು | ಸದಸ್ಯ ಕಾರ್ಯದರ್ಶಿ |

3 ಕನ್ನಡ ಮತ್ತು ಆಂಗ್ಲಭಾಷೆ ಪುಸ್ತಕಗಳನ್ನು ಹೊರತುಪಡಿಸಿ ಇತರೆ ಭಾರತೀಯ ಭಾಷೆಯ ಪುಸ್ತಕಗಳನ್ನು ಆಯ್ಕೆಮಾಡಲು ಆಯಾಯಾ ಭಾಷೆಯ ಭಾಷಾ/ವಿಷಯ ಪರಿಣಿತರನ್ನು ಕೋ–ಆಪ್ಟ್ ಮಾಡಿಕೊಳ್ಳಬಹುದು.

4 ಈ ಆದೇಶ ಹೊರಡಿಸಿದ ದಿನಾಂಕದಿಂದ ಎರಡು ವರ್ಷಗಳ ಅವಧಿಗೆ ಅಥವಾ ಮುಂದಿನ ಸಮಿತಿ ಅಸ್ತಿತ್ವಕ್ಕೆ ಬರುವವರೆಗೆ ಇವೆರಡರಲ್ಲಿ ಯಾವುದು ನಂತರವೋ ಅಲ್ಲಿಯವರೆಗೆ ಈ ಸಮಿತಿಯು ಅಸ್ತಿತ್ವದಲ್ಲಿರುತ್ತದೆ.

5 ಈ ಸಮಿತಿಯ ಕಾರ್ಯವ್ಯಾಪ್ತಿ ಮೇಲೆ (2)ರಲ್ಲಿ ಓದಲಾದ ದಿನಾಂಕ:7.2.2005ರ ಸರ್ಕಾರಿ ಆದೇಶದ ಅನುಬಂಧ–2ರನ್ವಯ ನಿಗದಿಪಡಿಸಿರುವಂತೆ ಇರುತ್ತದೆ. ಸದರಿ ಆದೇಶದ ಅನುಬಂಧ 1ರ ಪ್ರಕಾರ, ನಿಗಧಿಪಡಿಸಿದ ಪುಸ್ತಕ ಆಯ್ಕೆಯ ಕಾರ್ಯವಿಧಾನವನ್ನು ಈ ಸಮಿತಿಯು ಅನುಸರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 588

**ಎಂ.ಎನ್ ಸೋಮಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ:** ಶ್ರೀ ಎಂ. ಬಸವರಾಜು, ನೋಟರಿ, ಮಳವಳ್ಳಿ ಇವರನ್ನು ಸಿ.ಸಿ. ಸಂಖ್ಯೆ 504/08 ಸಂಬಂಧಿಸಿದಂತೆ ನ್ಯಾಯಾಲಯದ ಆದೇಶ ಸ್ವೀಕೃತವಾಗುವವರೆಗೆ ಅಮಾನತ್ತಿನಲ್ಲಿ ಇಡುವ ಬಗ್ಗೆ.

**ಓದಲಾಗಿದೆ :**
1 ಉಚ್ಚ ನ್ಯಾಯಾಲಯದ ಡೆಪ್ಯೂಟಿ ರಿಜಿಸ್ಟ್ರಾರ್ ಇವರ ಪತ್ರ ಸಂಖ್ಯೆ ಎಲ್‌ಸಿಎ ಐ.ಮಿಸ್ 2008, ದಿನಾಂಕ:21.6.2008
2 ಸರ್ಕಾರಿ ಪತ್ರ ಸಂಖ್ಯೆ ಲಾ 82 ಎಲ್ ಸಿಎಲ್ 08, ದಿನಾಂಕ:30–7–2008
3 ಶ್ರೀ ಎಂ. ಬಸವರಾಜು, ನೋಟರಿ, ಮಳವಳ್ಳಿ ಇವರ ದಿನಾಂಕ:8.7.2008ರ ಲಿಖಿತ ಹೇಳಿಕೆ
4 ಸರ್ಕಾರಿ ಪತ್ರ ಸಂಖ್ಯೆ ಲಾ 82 ಎಲ್‌ಸಿಎಲ್ 08, ದಿನಾಂಕ:30.9.2008
5 ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮಂಡ್ಯ ಇವರ ಪತ್ರ ಸಂಖ್ಯೆ:2805/2008, ದಿನಾಂಕ:20.11.2008.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:21.6.2008ರ ಪತ್ರದಲ್ಲಿ ಡೆಪ್ಯೂಟಿ ರಿಜಿಸ್ಟ್ರಾರ್ ಕರ್ನಾಟಕ ಉಚ್ಚ ನ್ಯಾಯಾಲಯ ಇವರು ಶ್ರೀ ಎಂ. ಬಸವರಾಜು, ನೋಟರಿ, ಮಳವಳ್ಳಿ ಇವರ ವಿರುದ್ಧ ಶ್ರೀ ಕೆ. ಭೀಮರಾಜು, ನಿವೃತ್ತ ಶಿಕ್ಷಕರವರಿಂದ ದಿನಾಂಕ:6.6.2008ರಂದು ಸ್ವೀಕೃತವಾದ ದೂರು ಅರ್ಜಿ ಹಾಗೂ ಅಡಕಗಳನ್ನು ಸೂಕ್ತ ಕ್ರಮಕ್ಕಾಗಿ ಸಲ್ಲಿಸಿರುತ್ತಾರೆ. ಸದರಿ ಪತ್ರ ಮತ್ತು ಅಡಕಗಳನ್ನು ಪರಿಶೀಲಿಸಿದಾಗ, ಶ್ರೀ ಭೀಮರಾಜು, ಬಿನ್ ಕೃಷ್ಣಮೂರ್ತಿ ಮಳವಳ್ಳಿ ಇವರು ಮಂಡ್ಯ ಜಿಲ್ಲೆಯ ಮಳವಳ್ಳಿ ಪೊಲೀಸ್ ಠಾಣೆಯಲ್ಲಿ ನೋಟರಿಯವರ ವಿರುದ್ಧ ಅವರ ದೌರ್ಜನ್ಯದ ಬಗ್ಗೆ ದೂರು ದಾಖಲಿಸಿದ್ದು, ಮಳವಳ್ಳಿ ಪಟ್ಟಣದ ಪೊಲೀಸರು, ಶ್ರೀ ಎಂ. ಬಸವರಾಜು, ನೋಟರಿ ಮಳವಳ್ಳಿ ಇವರ ಮೇಲೆ ಐ.ಪಿ.ಸಿ ಸೆಕ್ಷನ್ 448,.457,427,504 506(ಬಿ)ಅಡಿಗಳಲ್ಲಿ ಮಳವಳ್ಳಿಯ ಜೆ.ಎಂ.ಎಫ್.ಸಿ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಿರುತ್ತಾರೆ. ಈ ಮೊಕದ್ದಮೆ ಪರಿಚ್ಛೇದ ಸಿ.ಸಿ. 504/2008 ಆಗಿರುತ್ತದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ:30–7–2008ರ ಸರ್ಕಾರಿ ಪತ್ರದಲ್ಲಿ ಶ್ರೀ ಎಂ. ಬಸವರಾಜು ನೋಟರಿ, ಮಳವಳ್ಳಿ ಇವರನ್ನು ಸದರಿ ದೂರಿನ ಬಗ್ಗೆ ಅವರ ಲಿಖಿತ ಉತ್ತರವನ್ನು ಸಲ್ಲಿಸುವಂತೆ ಕೋರಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ದಿನಾಂಕ:18.8.2008ರ ಪತ್ರದಲ್ಲಿ ಶ್ರೀ ಎಂ. ಬಸವರಾಜು, ನೋಟರಿ, ಮಳವಳ್ಳಿ ಇವರು ಅವರ ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ದಿನಾಂಕ:30–9–2008ರ ಸರ್ಕಾರಿ ಪತ್ರದಲ್ಲಿ ಶ್ರೀ ಎಂ. ಬಸವರಾಜು, ನೋಟರಿ, ಮಳವಳ್ಳಿ ಇವರು ಸಲ್ಲಿಸಿದ್ದ ಲಿಖಿತ ಹೇಳಿಕೆಯನ್ನು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮಂಡ್ಯ ಇವರಿಗೆ ಸಲ್ಲಿಸಿ ಅವರ ಅಭಿಪ್ರಾಯವನ್ನು ಕೋರಲಾಗಿತ್ತು.

ಮೇಲೆ (5)ರಲ್ಲಿ ಓದಲಾದ ದಿನಾಂಕ:20–11–2008ರ ಪತ್ರ ದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮಂಡ್ಯ ಇವರು ಶ್ರೀ ಎಂ. ಬಸವರಾಜುರವರ ವಿರುದ್ಧ ಪೀರ್ಯಾಧಿ ಶ್ರೀ ಭೀಮರಾಜುರವರು ಮಾಡಿರುವ ಆಪಾದನೆಗಳು ಮೇಲ್ನೋಟಕ್ಕೆ ಸತ್ಯಾಂಶದಿಂದ ಕೂಡಿರುವುದಾಗಿ ಕಂಡು ಬರುತ್ತಿದ್ದು, ನೋಟರಿಯ ವಿರುದ್ಧ ಸಿ.ಸಿ.ನಂ. 504/08 ಕ್ರಿಮಿನಲ್ ಮೊಕದ್ದಮೆ ಪ್ರಥಮ ದರ್ಜೆ ನ್ಯಾಯಿಕ ದಂಡಾಧಿಕಾರಿಯವರ ನ್ಯಾಯಾಲಯ, ಮಳವಳ್ಳಿಯಲ್ಲಿ ದಾಖಲಾಗಿದ್ದು, ಆರೋಪ ಗುರುತರವಾಗಿರುವುದರಿಂದ ಮೊಕದ್ದಮೆಯ ಅಂತಿಮ ತೀರ್ಮಾನದ ತನಕ ಸದರಿಯವರನ್ನು ನೋಟರಿ ಹುದ್ದೆಯಿಂದ ಬಿಡುಗಡೆ ಮಾಡುವುದು ಸೂಕ್ತ ಮತ್ತು ಅವಶ್ಯಕವೆಂಬುದಾಗಿ ಅಭಿಪ್ರಾಯವನ್ನು ಸಲ್ಲಿಸಿರುತ್ತಾರೆ.

ಸದರಿ ವಿಷಯವನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ:ಲಾ 82 ಎಲ್‌ಸಿಎಲ್ 2008, ಬೆಂಗಳೂರು, ದಿನಾಂಕ:6ನೇ ಫೆಬ್ರವರಿ 2009**

ಈ ಮೇಲೆ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಎಂ. ಬಸವರಾಜು, ನೋಟರಿ, ಮಳವಳ್ಳಿ ಇವರನ್ನು ಮಳವಳ್ಳಿ,

ಜೆ.ಎಂ.ಎಫ್.ಸಿ ರವರ ನ್ಯಾಯಾಲಯದ ಮುಂದೆ ಇರುವ ಪ್ರಕರಣ ಸಂಖ್ಯೆ:ಸಿ.ಸಿ. 504/08 ತೀರ್ಮಾನ ಆಗುವವರೆಗೆ ನೋಟರಿ ಕರ್ತವ್ಯ ನಿರ್ವಹಿಸದಂತೆ ಸೂಚಿಸಿ, ನೋಟರಿ ನಿಯಮಗಳು 1956ರ ನಿಯಮ 13(12)(ಬಿ)(ii)ರಂತೆ ಈ ಕೂಡಲೇ ಜಾರಿಗೆ ಬರುವಂತೆ ಅಮಾನತ್ತಿನಲ್ಲಿ ಇಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 589

**ಹೆಚ್.ಆರ್. ಶಕುಂತಲ**

ಸರ್ಕಾರದ ಅಧೀನ ಕಾರ್ಯದರ್ಶಿ(**ಆಡಳಿತ–2**)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ವಿಷಯ:** ಶ್ರೀ ಶೇಖ್ ಷಫಿ, ನೋಟರಿ ಬಳ್ಳಾರಿ ಇವರ ಕರ್ತವ್ಯ ಲೋಪ ನೋಟರಿ ಕೆಲಸದಿಂದ ತೆಗೆದು ಹಾಕುವ ಬಗ್ಗೆ.

**ಓದಲಾಗಿದೆ :** 1 ರೀಜನಲ್ ಪಾಸ್ ಪೋರ್ಟ್ ಆಫೀಸರ್, ಬೆಂಗಳೂರು ಇವರ ಪತ್ರ ಸಂಖ್ಯೆ 26:ಪಿಒಎಲ್:3255 98 ದಿನಾಂಕ:25.11.2008.

2 ಸರ್ಕಾರದ ನೋಟೀಸ್ ಸಂಖ್ಯೆ ಲಾ 143 ಎಲ್‌ಸಿಎಲ್ 08, ದಿನಾಂಕ:11.12.2008.

3 ಶ್ರೀ ಶೇಖ್ ಷಫಿ, ನೋಟರಿ, ಬಳ್ಳಾರಿ, ಇವರ ದಿನಾಂಕ:22.12.2008ರ ಲಿಖಿತ ಹೇಳಿಕೆ ಪತ್ರ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:25.11.2008 ರ ಪತ್ರದಲ್ಲಿ ರೀಜನಲ್ ಪಾಸ್ ಪೋರ್ಟ್, ಆಫೀಸರ್, ಬೆಂಗಳೂರು ಇವರು ಶ್ರೀ ಶೇಖ್ ಷಫಿ, ನೋಟರಿ, ಬಳ್ಳಾರಿ, ಇವರು ಅರ್ಜಿದಾರರ ಸಹಿ ಇಲ್ಲದೆ ಶ್ರೀಮತಿ ಸಂಧ್ಯಾರವರಿಗೆ ಪಾಸ್ ಪೋರ್ಟ್‌ಗಾಗಿ ಮಾಡಿಕೊಟ್ಟಿರುವ ಶಪಥ ಪತ್ರದ ಮೂಲ ದಾಖಲೆ ಪ್ರತಿಯನ್ನು ಕಳುಹಿಸಿ, ಸದರಿ ನೋಟರಿಯವರು ಹೇಳಿಕೆದಾರನ ಸಹಿ ಇಲ್ಲದೆ ಹೇಗೆ ಪಾಸ್ ಪೋರ್ಟ್‌ಗಾಗಿ ಶಪಥ ಪತ್ರ ಧೃಢೀಕರಿಸಿರುವರೆಂಬುದನ್ನು ಪರಿಶೀಲಿಸುವಂತೆ ಕೋರಿರುತ್ತಾರೆ.

ಅದರಂತೆ ಮೇಲೆ (2)ರಲ್ಲಿ ಓದಲಾದ ಪತ್ರ ದಿನಾಂಕ 11.12.08 ರಂದು ಶ್ರೀಯುತರಿಗೆ ನೋಟೀಸ್ ಜಾರಿ ಮಾಡಿ, ವಿಷಯದ ಬಗ್ಗೆ (ಶಪಥ ಪತ್ರದ ಪ್ರತಿಯನ್ನು ಕಳುಹಿಸಿ)( ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ಕೋರಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ದಿನಾಂಕ:22.12.2008 ರ ಪತ್ರದಲ್ಲಿ ಶ್ರೀ ಶೇಖ್ ಷಫಿ, ನೋಟರಿ, ಬಳ್ಳಾರಿ ಇವರು ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ ಅದರಲ್ಲಿ ಶ್ರೀಮತಿ ಸಂಧ್ಯಾರವರು ದಿನಾಂಕ:24.11.2008ರಂದು ಬೆಳಿಗ್ಗೆ 11.30ರ ಸಮಯದಲ್ಲಿ ಪಾಸ್ ಪೋರ್ಟ್ ಪಡೆಯಲು ಶಪಥ ಪತ್ರವನ್ನು (affidavit) ನ್ನು ಧೃಥಿಕರಿಸಲು ಕೋರಿದ್ದು, ಅವರು ಅದರಲ್ಲಿ ಸಹಿ ಮಾಡಿಲ್ಲದಿದ್ದುದರಿಂದ ನನ್ನ ಮುಂದೆ ಸಹಿ ಮಾಡುವಂತೆ ತಿಳಿಸಿ ಅದನ್ನು ಅವರಿಗೆ ಹಿಂದಿರುಗಿಸಿದನು, ಸದರಿಯವರು ಸಹಿ ಮಾಡಿರುವುದಾಗಿ ತಿಳಿಸಿಕೊಟ್ಟರು. ಅದೇ ಸಮಯಕ್ಕೆ ಅವರ ಯಜಮಾನರಿಂದ ದೂರವಾಣಿ ಕರೆ ಬಂದಿದ್ದರಿಂದ, ಮತ್ತು ಅವರು ಸಹಿ ಮಾಡಿರುವರೆಂದು ತಿಳಿದು ಧೃಢೀಕರಿಸಿರುವುದಾಗಿ ಇದನ್ನು ಯಾವುದೇ ದುರುದ್ದೇಶವಿಲ್ಲದೆ ಸದ್ಭಾವಿಕನಾಗಿ ಮಾಡಿರುವುದಾಗಿ ತಿಳಿಸಿ, ಶ್ರೀಮತಿ ಸಂಧ್ಯಾರವರು ಶಪಥ ಪತ್ರದಲ್ಲಿ ಸಹಿ ಮಾಡದೆ ಪಾಸ್‌ಪೋರ್ಟ್‌ಗಾಗಿ ನೋಟರಿಯವರಿಂದ ಧೃಡೀಕರಿಸಿಕೊಂಡಿರುವುದರಲ್ಲಿ ನನ್ನ ತಪ್ಪಿದೆ, ಇದರಲ್ಲಿ ನೋಟರಿಯವರ ದುರುದ್ದೇಶವೇನು ಇರುವುದಿಲ್ಲವೆಂದು ಪಾಸ್ ಪೋರ್ಟ್ ಕಚೇರಿಗೆ ದಿನಾಂಕ:19.12.2008ರಂದು ಬರೆದಿರುವ ಪತ್ರ ಪ್ರತಿಯೊಂದಿಗೆ, ಈ ರೀತಿ ಆಗಿರುವುದು ಉದ್ದೇಶ ಪೂರ್ವಕವಾಗಿಲ್ಲವೆಂದು ಮತ್ತು ಇನ್ನು ಮುಂದೆ ಈ ರೀತಿಯಾಗದಂತೆ ನೋಡಿಕೊಳ್ಳುವುದಾಗಿ ತಿಳಿಸಿರುತ್ತಾರೆ.

ಈ ರೀತಿ ಪ್ರಮಾಣೀಕರಿಸುವುದು ಬೇರೆ ಸಂದರ್ಭಕ್ಕೆ ಆಗಿದ್ದಲ್ಲಿ ಉದಾರ ರೀತಿ ಅನುಸರಿಸಬಹುದು. ಆದರೆ ಇದು ಪಾಸ್ ಪೋರ್ಟ್ ತೆಗೆದುಕೊಳ್ಳುವುದಕ್ಕೆ ಸಂಬಂಧಿಸಿದೆ ಈ ರೀತಿ ಪ್ರಮಾಣೀಕರಿಸುವವರ ರುಜು ಇಲ್ಲದೇ ನೋಟರಿಯವರು ಧೃಢಿಕರಿಸಿರುವುದು, ಅದರಲ್ಲೂ ಭಯೋತ್ಪಾದಕರ ಕಿರುಕುಳ ಇರುವಾಗ ಇದನ್ನು ನೋಡಿದರೆ ಸಾರ್ವಜನಿಕರಿಗೆ ಇದರಿಂದ ದೊಡ್ಡ ಅಪಾಯವಾಗಬಹುದು ಮತ್ತು ಇದನ್ನು ಕೊನೆಗಾಣಿಸಲು ಅಂತಹ ಶಪಥಪತ್ರಗಳನ್ನು ಪಾಸ್‌ಪೋರ್ಟ್ ಕಛೇರಿಗೆ ಸಲ್ಲಿಸದಂತೆ ಕಠಿಣ ಕ್ರಮದ ಅಗತ್ಯವಿದ್ದು, ಬಹಳ ಘೋರ ತಪ್ಪೆಂದು ತಿಳಿಯಬೇಕಾಗುತ್ತದೆ. ಆದ್ದರಿಂದ, ದೇಶದ ಮತ್ತು ಸಾರ್ವಜನಿಕರ ಹಿತದೃಷ್ಟಿಯಿಂದ ಸಹಿಯಿಲ್ಲದೆ ಶಪಥಪತ್ರಗಳನ್ನು ಧೃಢೀಕರಿಸಿ ಪಾಸ್‌ಪೋರ್ಟ್ ಕಛೇರಿಗೆ ಸಲ್ಲಿಸುವುದನ್ನು ತಡೆಯಲು ಉದಾರ ಕ್ರಮ ತೆಗೆದುಕೊಳ್ಳಬಾರದೆಂದು ತೀರ್ಮಾನಿಸಿದೆ, ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂ. ಲಾ 143 ಎಲ್ ಸಿಎಲ್ 2008, ಬೆಂಗಳೂರು, ದಿನಾಂಕ:6ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ತಿಳಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಶೇಖ್ ಷಫಿ, ನೋಟರಿ, ಬಳ್ಳಾರಿ ಇವರನ್ನು ನೋಟರಿ

ಕರ್ತವ್ಯದಿಂದ ವಿಮುಕ್ತಗೊಳಿಸಿ ಶ್ರೀಯುತರ ಹೆಸರನ್ನು ನೋಟರಿ ನಿಯಮ 13(1(12)(b)(i) ರೀತ್ಯ ನೋಟರಿ ರಿಜಿಸ್ಟರ್ ನಿಂದ ಶಾಶ್ವತವಾಗಿ ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 590

**ಹೆಚ್.ಆರ್. ಶಕುಂತಲ**

ಸರ್ಕಾರದ ಅಧೀನ ಕಾರ್ಯದರ್ಶಿ(**ಆಡಳಿತ–2**)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ಸರ್ಕಾರಿ ಆದೇಶ ಸಂಖ್ಯೆ:ಪಸಂಮೀ 365 ಪಸಸೇ 2007, ಬೆಂಗಳೂರು, ದಿನಾಂಕ:5ನೇ ಫೆಬ್ರವರಿ 2009**

**ವಿಷಯ:** ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿ ಪಶುಚಿಕಿತ್ಸಾಲಯದಿಂದ ಪಶುಆಸ್ಪತ್ರೆಗಳನ್ನಾಗಿ ಉನ್ನತೀಕರಿಸಿರುವ ಪಶುವೈದ್ಯಕೀಯ ಸಂಸ್ಥೆಗಳಲ್ಲಿನ ಪಶುವೈದ್ಯಾಧಿಕಾರಿ ಹುದ್ದೆಯನ್ನು ಸಹಾಯಕ ನಿರ್ದೇಶಕರ ಹುದ್ದಯಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ :** 1 ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ 365 ಪಸಸೇ 2007, ದಿನಾಂಕ:18.8.2008.

2 ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ:ಆಪಸಂ/ಡಿವಿಡಿ–3/ವಿವ–13/ಭಾಗ–2/2007–08, ದಿನಾಂಕ:19.11.2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಆದೇಶದನ್ವಯ ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆಯಲ್ಲಿನ 48 ಪ್ರಾಥಮಿಕ ಪಶುಚಿಕಿತ್ಸಾ ಕೇಂದ್ರ/ಕೃತಕ ಗರ್ಭಧಾರಣಾ ಕೇಂದ್ರಗಳನ್ನು ಪಶುಚಿಕಿತ್ಸಾಲಯಗಳನ್ನಾಗಿ ಹಾಗೂ 15 ಪಶುಚಿಕಿತ್ಸಾಲಯಗಳನ್ನು ಪಶುಆಸ್ಪತ್ರೆಗಳನ್ನಾಗಿ ಉನ್ನತೀಕರಿಸಲು ಮಂಜೂರಾತಿ ನೀಡಿದೆ ಹಾಗೂ ಸದರಿ ಉನ್ನತೀಕರಣಕ್ಕೆ ಅಗತ್ಯವಿರುವ 48 ಪಶುವೈದ್ಯಾಧಿಕಾರಿ 15 ಪಶುವೈದ್ಯಕೀಯ ಮೇಲ್ವಿಚಾರಕರು 15 ದ್ವಿತೀಯ ದರ್ಜೆ ಸಹಾಯಕರು ಹಾಗೂ 48 ಡಿ–ದರ್ಜೆ ಹುದ್ದೆಗಳನ್ನು ಸೃಜಿಸಲೂ ಸಹ ಅನುಮೋದನೆ ನೀಡಲಾಗಿದೆ.

2. ಮೇಲೆ ಓದಲಾದ ಕ್ರಮಸಂಖ್ಯೆ (2)ರ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ ಬೆಂಗಳೂರು ಇವರು ಪಶುಚಿಕಿತ್ಸಾಲಯಗಳನ್ನು ಪಶುಆಸ್ಪತ್ರೆಗಳನ್ನಾಗಿ ಉನ್ನತೀಕರಿಸುವಾಗ ಹಾಲಿ ಇರುವ ಪಶುವೈದ್ಯಾಧಿಕಾರಿಗಳ ಹುದ್ದೆಯನ್ನು ಸಹಾಯಕ ನಿರ್ದೇಶಕರ ಹುದ್ದೆಗಳನ್ನಾಗಿ ಉನ್ನತೀಕರಿಸಬೇಕಾಗಿದ್ದು, ದಿನಾಂಕ:18–8–2008ರ ಸರ್ಕಾರಿ ಆದೇಶದಲ್ಲಿ 15 ಹಾಲಿ ಇದ್ದ ಪಶುವೈದ್ಯಾಧಿಕಾರಿ ಹುದ್ದೆಗಳನ್ನು ಸಹಾಯಕ ನಿರ್ದೇಶಕರ ಹುದ್ದೆಗಳನ್ನಾಗಿ ಮೇಲ್ದರ್ಜೆಗೇರಿಸಿರುವುದಿಲ್ಲವೆಂದು ತಿಳಿಸಿರುತ್ತಾರೆ. ಪಶುವೈದ್ಯಾಧಿಕಾರಿ ಹುದ್ದೆಗಳನ್ನು ಸಹಾಯಕ ನಿರ್ದೇಶಕರ ಹುದ್ದೆಗಳನ್ನಾಗಿ ಮೇಲ್ದರ್ಜೆಗೇರಿಸದಿದ್ದಲ್ಲಿ ಪಶುಚಿಕಿತ್ಸಾಲಯಗಳನ್ನು ಪಶುಆಸ್ಪತ್ರೆಗಳನ್ನಾಗಿ ಉನ್ನತೀಕರಿಸಿದ ಉದ್ದೇಶ ಸಫಲವಾಗುವುದಿಲ್ಲ ಆದ್ದರಿಂದ ಪಶು ಆಸ್ಪತ್ರೆಗಳನ್ನಾಗಿ ಉನ್ನತೀಕರಿಸಿದ 15 ಪಶುವೈದ್ಯಕೀಯ ಸಂಸ್ಥೆಗಳಲ್ಲಿ ಹಾಲಿ ಇರುವ ಪಶುವೈದ್ಯಾಧಿಕಾರಿ ಹುದ್ದೆಗಳನ್ನು ಸಹಾಯಕ ನಿರ್ದೇಕರ ಹುದ್ದೆಗಳನ್ನಾಗಿ ಮೇಲ್ದರ್ಜೆಗೇರಿಸಿ ತಿದ್ದುಪಡಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ. ಹಾಗೂ ಪಶುವೈದ್ಯಯಕೀಯ ಸಂಸ್ಥೆಗಳ ಉನ್ನತೀಕರಣಕ್ಕಾಗಿ ನಿಗದಿಪಡಿಸಿರುವ ಅನುದಾನದಲ್ಲಿಯೇ ಪಶುವೈದ್ಯಾಧಿಕಾರಿ ಹುದ್ದೆಗಳ ಉನ್ನತೀಕರಣ ವೆಚ್ಚವು ಒಳಗೊಂಡಿರುವುದರಿಂದ ಇದಕ್ಕಾಗಿ ಹೆಚ್ಚುವರಿ ಅನುದಾನದ ಅವಶ್ಯಕತೆ ಇರುವುದಿಲ್ಲವೆಂಬ ಅಂಶವನ್ನು ಸರ್ಕಾರದ ಗಮನಕ್ಕೆ ತಂದಿರುತ್ತಾರೆ Norms ಪ್ರಕಾರ ಪಶುಆಸ್ಪತ್ರೆಗಳಲ್ಲಿ ಸಹಾಯಕನಿರ್ದೇಶಕರ ಹುದ್ದೆ ಮಾತ್ರ ಇದ್ದು ಅಲ್ಲಿ ಪಶುವೈದ್ಯಾಧಿಕಾರಿ ಹುದ್ದೆ ಇರುವುದಿಲ್ಲವಾದರಿಂದ ಪಶುಚಿಕಿತ್ಸಾಲಯಗಳನ್ನು ಪಶುಆಸ್ಪತ್ರೆಗಳನ್ನಾಗಿ ಉನ್ನತೀಕರಿಸಿದಾಗ ಅಲ್ಲಿನ ಪಶುವೈದ್ಯಾಧಿಕಾರಿ ಹುದ್ದೆಯನ್ನೂ ಸಹ ಸಹಾಯಕ ನಿರ್ದೇಶಕರ ಹುದ್ದೆಗೆ ಮೇಲ್ದರ್ಜೆಗೇರಿಬೇಕಾಗಿರುತ್ತದೆ.

3. ಈ ದಿಸೆಯಲ್ಲಿ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರ ಉನ್ನತೀಕರಣದ ಉದ್ದೇಶ ಸಫಲಗೊಳಿಸಲು ಈಗಾಗಲೇ ದಿನಾಂಕ:18.8.2008ರನ್ವಯ ಪಶುಚಿಕಿತ್ಸಾಲಯದಿಂದ ಪಶುಆಸ್ಪತ್ರೆಗಳನ್ನಾಗಿ ಉನ್ನತೀಕರಿಸಿರುವ 15 ಪಶುವೈದ್ಯಕೀಯ ಸಂಸ್ಥೆಗಳಲ್ಲಿನ ಪಶುವೈದ್ಯಾಧಿಕಾರಿ ಹುದ್ದೆಗಳನ್ನು ಸಹಾಯಕ ನಿರ್ದೇಶಕರ ಹುದ್ದೆಗಳನ್ನಾಗಿ ಮೇಲ್ದರ್ಜೆಗೇರಿಸಲು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಆದೇಶ**

4. ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಸಹಾಯಕ ನಿರ್ದೇಶಕರ ಹುದ್ದೆ ಪಶುಸಂಗೋಪನಾ ಇಲಾಖೆಯ ಮುಂದುವರೆದ ಕಾರ್ಯಕ್ರಮಗಳ ಅನ್ವಯ ಉನ್ನತೀಕರಿಸಲಾದ ಪಶುಆಸ್ಪತ್ರೆಗಳಿಗೆ ಮಂಜೂರಾದ ಹುದ್ದೆಗಳಾಗಿದ್ದು Standard Staffing Pattern ಪ್ರಕಾರ ಪಶುಆಸ್ಪತ್ರೆಗಳಲ್ಲಿ ಸಹಾಯಕ ನಿರ್ದೇಶಕರ ದರ್ಜೆಯ ಅಧಿಕಾರಿಗಳು ಇರುವುದರಿಂದ ಸರ್ಕಾರಿ ಆದೇಶ ಸಂಖ್ಯೆ:ಪಸಮೀ 365 ಪಸಸೇ 2007, ದಿನಾಂಕ:18–8–2008ರಂತೆ ಉನ್ನತೀಕರಿಸಲಾದ 15 ಪಶುಆಸ್ಪತ್ರೆಗಳಿಗೆ

ಮಂಜೂರಾಗಿರುವ 15 ಪಶುವೈದ್ಯಾಧಿಕಾರಿ ಹುದ್ದೆಗಳನ್ನು ಮಾತ್ರ ಸಹಾಯಕ ನಿರ್ದೇಶಕರ ಹುದ್ದೆಗೆ ಉನ್ನತೀಕರಿಸಲು ಸರ್ಕಾರ ಮಂಜೂರಾತಿ ನೀಡಿ ಆದೇಶಿಸಿದೆ.

5. ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 667 ವೆಚ್ಚ 4/2007, ದಿನಾಂಕ:5.12.2008ಹಾಗೂ ಯೋಜನಾ ಇಲಾಖೆ ಟಿಪ್ಪಣಿ ಸಂಖ್ಯೆ:ಪಿಡಿ 05 ಪಿಎಫ್‌ಓ 2008, ದಿನಾಂಕ:31.12.2008ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 593

**ಎಂ.ಪಿ ನಾಗರಾಜ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

(ಪಶುಸಂಗೋಪನೆ–ಎ)

**ಸರ್ಕಾರಿ ಆದೇಶ ಸಂಖ್ಯೆ:ಪಸಂಮೀ 08 ಪಸಸೇ 2009, ಬೆಂಗಳೂರು, ದಿನಾಂಕ:5ನೇ ಫೆಬ್ರವರಿ 2009**

**ವಿಷಯ:** ಡಾ: ರುದ್ರಗೌಡ ಪಾಟೀಲ ಪಶುವೈದ್ಯಾಧಿಕಾರಿ, ಪಶುಚಿಕಿತ್ಸಾಲಯ, ಹಳ್ಳೂರು ಬಾಗಲಕೋಟೆ ಜಿಲ್ಲೆ ಇವರು ಪರಿಕ್ಷಾರ್ಥ ಅವಧಿಯಲ್ಲಿ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿ ದುರ್ವರ್ತನೆ ತೋರಿರುವುದರಿಂದ ಸರ್ಕಾರಿ ಸೇವೆಯಿಂದ ತೆಗೆದುಹಾಕುವ (Discharge) ಬಗ್ಗೆ

**ಓದಲಾಗಿದೆ :** 1 ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ:ಆಪಸಂ/ಸಿಬ್ಬಂದಿ–2/ವಿವ/38/2007–08, ದಿನಾಂಕ:20.12.2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ (1)ರ ಪತ್ರದಲ್ಲಿ ಆಯುಕ್ತರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಪಶುಚಿಕಿತ್ಸಾಲಯ, ಹಳ್ಳೂರು, ಬಾಗಲಕೋಟೆ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ಇಲ್ಲಿ ಕಾರ್ಯನಿರ್ವಹಿಸುತ್ತಿರುವ ಡಾ: ರುದ್ರಗೌಡ ಪಾಟೀಲ ಪಶುವೈದ್ಯಾಧಿಕಾರಿ ಇವರು ವೈಯಕ್ತಿಕ ಕಾರಣದ ಮೇಲೆ ದಿನಾಂಕ:18.12.2007ರಿಂದ 27.12.2007ರವರೆಗೆ 10 ದಿನಗಳು ಗಳಿಕೆ ರಜೆಯನ್ನು ಹಾಗೂ ವೈದ್ಯಕೀಯ ಕಾರಣದ ಮೇಲೆ ದಿನಾಂಕ:28.12.2007 ರಿಂದ 27.3.2008ರವರೆಗೆ ವೇತನ ರಹಿತ ರಜೆ ಪಡೆದಿದ್ದು ದಿನಾಂಕ:28.3.2008ರಂದು ಕರ್ತವ್ಯಕ್ಕೆ ಹಾಜರಾಗಬೇಕಾಗಿರುತ್ತದೆಂದು, ಆದರೆ ಸದರಿ ಅಧಿಕಾರಿಗಳು ಕಛೇರಿಗೆ ಮಾಹಿತಿ ನೀಡದೇ ದಿನಾಂಕ:28.3.2008ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿದ್ದು, ಕರ್ತವ್ಯಕ್ಕೆ ಹಾಜರಾಗುವಂತೆ ಸದರಿ ಅಧಿಕಾರಿಗಳ ಖಾಯಂ ವಿಳಾಸಕ್ಕೆ ಪತ್ರ ಬರೆಯಲಾಗಿದ್ದರೂ ಸಹ ಸದರಿ ಅಧಿಕಾರಿಗಳು ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲವೆಂದು ತಿಳಿಸಿರುತ್ತಾರೆ. ಈ ಬಗ್ಗೆ ಉಪನಿರ್ದೇಶಕರು, ಪಶುಪಾಲನಾ ಇಲಾಖೆ ಬಾಗಲಕೋಟೆ ಇವರು ಸದರಿ ಅಧಿಕಾರಿಗಳು ಉನ್ನತ ವ್ಯಾಸಂಗಕ್ಕಾಗಿ ವಿದೇಶಕ್ಕೆ ತೆರಳಲಿರುವ ಬಗ್ಗೆ ಶಂಕೆ ವ್ಯಕ್ತಪಡಿಸಿ, ಅವರನ್ನು ಸೇವೆಯಿಂದ ವಜಾಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ. ಆದ್ದರಿಂದ ಡಾ:ರುದ್ರಗೌಡ ಪಾಟೀಲ, ಪಶುವೈದ್ಯಾಧಿಕಾರಿ ಇವರು ಖಾಯಂ ಪೂರ್ವ ಸೇವಾವಧಿಯಲ್ಲಿರುವಾಗಲೇ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದರಿಂದ ಉಪನಿರ್ದೇಶಕರ ಶಿಫಾರಸ್ಸಿನನ್ವಯ ಅವರನ್ನು ಸೇವೆಯಿಂದ ತೆಗೆದುಹಾಕುವಂತೆ ಆಯುಕ್ತರು ಸರ್ಕಾರವನ್ನು ಕೋರಿರುತ್ತಾರೆ.

2. ಡಾ: ರುದ್ರಗೌಡ ಪಾಟೀಲ, ಪಶುವೈದ್ಯಾಧಿಕಾರಿ ಇವರು ಪರೀಕ್ಷಾರ್ಥ ಅವಧಿಯಲ್ಲಿರುವಾಗಲೇ ಮೇಲಾಧಿಕಾರಿಗಳಿಂದ ರಜೆ ಮಂಜೂರಾತಿ ಮಾಡಿಸಿಕೊಳ್ಳದೇ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುತ್ತಾರೆ. ಕರ್ತವ್ಯಕ್ಕೆ ಹಾಜರಾಗುವಂತೆ ಸದರಿ ಅಧಿಕಾರಿಗಳ ಖಾಯಂ ವಿಳಾಸಕ್ಕೆ ಪತ್ರ ಬರೆದಿದ್ದರೂ ಸಹ ಅವರು ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ ಇದರಿಂದಾಗಿ ಅವರಿಗೆ ಸರ್ಕಾರಿ ಸೇವೆಯಲ್ಲಿ ಕಾರ್ಯನಿರ್ವಹಿಸಲು ಇಷ್ಟವಿಲ್ಲದಿರುವುದು ಎದ್ದು ಕಾಣುತ್ತದೆ. ಈ ದಿಸೆಯಲ್ಲಿ ಎಲ್ಲಾ ಅಂಶಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ಡಾ: ರುದ್ರಗೌಡ ಪಾಟೀಲ ಪಶುವೈದ್ಯಾಧಿಕಾರಿ ಇವರಿಗೆ ಸರ್ಕಾರಿ ಸೇವೆಯಲ್ಲಿ ಮುಂದುವರೆಯುವಲ್ಲಿ ಅನಾಸಕ್ತಿ ಹಾಗೂ ಪರೀಕ್ಷಾರ್ಥ ಅವಧಿಯಲ್ಲಿ ದುರ್ವತನೆ ಕೋರಿರುವ ಹಿನ್ನಲೆಯಲ್ಲಿ ಸದರಿ ಅಧಿಕಾರಿಯನ್ನು ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು 1977ರ ನಿಯಮ 6(1)ರನ್ವಯ ಸರ್ಕಾರಿ ಸೇವೆಯಿಂದ ತೆಗೆದುಹಾಕಲು ಸರ್ಕಾರ ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಆದೇಶ.**

3. ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಡಾ: ರುದ್ರಗೌಡ ಪಾಟೀಲ ಪಶುವೈದ್ಯಾಧಿಕಾರಿ ಪಶುಚಿಕಿತ್ಸಾಲಯ, ಹಳ್ಳೂರು ಬಾಗಲಕೋಟೆ ತಾಲ್ಲೂಕು, ಬಾಗಲಕೋಟೆ ಜಿಲ್ಲೆ ಇವರು ಮೇಲಾಧಿಕಾರಿಗಳಿಂದ ರಜೆ ಮಂಜೂರಾತಿ ಮಾಡಿಸಿಕೊಳ್ಳದೇ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದರಿಂದ ಹಾಗೂ ಪರೀಕ್ಷಾರ್ಥ, ಅವಧಿಯಲ್ಲಿ ದುರ್ವರ್ತನೆ ತೋರಿ ಕರ್ತವ್ಯಲೋಪವೆಸಗಿರುವುದು ದೃಢಪಟ್ಟಿರುವುದರಿಂದ, ಆಯುಕ್ತರ ಶಿಫಾರಸ್ಸಿನನ್ವಯ ಡಾ: ರುದ್ರಗೌಡ ಪಾಟೀಲ

ಪಶುವೈದ್ಯಾಧಿಕಾರಿ ಇವರನ್ನು ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು 1977ರ ನಿಯಮ 6(1)ರನ್ವಯ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ತೆಗೆದುಹಾಕಲು (Discharge) ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 594

**ಎಂ.ಪಿ ನಾಗರಾಜ**

ಪೀಠಾಧಿಕಾರಿ–2,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

(ಪಶುಸಂಗೋಪನೆ–ಎ)

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ.ರಾಜೇಂದ್ರ ಕುಮಾರ್, ಪೊಲೀಸ್ ಸಬ್–ಇನ್ಸ್‌ಪೆಕ್ಟರ್, ಟ್ರಾಫಿಕ್ ಪೊಲೀಸ್ ಠಾಣೆ, ಕೋಲಾರ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1 ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ್ರ ವಲಯ, ಬೆಂಗಳೂರು, ಇವರ ಆದೇಶ ಸಂಖ್ಯೆ:ಪನ್ರಿ:ಡಿಇ:02:2006–07 ಓಬಿ:198/07–08 ದಿನಾಂಕ:10–03–2008.

2 ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ:ಅಪೀಲು (6)03/2008–09 ದಿನಾಂಕ:27–06–2008

3 ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:23–09–08

4 ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)81/2008–09 ದಿನಾಂಕ:05–01–2009

**ಪ್ರಸ್ತಾವನೆ:–**

ಶ್ರೀ.ರಾಜೇಂದ್ರ ಕುಮಾರ್, ಪೊಲೀಸ್ ಸಬ್–ಇನ್ಸ್‌ಪೆಕ್ಟರ್, ಟ್ರಾಫಿಕ್ ಪೊಲೀಸ್ ಠಾಣೆ, ಕೋಲಾರ ಜಿಲ್ಲೆ, ಇವರು ಅಕ್ಕೂರು ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆ ಹೊರಿಸಲಾಗಿತ್ತು.

**ದೋಷರೋಪಣೆ:–**

1) "ಶ್ರೀ.ರಾಜೇಂದ್ರ ಕುಮಾರ್, ಪೊಲೀಸ್ ಉಪ ನಿರೀಕ್ಷಕರು, ಆದ ನೀವು ಈ ಹಿಂದೆ ದಿ:13–12–1999 ರಿಂದ ಬೆಂಗಳೂರು ಜಿಲ್ಲೆ, ಚನ್ನಪಟ್ಟಣ ತಾಲ್ಲೂಕು, ಅಕ್ಕೂರು ಪೊಲೀಸ್ ಠಾಣೆಯಲ್ಲಿ ಪೊಲೀಸ್ ಉಪ ನಿರೀಕ್ಷಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಬೆಂಗಳೂರು ಜಿಲ್ಲೆಯಲ್ಲಿ ತೆಂಗಿನ ಮರಗಳಿಂದ ನೀರಾ ತೆಗೆದು ಮಾರಾಟ ಮಾಡುವ ವಿಷಯದ ಬಗ್ಗೆ ರೈತ ಸಮುದಾಯದಿಂದ ಪ್ರತಿಭಟನೆ, ಧರಣಿ ಇತ್ಯಾದಿಗಳು ಜರುಗುತ್ತಿದ್ದು ಜಿಲ್ಲೆಯಲ್ಲಿನ ಕಾನೂನು ಮತ್ತು ಸುವ್ಯವಸ್ಥೆ ದೃಷ್ಟಿಯಿಂದ ನಿಮ್ಮ ಹಿರಿಯ ಅಧಿಕಾರಿಗಳು ನೀರಾ ವ್ಯವಹಾರದಲ್ಲಿ ನಿರತರಾಗಿರುವ ಯಾವುದೇ

ಸಾರ್ವಜನಿಕರ ವಿರುದ್ಧ ಧಾಳಿ ನಡೆಸದಂತೆ ಮತ್ತು ಅಂತಹವರುಗಳ ವಿರುದ್ಧ ಯಾವುದೇ ಕ್ರಮ ಜರುಗಿಸದಂತೆ ಸ್ಪಷ್ಟ ಆದೇಶಗಳನ್ನು ನೀಡಿದ್ದರೂ ಸಹ ನೀವು ಸದರಿ ಆದೇಶಗಳನ್ನು ಕಡೆಗಣಿಸಿ ದಿ:09–10–2001 ರಂದು ಬೆಳಗಿನ ಜಾವ ಬಾಡಿಗೆಗೆ ತೆಗೆದುಕೊಂಡಿದ್ದ ಟಾಟಾ ಸುಮೋ ವಾಹನದಲ್ಲಿ ಅಕ್ಕೂರು ಪೊಲೀಸ್ ಠಾಣೆ ಸರಹದ್ದಿನ ವಿಠಲೇಹನಳ್ಳಿ ಗ್ರಾಮದಲ್ಲಿ ನೀರಾ ವ್ಯವಹಾರದಲ್ಲಿ ನಿರತರಾಗಿದ್ದವರ ವಿರುದ್ಧ ಯಾವುದೇ ಧಾಳಿ ನಡೆಸದಂತೆ ಹಾಗೂ ಕ್ರಮ ಜರುಗಿಸದಂತೆ ನಿಮ್ಮ ಹಿರಿಯ ಅಧಿಕಾರಿಗಳು ನೀಡಿದ್ದ ಆದೇಶಗಳನ್ನು ಉಲ್ಲಂಘಿಸಿ ದುರ್ನಡತೆ ಪ್ರದರ್ಶಿಸಿರುತ್ತೀರಿ.

2) ನೀವು ದಿ:09–10–2001ರ ಬೆಳಗಿನ ಜವ ವಿಠಲೇನಹಳ್ಳಿ ಗ್ರಾಮದ ಮನೆಗಳಲ್ಲಿದ್ದ 8 ಜನರನ್ನು ನೀರಾ ವ್ಯವಹಾರ ಮಾಡುವವರೆಂಬ ಸುಳ್ಳು ಆರೋಪದ ಮೇಲೆ ನಿಮ್ಮ ವಶಕ್ಕೆ ತೆಗೆದುಕೊಂಡು ನಿಮ್ಮ ಅಧಿಕಾರ ವ್ಯಾಪ್ತಿಯನ್ನು ದುರುಪಯೋಗ ಪಡಿಸಿಕೊಂಡು ಅವರುಗಳನ್ನು ಬಂಧಿಸಿ ಆ ಮೂಲಕ ವಿಠಲೇನಹಳ್ಳಿ ಗ್ರಾಮದಲ್ಲಿ ಕಾನೂನು ಮತ್ತು ಸುವ್ಯವಸ್ಥೆಗೆ ಭಂಗ ಉಂಟು ಮಾಡಿ ಅಧಿಕಾರ ದುರುಪಯೋಗಪಡಿಸಿಕೊಂಡು ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ.

3) ನೀವು ಮೇಲ್ಕಂಡ **8**ಜನರನ್ನು ವಿಠಲೇನಹಳ್ಳಿ ಗ್ರಾಮದಲ್ಲಿ ಮೇಲೆ ತಿಳಿಸಿರುವ ಸುಳ್ಳು ಆರೋಪದ ಮೇಲೆ ಬಂಧಿಸಿ ವಶಕ್ಕೆ ತೆಗೆದು ಕೊಂಡ ವಿಷಯವನ್ನು ತಿಳಿದ ಅಲ್ಲಿನ ಸುಮಾರು 400–500 ಗ್ರಾಮಸ್ಥರು ಒಟ್ಟಿಗೆ ಗುಂಪು ಸೇರಿ ನಿಮ್ಮ ಕ್ರಮದ ವಿರುದ್ಧ ಪ್ರತಿಭಟನೆ ಮಾಡಿ ಹಾಗೂ ತದನಂತರ ಅವರುಗಳು ಉದ್ರಿಕ್ತರಾಗಿ ಪೊಲೀಸ್ ಸಿಬ್ಬಂದಿಯ ಮೇಲೆ ಹಾಗೂ ವಾಹನಗಳ ಮೇಲೆ ಕಲ್ಲುಗಳನ್ನು ತೂರಿ ವಿಠಲೇನಹಳ್ಳಿ ಗ್ರಾಮದಲ್ಲಿ ಕಾನೂನು ಮತ್ತು ಸುವ್ಯವಸ್ಥೆಗೆ ಭಂಗ ಉಂಟು ಮಾಡಲು ಪ್ರಚೋದಕರಾಗಿ ಬೇಜವಾಬ್ದಾರಿತನ ಪ್ರದರ್ಶಿಸಿರುತ್ತೀರಿ.

4) ಈ ಸಮಯದಲ್ಲಿ ನೀವು ಪೊಲೀಸ್ ಪಡೆಯೊಡನೆ ಸಂಪೂರ್ಣ ಸುಸಜ್ಜಿತರಾಗಿ ವಿಠಲೇನಹಳ್ಳಿ ಗ್ರಾಮಕ್ಕೆ ತೆರಳಿದ್ದರೂ ಸಹ ಉದ್ರಿಕ್ತ ಗಾಮಸ್ಥ ರೊಡನೆ ತಕ್ಷಣ ಮಾತುಕತೆ ನಡೆಸಿ, ಉದ್ರಿಕ್ತ ವಾತಾವರಣವನ್ನು ತಿಳಿಗೊಳಿಸಿ ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡುವ ಬದಲು ನೀವು ಸಕಾರತ್ಮಕವಾಗಿ ವರ್ತಿಸಿದ್ದು, ಇದರಿಂದ ರೊಚ್ಚಿಗೆದ್ದ ಗ್ರಾಮಸ್ಥರು ಪೊಲೀಸ್ ಸಿಬ್ಬಂದಿಯ ಹಾಗೂ ವಾಹನಗಳ ಮೇಲೆ ಕಲ್ಲುಗಳನ್ನು ತೂರಿ ಪೊಲೀಸ್ ಸಿಬ್ಬಂದಿಗಳಿಗೆ ಗಾಯಗಳನ್ನು ಉಂಟು ಮಾಡಿದುದಲ್ಲದೇ ಸಾರ್ವಜನಿಕ ವಾಹನಗಳಿಗೂ ಸಹ ಹಾನಿ ಉಂಟು ಮಾಡಲು ಅಪರೋಕ್ಷವಾಗಿ ನೀವು ಕಾರಣರಾಗಿ ನಿಮ್ಮ ಬೇಜವಾಬ್ದಾರಿತನ, ಕರ್ತವ್ಯ ನಿರ್ಲಕ್ಷ್ಯತೆ ಹಾಗೂ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ.

5) ದಿ:09–10–2001 ರಂದು ವಿಠಲೇನಹಳ್ಳಿ ಗ್ರಾಮದಲ್ಲಿ ಮೂಲತ: ಕಾನೂನು ಮತ್ತು ಸುವ್ಯವಸ್ಥೆ ಹದಗೆಡಲು ಕಾರಣಕರ್ತರಾಗಿದ್ದ ನೀವು ನಿಮ್ಮ ಸಕಾರಾತ್ಮಕ ವರ್ತನೆಯಿಂದ ಅಲ್ಲಿನ ಪರಿಸ್ಥಿತಿಯನ್ನು ತಿಳಿಗೊಳಿಸದೇ ವಿವೇಚನಾರಹಿತರಾಗಿ ಉದ್ರಿಕ್ತ ಗ್ರಾಮಸ್ಥರ ಗುಂಪಿನ ಮೇಲೆ ಗೋಲೀಬಾರ್ ನಡೆಸಲು ಆದೇಶಿಸುವ ಪೂರ್ವದಲ್ಲಿ ತೆಗೆದುಕೊಳ್ಳಬೇಕಾಗಿದ್ದ ಅಗತ್ಯವಾದ ಕ್ರಮಗಳನ್ನು ಹಾಗೂ ಕನಿಷ್ಟ ಪ್ರಮಾಣದ ಮುನ್ನೆಚ್ಚರಿಕೆಯನ್ನೂ ತೆಗೆದು ಕೊಳ್ಳದೇ ಅವರ ಮೇಲೆ ಸಮಯೋಚಿತವಲ್ಲದ ಗೋಲೀಬಾರ್ ನಡೆಸಲು ಆದೇಶಿಸಿ ಆ ಮೂಲಕ ಇಬ್ಬರು ಅಮಾಯಕರ ರೈತರ ಆಹುತಿಗೆ ಕಾರಣಕರ್ತರಾಗಿ ನಿಮ್ಮ ಬೇಜವಾಬ್ದಾರಿತನ, ಕರ್ತವ್ಯ ನಿರ್ಲಕ್ಷ್ಯತೆ ವಿವೇಚನಾರಹಿತ ನಿರ್ಧಾರ ಹಾಗೂ ತೀವ್ರತರನಾದ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ.

6) ನೀವು ದಿ:09–10–2001 ರಂದು ಪ್ರಕ್ಷುಬ್ಧ ಸಮಯದಲ್ಲಿ ವಿಠಲೇನಹಳ್ಳಿಯಲ್ಲಿದ್ದ ಪೊಲೀಸ್ ಪಡೆಯ ಅತ್ಯಂತ ಹಿರಿಯ ಅಧಿಕಾರಿಯಾಗಿದ್ದು ಈ ಸಂದರ್ಭದಲ್ಲಿ ನೀವು ಗ್ರಾಮದಲ್ಲೇ ಇದ್ದು ನಿಮ್ಮೊಡನಿದ್ದ ಪೊಲೀಸ್ ಪಡೆಯ ಸಹಾಯದಿಂದ ಹಾಗೂ ಗ್ರಾಮಸ್ಥರೊಡನೆ ಮಾತುಕತೆ ನಡೆಸಿ ಅವರ ಸಹಕಾರದಿಂದ ಅಲ್ಲಿನ ಪ್ರಕ್ಷುಬ್ಧ ವಾತಾವರಣವನ್ನು ತಿಳಿಗೊಳಿಸಿ ಕಾನೂನು ಮತ್ತು ಸುವ್ಯವಸ್ಥೆಯನ್ನು ಹತೋಟಿಗೆ ತರಲು ಕ್ರಮ ಕೈಗೊಳ್ಳದೇ ನೀವು ಅಲ್ಲಿಗೆ ತೆರಳಿದ್ದ ಖಾಸಗಿ ಟಾಟಾಸುಮೋ ವಾಹನದಲ್ಲಿ ವಿಠಲೇನಹಳ್ಳಿ ಗ್ರಾಮದಿಂದ ಪಲಾಯನಗೊಂಡು ಗ್ರಾಮದಲ್ಲಿನ ಉದ್ರಿಕ್ತ ಪರಿಸ್ಥಿತಿಯ ನಿಯಂತ್ರಣದ ಹೊಣೆಗಾರಿಕೆಯನ್ನು ಅಲ್ಲಿದ್ದ ಡಿ.ಎ.ಆರ್.ನ ಕೆಳಹಂತದ ಸಿಬ್ಬಂದಿಗೆ ವಹಿಸಿ ನಿಮ್ಮ ಪಲಾಯನವಾದ, ಕರ್ತವ್ಯ ವಿಮುಖತೆ, ತೀವ್ರ ಬೇಜವಾಬ್ದಾರಿತನ ಹಾಗೂ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ.

7) ದಿ:09–10–2001ರ ಬೆಳಗಿನ ಜಾವ ನೀವು ವಿಠಲೇನಹಳ್ಳಿಗೆ ಪೊಲೀಸ್ ಪಡೆಯ ವಾಹನದೊಡನೆ ತೆರಳುವಾಗ ನಿಮಗೆ ಅಲ್ಲಿ ಮುಂದೆ ಜರುಗ ಬಹುದಾದ ಘಟನೆಗಳ ಬಗ್ಗೆ ಸಾಕಷ್ಟು ಮಾಹಿತಿ ಇದ್ದರೂ ಸಹ ನೀವು ಅಲ್ಲಿ ಉದ್ಭವಿಸಬಹುದಾದ ಕಾನೂನು ಮತ್ತು ಸುವ್ಯವಸ್ಥೆಯ ಹಾಗೂ ಶಾಂತಿ ಕದಡುವ ವಾತಾವರಣದ ವಿಮರ್ಶೆ ಮಾಡಿ ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡಲು ಹಾಗೂ ಸಾರ್ವಜನಿಕರು, ಪೊಲೀಸ್ ಸಿಬ್ಬಂದಿ ಹಾಗೂ ಸಾರ್ವಜನಿಕ ವಾಹನಗಳಿಗೆ ಹಾನಿ ಉಂಟು ಮಾಡುವುದನ್ನು ತಪ್ಪಿಸಲು ಅಗತ್ಯ ಪ್ರತಿಬಂಧಕ ಆದೇಶವನ್ನು ಹೊರಡಿಸಲು ಅವಶ್ಯಕವಾದ ಕಾರ್ಯಕಾರಿ ನ್ಯಾಯಾಧೀಶರ ಸೇವೆಯನ್ನು ಬಳಸಿಕೊಳ್ಳದೇ ಸಮಯೋಚಿತವಲ್ಲದ ಗೋಲೀಬಾರ್ ನಡೆಸುವ ನಿರ್ದಾರ ತೆಗೆದುಕೊಂಡು ನಿಮ್ಮ ಬೇಜವಾಬ್ದಾರಿತನ, ಕರ್ತವ್ಯ ನಿರ್ಲಕ್ಷ್ಯತೆ ಹಾಗೂ ದೂರದೃಷ್ಠಿಯ ಕೊರತೆಯನ್ನು ಪ್ರದರ್ಶಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ 3 ಮತ್ತು 5ನ್ನು ಹೊರತುಪಡಿಸಿ ಉಳಿದ ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ

ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಕೇಂದ ವಲಯ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿ:10–03–2008ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿ ದಿ:09–10–2001 ರಿಂದ 04–07–2002 ರವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ, ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರನ್ನು ಕರ್ತವ್ಯಕ್ಕೆ ಪುನರ್‌ನೇಮಕ ಮಾಡಿ ಇವರ ಮುಂದಿನ ಮೂರು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗುವಂತೆ ಮುಂದೂಡಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಹಾಗೂ ವಜಾಗೊಂಡ ದಿನಾಂಕದಿಂದ ಕರ್ತವ್ಯಕ್ಕೆ ವರದಿಮಾಡಿಕೊಂಡ ದಿನಾಂಕದವರೆಗಿನ ಅವಧಿಯನ್ನು ಕರ್ತವ್ಯದಿಂದ ಹೊರಗುಳಿದ ಅವಧಿಯೆಂದು ಪರಿಗಣಿಸಿ, ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:27–06–2008ರ ಆದೇಶದಲ್ಲಿ ದಂಡನಾದೇಶವನ್ನು ಭಾಗಶ: ಮಾರ್ಪಡಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ, ಮೇಲ್ಮನವಿ ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 325 ಪೊಸಿಅ 2008 ಬೆಂಗಳೂರು, ದಿನಾಂಕ:12ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ1963ರ ಕಲಂ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ.ರಾಜೇಂದ್ರ ಕುಮಾರ್, ಪೊಲೀಸ್ ಸಬ್–ಇನ್ಸ್‌ಪೆಕ್ಟ್, ಕೋಲಾರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 670

**ಟಿ.ಎನ್.ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ.ಜಿ.ಎಸ್.ಪವಾರ್, ಸಿ.ಎಚ್.ಸಿ.1095, ಎ.ಪಿ.ಎಂ.ಸಿ. ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1 ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾವಿ ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ–2/ಇವಿ/8/2002 ಆ.ಪು.ಸಂ:45/04 ದಿನಾಂಕ:17–01–2004

2 ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾಂ ಇವರ ಆದೇಶ ಸಂಖ್ಯೆ:ಅಪೀಲು: 4/ಉವ/2004 ದಿನಾಂಕ:21–07–2004

3 ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:03–01–2008

4 ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು(2)133/2007–08 ದಿನಾಂಕ:01–04–2008

5 ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 60 ಸಿಎನ್‌ಎಸ್ 08 ದಿನಾಂಕ: 14–11–08

**ಪ್ರಸ್ತಾವನೆ:**

ಶ್ರೀ.ಜಿ.ಎಸ್.ಪವಾರ್, ಸಿ.ಎಚ್.ಸಿ.1095, ಇವರು ಯಮಕನಮರ್ಡಿ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಕರ್ತವ್ಯದಲ್ಲಿ ಘೋರ ದುರ್ನಡತೆಯನ್ನು ಪ್ರದರ್ಶಿಸಿರುವ ಹಿನ್ನೆಲೆಯಲ್ಲಿ ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:–**

"ಆಪಾದಿತ ಪೊಲೀಸ್ ಅಧಿಕಾರಿಯಾದ ನೀವು ಈ ಹಿಂದೆ ಯಮಕನಮರಡಿ ಪೊಲೀಸ್ ಠಾಣೆಯಲ್ಲಿ ಸಿಎಚ್‌ಸಿ ಅಂತಾ ಕರ್ತವ್ಯ ನಿರ್ವಹಿಸುತ್ತಿದ್ದಾಗ ದಿ:07–11–2001ರಂದು ಹತ್ತರಗಿ ಗ್ರಾಮದ ಶ್ರೀ.ರಾಯಪ್ಪ ಮಲ್ಲಪ್ಪ ಬಸ್ಸಾಪೂರ ಇವರ ಸರ್ಕಾರದ ಅಧಿಕೃತ ಕೆಲಸ ಮಾಡಿಕೊಡಲು ಅಂದರೆ ಅವರ ತಮ್ಮ ಹಾಗೂ ತಂದೆಯನ್ನು ಬಿಡುಗಡೆ ಮಾಡಲು ಸದರಿಯವರಿಂದ 2500–00 ರೂಪಾಯಿ ಹಣವನ್ನು ಅಕ್ರಮ ಸಂಭಾವನೆಯಾಗಿ ಪಡೆಯುತ್ತಿದ್ದಾಗ ಲೋಕಾಯುಕ್ತರ ಬಲೆಗೆ ಸಿಲುಕಿ ನಿಮ್ಮ ಕರ್ತವ್ಯದಲ್ಲಿ ಘೋರ ದುರ್ನಡತೆಯನ್ನು ಪ್ರದರ್ಶಿಸಿರುವಿರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ: 17–01–2004ರ ಆದೇಶದಲ್ಲಿ ಅರ್ಜಿದಾರರನ್ನು "ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆಯನ್ನು ವಿಧಿಸಿದ್ದಾರೆ ಹಾಗೂ ದಿ:02–01–2002 ರಿಂದ 30–05–2002ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದು ಪರಿಗಣಿಸಲಾಗಿದೆ."

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾಂ, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲದಿದ್ದರೂ ಮೇಲ್ಮನವಿ ಅರ್ಜಿದಾರರ ಹಿಂದಿನ ಸೇವಾ ವಿವರವನ್ನು ಪರಿಗಣಿಸಿ ಅನುಕಂಪ ತೋರಿ ಅರ್ಜಿದಾರರ ಮೇಲ್ಮನವಿಯನ್ನು ಭಾಗಶಃ ಮಾರ್ಪಡಿಸಿ ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:21–07–2004ರ ಆದೇಶದಲ್ಲಿ ಇವರನ್ನು ಸೇವೆಯಲ್ಲಿ ಪುನರ್‌ಸ್ಥಾಪಿಸಿ, ಅವರ ವೇತನವನ್ನು 5ಹಂತಗಳವರೆಗೆ ಕೆಳಗಿಳಿಸಲಾಗಿದೆ. ಅವರು ಹೊಸದಾಗಿ ವೇತನ ಮುಂಬಡ್ತಿಯನ್ನು ಪಡೆಯುವ ದಂಡನೆಯನ್ನು ವಿಧಿಸಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಮೇಲ್ಮನವಿ ಪ್ರಾಧಿಕಾರವು ದಂಡನೆಯ ಅವಧಿಯನ್ನು ನಿರ್ಧಿಷ್ಠಾಗಿ ತಿಳಿಸದೇ ಇರುವುದನ್ನು ಗಣನೆಗೆ ತೆಗೆದುಕೊಂಡು ಮೇಲ್ಮನವಿ ಪ್ರಾಧಿಕಾರದ ಆದೇಶವನ್ನು ಭಾಗಶಃ ಮಾರ್ಪಡಿಸಲು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಓದಲಾದ (5)ರ ಪತ್ರದಲ್ಲಿ ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 145 ಪೊಸಿಅ 2008 ಬೆಂಗಳೂರು, ದಿನಾಂಕ:03ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಕಾಯ್ದೆ **1963**ರ ಕಲಂ **25** ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ,

ಶ್ರೀ.ಜಿ.ಎಸ್.ಪವಾರ್, ಸಿ.ಎಚ್.ಸಿ.1095, ಎ.ಪಿ.ಎಂ.ಸಿ. ಪೊಲೀಸ್ ಠಾಣೆ, ಬೆಳಗಾವಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ಭಾಗಶಃ ಪುರಸ್ಕರಿಸಿ, ಇವರ ವೇತನವನ್ನು **5**ಹಂತಗಳವರೆಗೆ 2ವರ್ಷಗಳ ಅವಧಿಗೆ ಕೆಳಗಿಳಿಸಿ ನಂತರ ಹೊಸದಾಗಿ ವೇತನ ಬಡ್ತಿಯನ್ನು ಪಡೆಯುವುದು ಹಾಗೂ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ, ಇವರು ಸೇವೆಯಿಂದ ಹೊರಗುಳಿದ ಅವಧಿಯನ್ನು ಸೇವೆಯಿಂದ ಹೊರಗಿದ್ದಂತೆಯೇ ಎಂದು ಪರಿಗಣಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 671

**ಟಿ.ಎನ್.ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಎಸ್.ಆರ್. ಶಿಂಧೆ, ಸಹಾಯಕ ಅಭಿಯೋಗ ನಿರ್ದೇಶಕರು, ಬಿಜಾಪುರ, ಇವರ ಜನ್ಮ ದಿನಾಂಕದ ತಿದ್ದುಪಡಿಗಾಗಿ ಮಂಡನಾಧಿಕಾರಿಯ ನೇಮಕ ಹಾಗೂ ಪ್ರಕರಣದ ವಿಚಾರಣೆಗೆ ಆದೇಶಿಸುವ ಕುರಿತು.

**ಓದಲಾಗಿದೆ :**
1 ಸರ್ಕಾರದ ಆದೇಶ ಸಂ: ಒಇ 529 ಪಿಪಿಇ 2006,ದಿನಾಂಕ: 13.02.2007.
2 ಸದರಿ ಅಧಿಕಾರಿಯ ಮೇಲ್ಮನವಿ, ದಿನಾಂಕ: 31.10.2007.
3 ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರದ ಸಂ: ಡಿಪಿಎನ್/ಕೇಂಸ/ವಿವ/39/01–02, ದಿನಾಂಕ: 24.12.2007.
4 ಸರ್ಕಾರದ ಅಧಿಸೂಚನೆಯ ಸಂ:ಡಿಪಿಎಆರ್/ಎಸ್‌ಎಸ್‌ಆರ್/94, ದಿನಾಂಕ:15.03.1994

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀ ಎಸ್.ಆರ್. ಶಿಂಧೆ, ಸಹಾಯಕ ಅಭಿಯೋಗ ನಿರ್ದೇಶಕರು, ಬಿಜಾಪುರ, ಇವರ ಜನ್ಮ ದಿನಾಂಕವನ್ನು ಕರ್ನಾಟಕ ಸರ್ಕಾರಿ ನೌಕರರ (ವಯೋನಿರ್ಧಾರ) (ತಿದ್ದುಪಡಿ) ಕಾಯ್ದೆ 1982ರ ಕಲಂ3ರ ಉಪಕಲಂ–2ರನ್ವಯ, ಎಸ್ಎಸ್ಎಲ್ಸಿ ಅಂಕಪಟ್ಟಿಯ ನಮೂದಿನಂತೆ 20.06.1969 ಎಂದು ಸರ್ಕಾರವು ಒಪ್ಪಿರುತ್ತದೆ.

ಮೇಲೆ (2)ರಲ್ಲಿ ಓದಲಾದ ಮೇಲ್ಮನವಿಯಲ್ಲಿ, ಸದರಿ ಅಧಿಕಾರಿಯು ಅವರ ನಿಜವಾದ ಜನ್ಮ ದಿನಾಂಕವು ಹುಕ್ಕೇರಿ ತಹಶೀಲ್ದಾರರ ಕಾರ್ಯಾಲಯದಲ್ಲಿನ ನೋಂದಣಿಯನ್ವಯ ನೀಡಿರುವ ಜನನ ಪ್ರಮಾಣ ಪತ್ರದಲ್ಲಿರುವಂತೆ 16.05.1970 ಆಗಿರುತ್ತದೆ ಎಂದು, ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದ ವಿರುದ್ಧ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರರವರು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ (ವಯೋ ನಿರ್ಧಾರ) ಅಧಿನಿಯಮ 1974ರ ಕಲಂ 5ರ ಉಪನಿಯಮ 1 ಮತ್ತು 2ರ ಹಿನ್ನಲೆಯಲ್ಲಿ, ಮೇಲೆ (2)ರಲ್ಲಿ ಓದಲಾದ ಮೇಲ್ಮನವಿಯನ್ನು ಸರ್ಕಾರಕ್ಕೆ ಕಳುಹಿಸಿದ್ದಾರೆ.

ಮೇಲೆ (4)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ (ವಯೋ ನಿರ್ಧಾರ) ಅಧಿನಿಯಮ 1974ರ ಕಲಂ 5ರ ಉಪನಿಯಮ 3ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಇಂತಹ ಪ್ರಕರಣಗಳ ಇತ್ಯರ್ಥಕ್ಕಾಗಿ ಕಾನೂನು ಇಲಾಖೆಯ ವಾದೇಕ್ಷಕರು ಹಾಗೂ ಪದನಿಮಿತ್ತ ಸರ್ಕಾರ ಉಪಕಾರ್ಯದರ್ಶಿ ಮಟ್ಟದ ಅಧಿಕಾರಿಯನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಆದ್ದರಿಂದ, ಪ್ರಕರಣದ ವಿಚಾರಣೆಗೆ ಹಾಗೂ ಒಳಾಡಳಿತ ಇಲಾಖೆಯ ಪರವಾಗಿ ವಾದ ಮಂಡಿಸುವ ಸಲುವಾಗಿ ಮಂಡನಾಧಿಕಾರಿಯನ್ನು ನೇಮಕ ಮಾಡಲು, ಈ ಬಗ್ಗೆ ಕಾನೂನು ಇಲಾಖೆಯೊಡನೆ ಸಮಾಲೋಚಿಸಿ ಈ ಮುಂದಿನಂತೆ ಸರ್ಕಾರವು ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 76 ಪಿಪಿಇ 2008, ಬೆಂಗಳೂರು, ದಿನಾಂಕ: 9ನೇ ಮಾರ್ಚ್ 2009**.

ಮೇಲೆ ವಿವರಿಸಿರುವ ಹಿನ್ನಲೆಯಲ್ಲಿ, ಶ್ರೀ ಎಸ್.ಆರ್. ಶಿಂಧೆ, ಸಹಾಯಕ ಅಭಿಯೋಗ ನಿರ್ದೇಶಕರು, ಬಿಜಾಪುರ, ಇವರ ಜನ್ಮ ದಿನಾಂಕವನ್ನು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ (ವಯೋ ನಿರ್ಧಾರ) ಅಧಿನಿಯಮ 1974ರ ನಿಯಮ 5ರ ಉಪನಿಯಮ 1ರನ್ವಯ ತಿದ್ದುಪಡಿ ಮಾಡುವ ಸಲುವಾಗಿ ಸದರಿ ಅಧಿನಿಯಮದ ನಿಯಮ 5ರ ಉಪನಿಯಮ 3ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಕರಣದ ವಿಚಾರಣಾಧಿಕಾರಿಗಳ ಮುಂದೆ ಒಳಾಡಳಿತ ಇಲಾಖೆಯ ಪರವಾಗಿ ಪ್ರಕರಣವನ್ನು ಮಂಡಿಸಲು ಮತ್ತು ವಾದ ಮಾಡಲು ಶ್ರೀ ಜಿ.ಎ. ಮೂಲಿಮನಿ, ಸಹಾಯಕ ವಾದೇಕ್ಷಕರು ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ(ವ್ಯಾಜ್ಯ), ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ, ಪ್ರಕರಣದ ವಿಚಾರಣೆಗೆ ಆದೇಶಿಸಿದೆ.

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ಅನಧಿಕೃತ ಟಿಪ್ಪಣಿಯ ಸಂಖ್ಯೆ: ಲಾ 154 ಎಲ್ಎಜಿ 2008, ದಿನಾಂಕ: 15.12.2008ರನ್ವಯ ಮಂಡನಾಧಿಕಾರಿಯನ್ನು ನೇಮಿಸಿ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 861

**ಕೆ.ಸಿ.ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎ.ಕೆ. ಜಾಡಗೌಡ, ಸಹಾಯಕ ಸರ್ಕಾರಿ ಅಭಿಯೋಜಕರು, ಖಾನಾಪುರ, ಇವರ ಜನ್ಮ ದಿನಾಂಕದ ತಿದ್ದುಪಡಿಗಾಗಿ ಮಂಡನಾಧಿಕಾರಿಯ ನೇಮಕ ಹಾಗೂ ಪ್ರಕರಣದ ವಿಚಾರಣೆಗೆ ಆದೇಶಿಸುವ ಕುರಿತು.

**ಓದಲಾಗಿದೆ :**
1 ಸರ್ಕಾರದ ಆದೇಶ ಸಂ: ಒಇ 529 ಪಿಪಿಇ 2006, ದಿನಾಂಕ: 13.02.2007.
2 ಸದರಿ ಅಧಿಕಾರಿಯ ಮೇಲ್ಮನವಿ, ದಿನಾಂಕ: 03.07.2007.
3 ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರದ ಸಂ: ಡಿಪಿಎನ್/ಕೇಂಸ/ವಿವ/31/97–98, ದಿನಾಂಕ: 27.08.2007.
4 ಸರ್ಕಾರದ ಅಧಿಸೂಚನೆಯ ಸಂ:ಡಿಪಿಎಆರ್/13/ಎಸ್ಎಸ್ಆರ್/94, ದಿನಾಂಕ:15.03.1994

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀ ಎ.ಕೆ. ಜಾಡಗೌಡ, ಸಹಾಯಕ ಸರ್ಕಾರಿ ಅಭಿಯೋಜಕರು, ಖಾನಾಪುರ, ಇವರ ಜನ್ಮ ದಿನಾಂಕವನ್ನು ಕರ್ನಾಟಕ ಸರ್ಕಾರಿ ನೌಕರರ (ವಯೋನಿರ್ಧಾರ) (ತಿದ್ದುಪಡಿ) ಕಾಯ್ದೆ 1982ರ ಕಲಂ3ರ ಉಪಕಲಂ–2ರನ್ವಯ, ಎಸ್‌ಎಸ್‌ಎಲ್‌ಸಿ ಅಂಕಪಟ್ಟಿಯ ನಮೂದಿನಂತೆ 16.07.1959 ಎಂದು ಸರ್ಕಾರವು ಒಪ್ಪಿರುತ್ತದೆ.

ಮೇಲೆ (2)ರಲ್ಲಿ ಓದಲಾದ ಮೇಲ್ಮನವಿಯಲ್ಲಿ, ಸದರಿ ಅಧಿಕಾರಿಯು ಅವರ ನಿಜವಾದ ಜನ್ಮ ದಿನಾಂಕವು ರಬಕವಿ–ಬನಹಟ್ಟಿ ಪುರಸಭೆಯ ಬನಹಟ್ಟಿಯ ಕಾರ್ಯಾಲಯದಲ್ಲಿನ ನೋಂದಣಿಯನ್ವಯ ನೀಡಿರುವ ಜನನ ಪ್ರಮಾಣ ಪತ್ರದಲ್ಲಿರುವಂತೆ 06.04.1960 ಆಗಿರುತ್ತದೆ ಎಂದು, ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದ ವಿರುದ್ಧ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರರವರು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ (ವಯೋ ನಿರ್ಧಾರ) ಅಧಿನಿಯಮ 1974ರ ಕಲಂ 5ರ ಉಪನಿಯಮ 1 ಮತ್ತು 2ರ ಹಿನ್ನಲೆಯಲ್ಲಿ, ಮೇಲೆ (2)ರಲ್ಲಿ ಓದಲಾದ ಮೇಲ್ಮನವಿಯನ್ನು ಸರ್ಕಾರಕ್ಕೆ ಕಳುಹಿಸಿದ್ದಾರೆ.

ಮೇಲೆ (4)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ (ವಯೋ ನಿರ್ಧಾರ) ಅಧಿನಿಯಮ 1974ರ ಕಲಂ 5ರ ಉಪನಿಯಮ 3ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಇಂತಹ ಪ್ರಕರಣಗಳ ಇತ್ಯರ್ಥಕ್ಕಾಗಿ ಕಾನೂನು ಇಲಾಖೆಯ ವಾದೇಕ್ಷಕರು ಹಾಗೂ ಪದನಿಮಿತ್ತ ಸರ್ಕಾರ ಉಪಕಾರ್ಯದರ್ಶಿ ಮಟ್ಟದ ಅಧಿಕಾರಿಯನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಆದ್ದರಿಂದ, ಪ್ರಕರಣದ ವಿಚಾರಣೆಗೆ ಹಾಗೂ ಒಳಾಡಳಿತ ಇಲಾಖೆಯ ಪರವಾಗಿ ವಾದ ಮಂಡಿಸುವ ಸಲುವಾಗಿ ಮಂಡನಾಧಿಕಾರಿಯನ್ನು ನೇಮಕ ಮಾಡಲು, ಈ ಬಗ್ಗೆ ಕಾನೂನು ಇಲಾಖೆಯೊಡನೆ ಸಮಾಲೋಚಿಸಿ ಈ ಮುಂದಿನಂತೆ ಸರ್ಕಾರವು ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 490 ಪಿಪಿಇ 2007, ಬೆಂಗಳೂರು, ದಿನಾಂಕ: 9ನೇ ಮಾರ್ಚ್ 2009.**

ಮೇಲೆ ವಿವರಿಸಿರುವ ಹಿನ್ನಲೆಯಲ್ಲಿ, ಶ್ರೀ ಎ.ಕೆ. ಜಾಡಗೌಡ, ಸಹಾಯಕ ಸರ್ಕಾರಿ ಅಭಿಯೋಜಕರು, ಖಾನಾಪುರ, ಇವರ ಜನ್ಮ ದಿನಾಂಕವನ್ನು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ (ವಯೋ ನಿರ್ಧಾರ) ಅಧಿನಿಯಮ 1974ರ ನಿಯಮ 5ರ ಉಪನಿಯಮ 1ರನ್ವಯ ತಿದ್ದುಪಡಿ ಮಾಡುವ ಸಲುವಾಗಿ ಸದರಿ ಅಧಿನಿಯಮದ ನಿಯಮ 5ರ ಉಪನಿಯಮ 3ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಕರಣದ ವಿಚಾರಣಾಧಿಕಾರಿಗಳ ಮುಂದೆ ಒಳಾಡಳಿತ ಇಲಾಖೆಯ ಪರವಾಗಿ ಪ್ರಕರಣವನ್ನು ಮಂಡಿಸಲು ಮತ್ತು ವಾದ ಮಾಡಲು ಶ್ರೀ ಜಿ.ಎ. ಮೂಲಿಮನಿ, ಸಹಾಯಕ ವಾದೇಕ್ಷಕರು ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ(ವ್ಯಾಜ್ಯ), ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ, ಪ್ರಕರಣದ ವಿಚಾರಣೆಗೆ ಆದೇಶಿಸಿದೆ.

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ಅನಧಿಕೃತ ಟಿಪ್ಪಣಿಯ ಸಂಖ್ಯೆ: ಲಾ 155 ಎಲ್‌ಎಜಿ 2008, ದಿನಾಂಕ: 15.12.2008ರನ್ವಯ ಮಂಡನಾಧಿಕಾರಿಯನ್ನು ನೇಮಿಸಿ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 862

**ಕೆ.ಸಿ.ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಕಾ ಮತ್ತು ಸು ಹಾಗೂ ಕಾಫಿಮೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎಸ್.ಬಿ. ಹಾವೇರಿ, ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆ.ಎಂ.ಎಫ್.ಸಿ. ನ್ಯಾಯಾಲಯ, ಬೆಳಗಾವಿ, ಇವರ ಜನ್ಮ ದಿನಾಂಕದ ಪರಿಷ್ಕರಣೆಗಾಗಿ ಮಂಡನಾಧಿಕಾರಿಯ ನೇಮಕ ಹಾಗೂ ವಿಚಾರಣೆಗೆ ಆದೇಶಿಸುವ ಕುರಿತು.

**ಓದಲಾಗಿದೆ :** 1 ಸರ್ಕಾರದ ಆದೇಶ ಸಂ: ಒಇ 529 ಪಿಪಿಇ 2006, ದಿನಾಂಕ: 13.02.2007.

2 ಸದರಿ ಅಧಿಕಾರಿಯ ಮೇಲ್ಮನವಿ, ದಿನಾಂಕ: 02.06.2007.

3 ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರದ ಸಂ: ಡಿಪಿಎನ್/ಕೇಂಸ/ವಿವ/28/97–98, ದಿನಾಂಕ: 24.07.2007.

4 ಸರ್ಕಾರದ ಅಧಿಸೂಚನೆಯ ಸಂ:ಡಿಪಿಎಆರ್/13/ಎಸ್‌ಎಸ್‌ಆರ್/94, ದಿನಾಂಕ:15.03.1994

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀ ಎಸ್.ಬಿ. ಹಾವೇರಿ, ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆ.ಎಂ.ಎಫ್.ಸಿ. ನ್ಯಾಯಾಲಯ, ಬೆಳಗಾವಿ, ಇವರ ಜನ್ಮ ದಿನಾಂಕವನ್ನು ಕರ್ನಾಟಕ ಸರ್ಕಾರಿ ನೌಕರರ (ವಯೋನಿರ್ಧಾರ) (ತಿದ್ದುಪಡಿ) ಕಾಯ್ದೆ 1982ರ ಕಲಂ3ರ ಉಪಕಲಂ–2ರನ್ವಯ, ಎಸ್ಎಸ್ಎಲ್‌ಸಿ ಅಂಕಪಟ್ಟಿಯ ನಮೂದಿನಂತೆ 01.05.1964 ಎಂದು ಸರ್ಕಾರವು ಒಪ್ಪಿರುತ್ತದೆ.

ಮೇಲೆ (2)ರಲ್ಲಿ ಓದಲಾದ ಮೇಲ್ಮನವಿಯಲ್ಲಿ, ಸದರಿ ಅಧಿಕಾರಿಯು ಅವರ ನಿಜವಾದ ಜನ್ಮ ದಿನಾಂಕವು ಹಾವೇರಿ ತಹಶೀಲ್ದಾರರ ಕಾರ್ಯಾಲಯದಲ್ಲಿನ ನೋಂದಣಿಯನ್ವಯ ನೀಡಿರುವ ಜನನ ಪ್ರಮಾಣ ಪತ್ರದಲ್ಲಿರುವಂತೆ 10.06.1965 ಆಗಿರುತ್ತದೆ ಎಂದು, ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದ ವಿರುದ್ಧ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರರವರು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ (ವಯೋ ನಿರ್ಧಾರ) ಅಧಿನಿಯಮ 1974ರ ಕಲಂ 5ರ ಉಪನಿಯಮ 1 ಮತ್ತು 2ರ ಹಿನ್ನಲೆಯಲ್ಲಿ, ಮೇಲೆ (2)ರಲ್ಲಿ ಓದಲಾದ ಮೇಲ್ಮನವಿಯನ್ನು ಸರ್ಕಾರಕ್ಕೆ ಕಳುಹಿಸಿದ್ದಾರೆ.

ಮೇಲೆ (4)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ (ವಯೋ ನಿರ್ಧಾರ) ಅಧಿನಿಯಮ 1974ರ ಕಲಂ 5ರ ಉಪನಿಯಮ 3ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಇಂತಹ ಪ್ರಕರಣಗಳ ಇತ್ಯರ್ಥಕ್ಕಾಗಿ ಕಾನೂನು ಇಲಾಖೆಯ ವಾದೇಕ್ಷಕರು ಹಾಗೂ ಪದನಿಮಿತ್ತ ಸರ್ಕಾರ ಉಪಕಾರ್ಯದರ್ಶಿ ಮಟ್ಟದ ಅಧಿಕಾರಿಯನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಆದ್ದರಿಂದ, ಪ್ರಕರಣದ ವಿಚಾರಣೆಗೆ ಹಾಗೂ ಒಳಾಡಳಿತ ಇಲಾಖೆಯ ಪರವಾಗಿ ವಾದ ಮಂಡಿಸುವ ಸಲುವಾಗಿ ಮಂಡನಾಧಿಕಾರಿಯನ್ನು ನೇಮಕ ಮಾಡಲು, ಈ ಬಗ್ಗೆ ಕಾನೂನು ಇಲಾಖೆಯೊಡನೆ ಸಮಾಲೋಚಿಸಿ ಈ ಮುಂದಿನಂತೆ ಸರ್ಕಾರವು ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 414 ಪಿಪಿಇ 2007, ಬೆಂಗಳೂರು, ದಿನಾಂಕ: 9ನೇ ಮಾರ್ಚ್ 2009.**

ಮೇಲೆ ವಿವರಿಸಿರುವ ಹಿನ್ನಲೆಯಲ್ಲಿ, ಶ್ರೀ ಎಸ್.ಬಿ. ಹಾವೇರಿ, ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆ.ಎಂ.ಎಫ್.ಸಿ. ನ್ಯಾಯಾಲಯ, ಬೆಳಗಾವಿ, ಇವರ ಜನ್ಮ ದಿನಾಂಕವನ್ನು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ (ವಯೋ ನಿರ್ಧಾರ) ಅಧಿನಿಯಮ 1974ರ ನಿಯಮ 5ರ ಉಪನಿಯಮ 1ರನ್ವಯ ತಿದ್ದುಪಡಿ ಮಾಡುವ ಸಲುವಾಗಿ ಸದರಿ ಅಧಿನಿಯಮದ ನಿಯಮ 5ರ ಉಪನಿಯಮ 3ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಕರಣದ ವಿಚಾರಣಾಧಿಕಾರಿಗಳ ಮುಂದೆ ಒಳಾಡಳಿತ ಇಲಾಖೆಯ ಪರವಾಗಿ ಪ್ರಕರಣವನ್ನು ಮಂಡಿಸಲು ಮತ್ತು ವಾದ ಮಾಡಲು ಶ್ರೀ ಜಿ.ಎ. ಮೂಲಿಮನಿ, ಸಹಾಯಕ ವಾದೇಕ್ಷಕರು ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ(ವ್ಯಾಜ್ಯ), ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ, ಪ್ರಕರಣದ ವಿಚಾರಣೆಗೆ ಆದೇಶಿಸಿದೆ.

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ಅನಧಿಕೃತ ಟಿಪ್ಪಣಿಯ ಸಂಖ್ಯೆ: ಲಾ 156 ಎಲ್ಎಜಿ 2008, ದಿನಾಂಕ: 15.12.2008ರನ್ವಯ ಮಂಡನಾಧಿಕಾರಿಯನ್ನು ನೇಮಿಸಿ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 863

**ಕೆ.ಸಿ.ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎಸ್.ವಿ. ಪಾಟೀಲ್, ಸಹಾಯಕ ಸರ್ಕಾರಿ ಅಭಿಯೋಜಕರು, 1ನೇ ಜೆ.ಎಂ.ಎಫ್.ಸಿ. ನ್ಯಾಯಾಲಯ, ದಾವಣಗೆರೆ ಇವರ ಜನ್ಮ ದಿನಾಂಕದ ಪರಿಷ್ಕರಣೆಗಾಗಿ ವಿಚಾರಣೆಗೆ ಆದೇಶಿಸುವ ಹಾಗೂ ಮಂಡನಾಧಿಕಾರಿಯ ನೇಮಿಸುವ ಕುರಿತು.

**ಓದಲಾಗಿದೆ :** 1 ಸರ್ಕಾರದ ಆದೇಶ ಸಂ: ಒಇ 529 ಪಿಪಿಇ 2006, ದಿನಾಂಕ: 13.02.2007.

2 ಸದರಿ ಅಧಿಕಾರಿಯ ಮೇಲ್ಮನವಿ, ದಿನಾಂಕ: 08.01.2008.

3 ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರದ ಸಂ: ಡಿಪಿಎನ್/ ಕೇಂಸ/ ವಿವ/29/97–98, ದಿನಾಂಕ: 01.03.2008.

4 ಸರ್ಕಾರದ ಅಧಿಸೂಚನೆಯ ಸಂ:ಡಿಪಿಎಆರ್/13/ಎಸ್ಎಸ್ಆರ್/94, ದಿನಾಂಕ:15.03.1994

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀ ಎಸ್.ವಿ. ಪಾಟೀಲ್, ಸಹಾಯಕ ಸರ್ಕಾರಿ ಅಭಿಯೋಜಕರು, 1ನೇ ಜೆ.ಎಂ.ಎಫ್.ಸಿ. ನ್ಯಾಯಾಲಯ, ದಾವಣಗೆರೆ, ಇವರ ಜನ್ಮ ದಿನಾಂಕವನ್ನು ಕರ್ನಾಟಕ ಸರ್ಕಾರಿ ನೌಕರರ (ವಯೋನಿರ್ಧಾರ) (ತಿದ್ದುಪಡಿ) ಕಾಯ್ದೆ 1982ರ ಕಲಂ3ರ ಉಪಕಲಂ–2ರನ್ವಯ, ಎಸ್‌ಎಸ್‌ಎಲ್‌ಸಿ ಅಂಕಪಟ್ಟಿಯ ನಮೂದಿನಲ್ಲಿದ್ದಂತೆ 21.07.1962 ಎಂದು ಸರ್ಕಾರವು ಒಪ್ಪಿರುತ್ತದೆ.

ಮೇಲೆ (2)ರಲ್ಲಿ ಓದಲಾದ ಮೇಲ್ಮನವಿಯಲ್ಲಿ, ಸದರಿ ಅಧಿಕಾರಿಯು ಅವರ ನಿಜವಾದ ಜನ್ಮ ದಿನಾಂಕವು ಹಾವೇರಿ ತಹಶೀಲ್ದಾರರ ಕಾರ್ಯಾಲಯದಲ್ಲಿನ ನೋಂದಣಿಯನ್ವಯ ನೀಡಿರುವ ಜನನ ಪ್ರಮಾಣ ಪತ್ರದಲ್ಲಿರುವಂತೆ 16.09.1963 ಆಗಿರುತ್ತದೆ ಎಂದು, ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದ ವಿರುದ್ಧ ಮೇಲ್ಮನವಿಯನ್ನು ಸಲ್ಲಿಸಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರರವರು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ (ವಯೋ ನಿರ್ಧಾರ) ಅಧಿನಿಯಮ 1974ರ ಕಲಂ 5ರ ಉಪನಿಯಮ 1 ಮತ್ತು 2ರ ಹಿನ್ನಲೆಯಲ್ಲಿ, ಮೇಲೆ (2)ರಲ್ಲಿ ಓದಲಾದ ಮೇಲ್ಮನವಿಯ ಬಗ್ಗೆ ಸರ್ಕಾರಕ್ಕೆ ಕಳುಹಿಸಿದ್ದಾರೆ.

ಮೇಲೆ (4)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ (ವಯೋ ನಿರ್ಧಾರ) ಅಧಿನಿಯಮ 1974ರ ಕಲಂ 5ರ ಉಪನಿಯಮ 3ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಇಂತಹ ಪ್ರಕರಣಗಳ ಇತ್ಯರ್ಥಕ್ಕಾಗಿ ಕಾನೂನು ಇಲಾಖೆಯ ವಾದೇಕ್ಷಕರು ಹಾಗೂ ಪದನಿಮಿತ್ತ ಸರ್ಕಾರ ಉಪಕಾರ್ಯದರ್ಶಿ ಮಟ್ಟದ ಅಧಿಕಾರಿಯನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ಆದ್ದರಿಂದ, ಪ್ರಕರಣದ ವಿಚಾರಣೆಗೆ ಹಾಗೂ ಒಳಾಡಳಿತ ಇಲಾಖೆಯ ಪರವಾಗಿ ವಾದ ಮಂಡಿಸುವ ಸಲುವಾಗಿ ಮಂಡನಾಧಿಕಾರಿಯನ್ನು ನೇಮಕ ಮಾಡಲು, ಈ ಬಗ್ಗೆ ಕಾನೂನು ಇಲಾಖೆಯೊಡನೆ ಸಮಾಲೋಚಿಸಿ ಈ ಮುಂದಿನಂತೆ ಸರ್ಕಾರವು ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 189 ಪಿಪಿಇ 2008, ಬೆಂಗಳೂರು, ದಿನಾಂಕ: 9ನೇ ಮಾರ್ಚ್ 2009.**

ಮೇಲೆ ವಿವರಿಸಿರುವ ಹಿನ್ನಲೆಯಲ್ಲಿ, ಶ್ರೀ ಎಸ್.ವಿ. ಪಾಟೀಲ್, ಸಹಾಯಕ ಸರ್ಕಾರಿ ಅಭಿಯೋಜಕರು, 1ನೇ ಜೆ.ಎಂ.ಎಫ್.ಸಿ. ನ್ಯಾಯಾಲಯ, ದಾವಣಗೆರೆ ಇವರ ಜನ್ಮ ದಿನಾಂಕವನ್ನು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ (ವಯೋ ನಿರ್ಧಾರ) ಅಧಿನಿಯಮ 1974ರ ನಿಯಮ 5ರ ಉಪನಿಯಮ 1ರನ್ವಯ ತಿದ್ದುಪಡಿ ಮಾಡುವ ಸಲುವಾಗಿ ಸದರಿ ಅಧಿನಿಯಮದ ನಿಯಮ5ರ ಉಪನಿಯಮ 3ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಕರಣದ ವಿಚಾರಣಾಧಿಕಾರಿಗಳ ಮುಂದೆ ಒಳಾಡಳಿತ ಇಲಾಖೆಯ ಪರವಾಗಿ ಪ್ರಕರಣವನ್ನು ಮಂಡಿಸಲು ಮತ್ತು ವಾದ ಮಾಡಲು ಶ್ರೀ ಜೆ.ಎ. ಮೂಲಿಮನಿ, ಸಹಾಯಕ ವಾದೇಕ್ಷಕರು ಮತ್ತು ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ(ವ್ಯಾಜ್ಯ), ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿ, ಪ್ರಕರಣದ ವಿಚಾರಣೆಗೆ ಆದೇಶಿಸಿದೆ.

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆಯ ಅನಧಿಕೃತ ಟಿಪ್ಪಣಿಯ ಸಂಖ್ಯೆ: ಲಾ 153 ಎಲ್‌ಎಜಿ 2008, ದಿನಾಂಕ: 15.12.2008ರನ್ವಯ ಮಂಡನಾಧಿಕಾರಿಯನ್ನು ನೇಮಿಸಿ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 864

**ಕೆ.ಸಿ.ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎಲ್.ಎಸ್. ಸುಳ್ಳದ್, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಆಯುಕ್ತರ ಕಛೇರಿ, ಹುಬ್ಬಳ್ಳಿ–ಧಾರವಾಡ, ಇವರ ವೇತನವನ್ನು ಶ್ರೀ ಎಂ.ಆರ್. ಬನ್ನಿಹಟ್ಟಿ ಇವರ ವೇತನಕ್ಕೆ ಸಮಾನಗೊಳಿಸುವ ಕುರಿತು.

**ಓದಲಾಗಿದೆ :**

1 ಸರ್ಕಾರದ ಅಧಿಸೂಚನೆ–II ಸಂ: ಲಾ 161 ಪಿಪಿಇ 86, ದಿನಾಂಕ: 24.07.1989.

2 ಸದರಿ ಅಧಿಕಾರಿಯವರ ಮನವಿ ದಿನಾಂಕ: 15.02.2008.

3 ಮಹಾಲೇಖಪಾಲರ ಕಛೇರಿಯ ಪತ್ರದ ಸಂ: ಜಿಇ13/ಜೆ1/08–09/215, ದಿನಾಂಕ: 26.06.2008.

4 ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/422/2007–08, ದಿನಾಂಕ: 08.09.2008.

**ಪ್ರಸ್ತಾವನೆ:**

ಶ್ರೀ ಎಲ್.ಎಸ್. ಸುಳ್ಳದ್, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಆಯುಕ್ತರ ಕಛೇರಿ, ಹುಬ್ಬಳ್ಳಿ–ಧಾರವಾಡ ಮತ್ತು ಶ್ರೀ ಎಂ.ಆರ್. ಬನ್ನಿಹಟ್ಟಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಬೆಂಗಳೂರು, ಇವರುಗಳು ಮೇಲೆ (1)ರಲ್ಲಿ ಓದಲಾದ ದಿನಾಂಕ:24.07.1989ರ ಸರ್ಕಾರದ ಅಧಿಸೂಚನೆಯನ್ವಯ ಕ್ರಮವಾಗಿ ಕ್ರ.ಸಂ:25 ಮತ್ತು ಕ್ರ.ಸಂ:38ರಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿರುತ್ತಾರೆ.

ಮೇಲೆ ಓದಲಾದ (2)ರ ಮನವಿ ಪತ್ರದಲ್ಲಿ ದಿನಾಂಕ: 30.07.2005ರಿಂದ ಸದರಿಯವರ ಹಾಗೂ ಜೇಷ್ಠತೆಯಲ್ಲಿ ಇವರಿಗಿಂತ ಕಿರಿಯರಾಗಿರುವ ಶ್ರೀ ಎಂ.ಆರ್. ಬನ್ನಿಹಟ್ಟಿರವರ ವೇತನದ ನಡುವೆ ಒಂದು ಹಂತದ ವ್ಯತ್ಯಾಸ ಉಂಟಾಗಿರುತ್ತದೆ. ಆದ್ದರಿಂದ, ಶ್ರೀ ಸುಳ್ಳದ್‌ರವರು ಅವರ ವೇತನವನ್ನು ದಿನಾಂಕ: 30.07.2005ರಂದು ರೂ.17,700–00ಗಳಿಗೆ ನಿಗಧಿಗೊಳಿಸಿ, ವಾರ್ಷಿಕ ವೇತನ ಬಡ್ತಿಯ ದಿನಾಂಕವಾದ 01.08.2005ಕ್ಕೆ ರೂ.18,150–00ಗಳಿಗೆ ವೇತನವನ್ನು ನಿಗಧಿ ಪಡಿಸಬೇಕೆಂದು ಕೋರಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಮಹಾಲೇಖಪಾಲರ ದಿನಾಂಕ:26.06.2008ರ ಪತ್ರದಲ್ಲಿ ದಿನಾಂಕ: 30.07.2005ರಂದು ಕಿರಿಯ ಅಧಿಕಾರಿಯಾದ ಶ್ರೀ ಎಂ.ಆರ್. ಬನ್ನಿಹಟ್ಟಿರವರಿಗೆ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಮುಂಬಡ್ತಿ ದೊರೆತ್ತಿದ್ದರಿಂದ ಅವರ ವೇತನವನ್ನು ರೂ.17,700–00ಗಳಿಗೆ ನಿಗದಿಪಡಿಸಲಾಗಿದೆ. ದಿನಾಂಕ:01.08.2005ರಂದು ಶ್ರೀ ಎಲ್.ಎಸ್. ಸುಳ್ಳದ್ ಮತ್ತು ಶ್ರೀ ಎಂ.ಆರ್. ಬನ್ನಿಹಟ್ಟಿರವರಿಗೆ ವಾರ್ಷಿಕ ವೇತನ ಬಡ್ತಿಯನ್ನು ನೀಡುವ ಮೂಲಕ ಇವರುಗಳ ವೇತನವನ್ನು ಕ್ರಮವಾಗಿ ರೂ.17,700–00ಗಳಿಗೆ ಮತ್ತು ರೂ.18,150–00ಗಳಿಗೆ ನಿಗಧಿಪಡಿಸಲಾಗಿದೆ ಎಂದು ತಿಳಿಸಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು, ಇವರು ಶ್ರೀ ಎಲ್.ಎಸ್. ಸುಳ್ಳದ್ ಮತ್ತು ಶ್ರೀ ಎಂ.ಆರ್. ಬನ್ನಿಹಟ್ಟಿ ಇವರುಗಳು ಮೇಲೆ (1)ರಲ್ಲಿ ಓದಲಾದ ದಿನಾಂಕ:24.07.1989ರ ಸರ್ಕಾರದ ಅಧಿಸೂಚನೆಯನ್ವಯ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕ ಹೊಂದಿರುತ್ತಾರೆ. ದಿನಾಂಕ:1.1.2007ರಲ್ಲಿದ್ದಂತೆ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು / ಸಹಾಯಕ ಅಭಿಯೋಗ ನಿರ್ದೇಶಕರ ಜೇಷ್ಠತಾ ಪಟ್ಟಿಯಲ್ಲಿ ಕ್ರಮವಾಗಿ ಕ್ರ.ಸಂ: 62 ಕ್ರ.ಸಂ: 77 ಆಗಿದ್ದು, ಶ್ರೀ ಎಂ.ಆರ್. ಬನ್ನಿಹಟ್ಟಿರವರು ಶ್ರೀ ಎಲ್.ಎಸ್. ಸುಳ್ಳದ್‌ರವರಿಗಿಂತ ಜೇಷ್ಠತೆಯಲ್ಲಿ ಕಿರಿಯವರಾಗಿರುತ್ತಾರೆ. ಶ್ರೀ ಎಂ.ಆರ್. ಬನ್ನಿಹಟ್ಟಿರವರಿಗೆ ಯಾವುದೇ ಬಡ್ತಿ ಇಲ್ಲದೆ ನಿರಂತರವಾಗಿ

ಒಂದೇ ಹುದ್ದೆಯಲ್ಲಿ 15 ವರ್ಷಗಳ ಸೇವೆ ಸಲ್ಲಿಸಿದ್ದರಿಂದ ಸ್ವಯಂಚಾಲಿತ ವಿಶೇಷ ವೇತನ ಶ್ರೇಣಿಗೆ ಬಡ್ತಿ ಸಿಕ್ಕಿದ್ದು, ಅನಂತರ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಮುಂಬಡ್ತಿ ದೊರೆತಿರುವುದರಿಂದ, ಹಿರಿಯ ಅಧಿಕಾರಿಯ ಮತ್ತು ಕಿರಿಯ ಅಧಿಕಾರಿಯ ವೇತನದ ನಡುವೆ ಒಂದು ಹಂತದ ವ್ಯತ್ಯಾಸ ಉಂಟಾಗಿರುತ್ತದೆ. ಕೆ.ಸಿ.ಎಸ್(ಪರಿಷ್ಕೃತ) ನಿಯಮಗಳು 2007ರ ನಿಯಮ 7(8)ರಲ್ಲಿ ಹಿರಿಯ ಸರ್ಕಾರಿ ಅಧಿಕಾರಿಯ ವೇತನವನ್ನು ಕಿರಿಯ ಸರ್ಕಾರಿ ನೌಕರರ ವೇತನಕ್ಕಿಂತ ಕಡಿಮೆ ಇದ್ದಲ್ಲಿ, ವೇತನವನ್ನು ಸಮಾನಗೊಳಿಸಲು ಅವಕಾಶವಿದೆ. ಆದ್ದರಿಂದ, ಜೇಷ್ಠತೆಯಲ್ಲಿ ಹಿರಿಯ ಅಧಿಕಾರಿಯಾದ ಶ್ರೀ ಎಲ್.ಎಸ್. ಸುಳ್ಳದ್‌ರವರ ವೇತನವನ್ನು ದಿನಾಂಕ: 30.07.2005ರಂದು ರೂ.17,700–00ಗಳಿಗೆ ಹೆಚ್ಚಿಸಿ ನಿಗಧಿಪಡಿಸಿ, ಕಿರಿಯ ಸರ್ಕಾರಿ ಅಧಿಕಾರಿಯಾದ ಶ್ರೀ ಎಂ.ಆರ್. ಬನ್ನಿಹಟ್ಟಿರವರ ವೇತನದೊಂದಿಗೆ ಸಮಾನಗೊಳಿಸಿ ಆದೇಶವನ್ನು ಹೊರಡಿಸಬೇಕೆಂದು ಸರ್ಕಾರವನ್ನು ಕೋರಿರುತ್ತಾರೆ.

ಆದುದರಿಂದ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 399 ಪಿಪಿಇ 2008, ಬೆಂಗಳೂರು, ದಿನಾಂಕ: 11ನೇ ಮಾರ್ಚ್ 2009**.

ಶ್ರೀ ಎಲ್.ಎಸ್. ಸುಳ್ಳದ್, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಆಯುಕ್ತರ ಕಛೇರಿ, ಹುಬ್ಬಳ್ಳಿ–ಧಾರವಾಡ, ಇವರ ವೇತನವನ್ನು ಜೇಷ್ಠತೆಯಲ್ಲಿ ಇವರಿಗಿಂತ ಕಿರಿಯರಾದ ಶ್ರೀ ಎಂ.ಆರ್. ಬನ್ನಿಹಟ್ಟಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಇವರ ವೇತನವಾದ ರೂ.17,700–00ಕ್ಕೆ ದಿನಾಂಕ:30.07.2005ರಿಂದ ಅನ್ವಯವಾಗುವಂತೆ ಸಮಾನಾಂತರಗೊಳಿದೆ. ದಿನಾಂಕ: 01.08.2005ಕ್ಕೆ ಇವರ ವೇತನವನ್ನು ರೂ.18,150–00ಗಳಿಗೆ ನಿಗಧಿಪಡಿಸಿದೆ.

ಸದರಿ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂ:ಒಸಾಇ 72105 ಆಂಆಸ 2008, ದಿನಾಂಕ:07.01.2009 ಹಾಗೂ ಸರ್ಕಾರಿ ಆದೇಶ ಸಂ: ಎಫ್‌ಡಿ 60 ಎಸ್‌ಆರ್‌ಪಿ 84, ದಿನಾಂಕ: 07.11.1984ರಲ್ಲಿ ಕಲ್ಪಿಸಿರುವ ಅವಕಾಶದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 865

**ಕೆ.ಸಿ.ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಇ.ಎಂ. ಬಣಕಾರ್, 2ನೇ ಅಧಿಕ ಸರ್ಕಾರಿ ಅಭಿಯೋಜಕರು(ಸ್ವಪ್ರ), ಧಾರವಾಡ, ಇವರ ವೇತನವನ್ನು ಜೇಷ್ಠತೆಯಲ್ಲಿ ಇವರಿಗಿಂತ ಕಿರಿಯವರಾದ ಶ್ರೀ ಎಂ.ಆರ್. ಬನ್ನಿಹಟ್ಟಿ ಇವರ ವೇತನಕ್ಕೆ ಸಮಾನಗೊಳಿಸುವ ಕುರಿತು.

**ಓದಲಾಗಿದೆ :** 1 ಸರ್ಕಾರದ ಅಧಿಸೂಚನೆ–II ಸಂ: ಲಾ 161 ಪಿಪಿಇ 86, ದಿನಾಂಕ: 24.07.1989.

2 ಸದರಿ ಅಧಿಕಾರಿಯವರ ಮನವಿ ದಿನಾಂಕ: 14.02.2008.

3 ಮಹಾಲೇಖಪಾಲರ ಕಛೇರಿಯ ಪತ್ರದ ಸಂ: ಜಿಇ13/ಜೆ4/08–09/314, ದಿನಾಂಕ: 16.06.2008.

4 ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/394/2007–08, ದಿನಾಂಕ: 08.09.2008.

**ಪ್ರಸ್ತಾವನೆ:**

ಶ್ರೀ ಇ.ಎಂ. ಬಣಕಾರ್, 2ನೇ ಅಧಿಕ ಸರ್ಕಾರಿ ಅಭಿಯೋಜಕರು(ಸ್ವಪ್ರ), ಧಾರವಾಡ, ಮತ್ತು ಶ್ರೀ ಎಂ.ಆರ್. ಬನ್ನಿಹಟ್ಟಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಬೆಂಗಳೂರು, ಇವರುಗಳು ಮೇಲೆ (1)ರಲ್ಲಿ ಓದಲಾದ ದಿನಾಂಕ:24.07.1989ರ ಸರ್ಕಾರದ ಅಧಿಸೂಚನೆಯನ್ವಯ ಕ್ರಮವಾಗಿ ಕ್ರ.ಸಂ:10 ಮತ್ತು ಕ್ರ.ಸಂ:38ರಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿರುತ್ತಾರೆ.

ಮೇಲೆ ಓದಲಾದ (2)ರ ಮನವಿ ಪತ್ರದಲ್ಲಿ ದಿನಾಂಕ: 30.07.2005ರಿಂದ ಸದರಿಯವರ ವೇತನವು ಜೇಷ್ಠತೆಯಲ್ಲಿ ಇವರಿಗಿಂತ ಕಿರಿಯವರಾಗಿರುವ ಶ್ರೀ ಎಂ.ಆರ್. ಬನ್ನಿಹಟ್ಟಿರವರ ವೇತನದ ನಡುವೆ ಒಂದು ಹಂತದ ವ್ಯತ್ಯಾಸ ಉಂಟಾಗಿರುತ್ತದೆ. ಆದ್ದರಿಂದ, ದಿನಾಂಕ: 30.07.2005ರಂದು ಶ್ರೀ ಇ.ಎಂ. ಬಣಕಾರ್‌ರವರು ಅವರ ವೇತನವನ್ನು ರೂ.17,700–00ಗಳಿಗೆ ನಿಗಧಿಗೊಳಿಸಿ, ವಾರ್ಷಿಕ ವೇತನ ಬಡ್ತಿಯ ದಿನಾಂಕವಾದ 01.08.2005ಕ್ಕೆ ರೂ.18,150–00ಗಳಿಗೆ ವೇತನವನ್ನು ನಿಗಧಿ ಪಡಿಸಬೇಕೆಂದು ಕೋರಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಮಹಾಲೇಖಪಾಲರ ದಿನಾಂಕ:16.06.2008ರ ಪತ್ರದಲ್ಲಿ ದಿನಾಂಕ: 30.07.2005ರಂದು ಕಿರಿಯ ಅಧಿಕಾರಿಯಾದ ಶ್ರೀ ಎಂ.ಆರ್. ಬನ್ನಿಹಟ್ಟಿರವರಿಗೆ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಮುಂಬಡ್ತಿ ದೊರೆತ್ತಿದ್ದರಿಂದ ಅವರ ವೇತನವನ್ನು ರೂ.17,700–00ಗಳಿಗೆ ನಿಗದಿಪಡಿಸಲಾಗಿದೆ. ದಿನಾಂಕ:01.08.2005ರಂದು ಶ್ರೀ ಇ.ಎಂ. ಬಣಕಾರ್ ಮತ್ತು ಶ್ರೀ ಎಂ.ಆರ್. ಬನ್ನಿಹಟ್ಟಿರವರಿಗೆ ವಾರ್ಷಿಕ ವೇತನ ಬಡ್ತಿಯನ್ನು ನೀಡುವ ಮೂಲಕ ಇವರುಗಳ ವೇತನವನ್ನು ಕ್ರಮವಾಗಿ ರೂ.17,700–00ಗಳಿಗೆ ಮತ್ತು ರೂ.18,150–00ಗಳಿಗೆ ನಿಗಧಿಪಡಿಸಲಾಗಿದೆ ಎಂದು ತಿಳಿಸಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು, ಇವರು ಶ್ರೀ ಇ.ಎಂ. ಬಣಕಾರ್ ಮತ್ತು ಶ್ರೀ ಎಂ.ಆರ್. ಬನ್ನಿಹಟ್ಟಿ ಇವರುಗಳು ಮೇಲೆ (1)ರಲ್ಲಿ ಓದಲಾದ ದಿನಾಂಕ:24.07.1989ರ ಸರ್ಕಾರದ ಅಧಿಸೂಚನೆಯನ್ವಯ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿರುತ್ತಾರೆ. ದಿನಾಂಕ:1.1.2007ರಲ್ಲಿದ್ದಂತೆ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು/ ಸಹಾಯಕ ಅಭಿಯೋಗ ನಿರ್ದೇಶಕರ ಜೇಷ್ಠತಾ ಪಟ್ಟಿಯಲ್ಲಿ ಕ್ರಮವಾಗಿ ಕ್ರ.ಸಂ: 51 ಕ್ರ.ಸಂ: 77 ಆಗಿದ್ದು, ಶ್ರೀ ಎಂ.ಆರ್. ಬನ್ನಿಹಟ್ಟಿರವರು ಶ್ರೀ ಇ.ಎಂ. ಬಣಕಾರ್‌ರವರಿಗಿಂತ ಜೇಷ್ಠತೆಯಲ್ಲಿ ಕಿರಿಯವರಾಗಿರುತ್ತಾರೆ. ಶ್ರೀ ಎಂ.ಆರ್. ಬನ್ನಿಹಟ್ಟಿರವರಿಗೆ ಯಾವುದೇ ಬಡ್ತಿ ಇಲ್ಲದೆ 15 ವರ್ಷಗಳ ನಿರಂತರ ಸೇವೆಯನ್ನು ಒಂದೇ ಹುದ್ದೆಯಲ್ಲಿ ಸಲ್ಲಿಸಿದ್ದರಿಂದ ಸ್ವಯಂಚಾಲಿತ ವಿಶೇಷ ವೇತನ ಶ್ರೇಣಿಗೆ ಬಡ್ತಿ ಸಿಕ್ಕಿದ್ದು, ಅನಂತರ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಮುಂಬಡ್ತಿ ದೊರೆತಿರುವುದರಿಂದ, ಹಿರಿಯ ಅಧಿಕಾರಿಯ ಮತ್ತು ಕಿರಿಯ ಅಧಿಕಾರಿಯ ವೇತನದ ನಡುವೆ ಒಂದು ಹಂತದ ವ್ಯತ್ಯಾಸ ಉಂಟಾಗಿರುತ್ತದೆ. ಕೆ.ಸಿ.ಎಸ್(ಪರಿಷ್ಕೃತ) ನಿಯಮಗಳು 2007ರ ನಿಯಮ 7(8)ರಲ್ಲಿ ಹಿರಿಯ ಸರ್ಕಾರಿ ಅಧಿಕಾರಿಯ ವೇತನವನ್ನು ಕಿರಿಯ ಸರ್ಕಾರಿ ನೌಕರರ ವೇತನಕ್ಕಿಂತ ಕಡಿಮೆ ಇದ್ದಲ್ಲಿ, ವೇತನವನ್ನು ಸಮಾನಗೊಳಿಸಲು ಅವಕಾಶವಿದೆ. ಆದ್ದರಿಂದ, ಜೇಷ್ಠತೆಯಲ್ಲಿ ಹಿರಿಯ ಅಧಿಕಾರಿಯಾದ ಶ್ರೀ ಇ.ಎಂ. ಬಣಕಾರ್‌ರವರ ವೇತನವನ್ನು ದಿನಾಂಕ: 30.07.2005ರಂದು ರೂ.17,700–00ಗಳಿಗೆ ಹೆಚ್ಚಿಸಿ ನಿಗಧಿಪಡಿಸಿ, ಕಿರಿಯ ಸರ್ಕಾರಿ ಅಧಿಕಾರಿಯಾದ ಶ್ರೀ ಎಂ.ಆರ್. ಬನ್ನಿಹಟ್ಟಿರವರ ವೇತನದೊಂದಿಗೆ ಸಮಾನಗೊಳಿಸಿ ಆದೇಶವನ್ನು ಹೊರಡಿಸಬೇಕೆಂದು ಸರ್ಕಾರವನ್ನು ಕೋರಿರುತ್ತಾರೆ.

ಆದುದರಿಂದ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 400 ಪಿಪಿಇ 2008, ಬೆಂಗಳೂರು, ದಿನಾಂಕ: 11ನೇ ಮಾರ್ಚ್ 2009**.

ಶ್ರೀ ಇ.ಎಂ. ಬಣಕಾರ್, 2ನೇ ಅಧಿಕ ಸರ್ಕಾರಿ ಅಭಿಯೋಜಕರು(ಸ್ವಪ್ರ), 2ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಧಾರವಾಡ, ಇವರ ವೇತನವನ್ನು ಜೇಷ್ಠತೆಯಲ್ಲಿ ಇವರಿಗಿಂತ ಕಿರಿಯರಾದ ಶ್ರೀ ಎಂ.ಆರ್. ಬನ್ನಿಹಟ್ಟಿ, ಇವರ

ವೇತನ ರೂ.18,150–00ಕ್ಕೆ ದಿನಾಂಕ:01.08.2005ರಿಂದ ಸರ್ಕಾರಿ ಆದೇಶ ಸಂ: ಎಫ್‌ಡಿ 60 ಎಸ್‌ಆರ್‌ಎಸ್ 84, ದಿನಾಂಕ:07.11.1984 ಹಾಗೂ ಎಫ್‌ಡಿ 2 ಎಸ್‌ಆರ್‌ಎಸ್ 99, ದಿನಾಂಕ:28.01.99ರ ಅನ್ವಯ ಸಮಾನಾಂತರಗೊಳಿಸಿದೆ.

ಸದರಿ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂ:ಒಸಾಇ 64777 ಆಂಆಸ 2008, ದಿನಾಂಕ:17.12.2008ರನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 866

**ಕೆ.ಸಿ.ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎ.ಎ. ಪಾರಶೆಟ್ಟಿ, ಅಭಿಯೋಗ ಉಪನಿರ್ದೇಶಕರು, ಮೈಸೂರು, ಇವರ ವೇತನವನ್ನು ಇವರಿಗಿಂತ ಜೇಷ್ಠತೆಯಲ್ಲಿ ಕಿರಿಯರಾದ ಶ್ರೀ ಎಂ.ಆರ್. ಬನ್ನಿಹಟ್ಟಿ ಇವರ ವೇತನಕ್ಕೆ ಸಮಾನಗೊಳಿಸುವ ಕುರಿತು.

**ಓದಲಾಗಿದೆ :** 1 ಸರ್ಕಾರದ ಅಧಿಸೂಚನೆ–II ಸಂ: ಲಾ 161 ಪಿಪಿಇ 86, ದಿನಾಂಕ: 24.07.1989.

2 ಸದರಿ ಅಧಿಕಾರಿಯವರ ಮನವಿ ದಿನಾಂಕ: 11/17.01.2008.

3 ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/360/2007–08, ದಿನಾಂಕ: 08.09.2008.

**ಪ್ರಸ್ತಾವನೆ:**

ಶ್ರೀ ಎ.ಎ. ಪಾರಶೆಟ್ಟಿ, ಅಭಿಯೋಗ ಉಪನಿರ್ದೇಶಕರು, ಮೈಸೂರು ಮತ್ತು ಶ್ರೀ ಎಂ.ಆರ್. ಬನ್ನಿಹಟ್ಟಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಬೆಂಗಳೂರು, ಇವರುಗಳು ಮೇಲೆ (1)ರಲ್ಲಿ ಓದಲಾದ ದಿನಾಂಕ:24.07.1989ರ ಸರ್ಕಾರದ ಅಧಿಸೂಚನೆಯನ್ವಯ ಕ್ರಮವಾಗಿ ಕ್ರ.ಸಂ:11 ಮತ್ತು ಕ್ರ.ಸಂ:38ರಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿರುತ್ತಾರೆ.

ಮೇಲೆ ಓದಲಾದ (2)ರ ಮನವಿ ಪತ್ರದಲ್ಲಿ ದಿನಾಂಕ: 30.07.2005ರಿಂದ ಸದರಿಯವರ ವೇತನ ಹಾಗೂ ಇವರಿಗಿಂತ ಜೇಷ್ಠತೆಯಲ್ಲಿ ಕಿರಿಯವರಾಗಿರುವ ಶ್ರೀ ಎಂ.ಆರ್. ಬನ್ನಿಹಟ್ಟಿರವರ ವೇತನದ ನಡುವೆ ಒಂದು ಹಂತದ ವ್ಯತ್ಯಾಸ ಉಂಟಾಗಿರುತ್ತದೆ. ಆದ್ದರಿಂದ, ಶ್ರೀ ಎ.ಎ. ಪಾರಶೆಟ್ಟಿರವರು ಅವರ ವೇತನವನ್ನು ದಿನಾಂಕ: 30.07.2005ಕ್ಕೆ ರೂ.17,700–00 ಗಳಿಗೆ ನಿಗಧಿಗೊಳಿಸಿ, ವಾರ್ಷಿಕ ವೇತನ ಬಡ್ತಿಯ ದಿನಾಂಕವಾದ 01.08.2005ಕ್ಕೆ ರೂ.18,150–00ಗಳಿಗೆ ವೇತನವನ್ನು ನಿಗಧಿಪಡಿಸಬೇಕೆಂದು ಕೋರಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು, ಇವರು ಶ್ರೀ ಎ.ಎ. ಪಾರಶೆಟ್ಟಿ ಮತ್ತು ಶ್ರೀ ಎಂ.ಆರ್. ಬನ್ನಿಹಟ್ಟಿ ಇವರುಗಳು ಮೇಲೆ (1)ರಲ್ಲಿ ಓದಲಾದ ದಿನಾಂಕ:24.07.1989ರ ಸರ್ಕಾರದ ಅಧಿಸೂಚನೆಯನ್ವಯ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿರುತ್ತಾರೆ. ದಿನಾಂಕ:1.1.2007ರಲ್ಲಿದ್ದಂತೆ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು/ ಸಹಾಯಕ ಅಭಿಯೋಗ ನಿರ್ದೇಶಕರ ಜೇಷ್ಠತಾ ಪಟ್ಟಿಯಲ್ಲಿ ಕ್ರಮವಾಗಿ ಕ್ರ.ಸಂ:54 ಮತ್ತು ಕ್ರ.ಸಂ: 77 ಆಗಿದ್ದು, ಶ್ರೀ ಎಂ.ಆರ್. ಬನ್ನಿಹಟ್ಟಿರವರು ಶ್ರೀ ಎ.ಎ. ಪಾರಶೆಟ್ಟಿರವರಿಗಿಂತ ಜೇಷ್ಠತೆಯಲ್ಲಿ ಕಿರಿಯವರಾಗಿರುತ್ತಾರೆ. ಶ್ರೀ ಎಂ.ಆರ್. ಬನ್ನಿಹಟ್ಟಿರವರಿಗೆ ಯಾವುದೇ ಬಡ್ತಿ ಇಲ್ಲದೆ ನಿರಂತರವಾಗಿ ಒಂದೇ ಹುದ್ದೆಯಲ್ಲಿ 15 ವರ್ಷಗಳ ಸೇವೆಯನ್ನು ಸಲ್ಲಿಸಿದ್ದರಿಂದ ಸ್ವಯಂಚಾಲಿತ ವಿಶೇಷ ವೇತನ ಶ್ರೇಣಿಗೆ ಬಡ್ತಿ ಸಿಕ್ಕಿದ್ದು, ಅನಂತರ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಮುಂಬಡ್ತಿ ದೊರೆತಿರುವುದರಿಂದ, ಹಿರಿಯ ಅಧಿಕಾರಿಯ ಮತ್ತು ಕಿರಿಯ ಅಧಿಕಾರಿಯ ವೇತನದ ನಡುವೆ ಒಂದು ಹಂತದ ವ್ಯತ್ಯಾಸ ಉಂಟಾಗಿರುತ್ತದೆ. ಕೆ.ಸಿ.ಎಸ್(ಪರಿಷ್ಕೃತ) ನಿಯಮಗಳು 2007ರ ನಿಯಮ 7(8)ರಲ್ಲಿ ಹಿರಿಯ ಸರ್ಕಾರಿ ಅಧಿಕಾರಿಯ ವೇತನವನ್ನು ಕಿರಿಯ ಸರ್ಕಾರಿ ನೌಕರರ ವೇತನಕ್ಕಿಂತ ಕಡಿಮೆ ಇದ್ದಲ್ಲಿ,

ವೇತನವನ್ನು ಸಮಾನಗೊಳಿಸಲು ಅವಕಾಶವಿದೆ. ಆದ್ದರಿಂದ, ಹಿರಿಯ ಅಧಿಕಾರಿಯಾದ ಶ್ರೀ ಎ.ಎ. ಪಾರಶೆಟ್ಟಿರವರ ವೇತನವನ್ನು ದಿನಾಂಕ: 30.07.2005ರಂದು ರೂ.17,700–00ಗಳಿಗೆ ಹೆಚ್ಚಿಸಿ ನಿಗಧಿಪಡಿಸಿ, ಕಿರಿಯ ಸರ್ಕಾರಿ ನೌಕರರಾದ ಶ್ರೀ ಎಂ.ಆರ್. ಬನ್ನಿಹಟ್ಟಿರವರ ವೇತನದೊಂದಿಗೆ ಸಮಾನಗೊಳಿಸಿ ಆದೇಶವನ್ನು ಹೊರಡಿಸಬೇಕೆಂದು ಸರ್ಕಾರವನ್ನು ಕೋರಿರುತ್ತಾರೆ.

ಆದುದರಿಂದ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 405 ಪಿಪಿಇ 2008, ಬೆಂಗಳೂರು, ದಿನಾಂಕ: 11ನೇ ಮಾರ್ಚ್ 2009.**

ಶ್ರೀ ಎ.ಎ. ಪಾರಶೆಟ್ಟಿ, ಅಭಿಯೋಗ ಉಪನಿರ್ದೇಶಕರು, ಮೈಸೂರು, ಇವರ ವೇತನವನ್ನು ದಿನಾಂಕ:30.07.2005ರಿಂದ ಅಂದರೆ, ಜೇಷ್ಠತೆಯಲ್ಲಿ ಇವರಿಗಿಂತ ಕಿರಿಯ ಸರ್ಕಾರಿ ಅಧಿಕಾರಿಯಾದ ಶ್ರೀ ಎಂ.ಆರ್. ಬನ್ನಿಹಟ್ಟಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಇವರಿಗೆ ಬಡ್ತಿ ನೀಡಿದ ದಿನಾಂಕದಿಂದ ರೂ.17,700–00ಗಳಿಗೆ ಹೆಚ್ಚಿಸಿ ಸಮಾನಗೊಳಿಸಿದೆ. ದಿನಾಂಕ:01.08.2005ಕ್ಕೆ ಇವರ ವೇತನವನ್ನು ರೂ.18,150–00ಗಳಿಗೆ ನಿಗಧಿಪಡಿಸಿದೆ.

ಸದರಿ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂ:ಒಸಾಇ 72102 ಆಂಆಸ 2008, ದಿನಾಂಕ:09.01.2009ರ ಅಭಿಪ್ರಾಯದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 867

**ಕೆ.ಸಿ.ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎಸ್.ಆರ್. ದೇಸಾಯಿ, ಸರ್ಕಾರಿ ಅಭಿಯೋಜಕರು, ವಿಶೇಷ ನ್ಯಾಯಾಲಯ(ಎಸ್.ಸಿ/ಎಸ್.ಟಿ), ಬಿಜಾಪುರ ಇವರ ವೇತನವನ್ನು ಇವರಿಗಿಂತ ಕಿರಿಯ ಸರ್ಕಾರಿ ಅಧಿಕಾರಿಯಾದ ಶ್ರೀ ಎಂ.ಆರ್. ಬನ್ನಿಹಟ್ಟಿ ಇವರ ವೇತನಕ್ಕೆ ಸಮಾನಗೊಳಿಸುವ ಕುರಿತು.

**ಓದಲಾಗಿದೆ :**
1 ಸರ್ಕಾರದ ಅಧಿಸೂಚನೆ–II ಸಂ: ಲಾ 161 ಪಿಪಿಇ 86, ದಿನಾಂಕ: 24.07.1989.
2 ಸದರಿ ಅಧಿಕಾರಿಯವರ ಮನವಿ ದಿನಾಂಕ:.22.02.2008.
3 ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/422/2007–08, ದಿನಾಂಕ: 08.09.2008.

**ಪ್ರಸ್ತಾವನೆ:**

ಶ್ರೀ ಎಸ್.ಆರ್. ದೇಸಾಯಿ, ಸರ್ಕಾರಿ ಅಭಿಯೋಜಕರು, ವಿಶೇಷ ನ್ಯಾಯಾಲಯ, (ಎಸ್.ಸಿ/ಎಸ್.ಟಿ), ಬಿಜಾಪುರ ಮತ್ತು ಶ್ರೀ ಎಂ.ಆರ್. ಬನ್ನಿಹಟ್ಟಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಬೆಂಗಳೂರು, ಇವರುಗಳು ಮೇಲೆ (1)ರಲ್ಲಿ ಓದಲಾದ ದಿನಾಂಕ:24.07.1989ರ ಸರ್ಕಾರದ ಅಧಿಸೂಚನೆಯನ್ವಯ ಕ್ರಮವಾಗಿ ಕ್ರ.ಸಂ:17 ಮತ್ತು ಕ್ರ.ಸಂ:38ರಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿರುತ್ತಾರೆ

ಮೇಲೆ ಓದಲಾದ (2)ರ ಮನವಿ ಪತ್ರದಲ್ಲಿ ದಿನಾಂಕ: 30.07.2005ರಿಂದ ಸದರಿಯವರ ವೇತನ ಮತ್ತು ಜೇಷ್ಠತೆಯಲ್ಲಿ ಇವರಿಗಿಂತ ಕಿರಿಯವರಾಗಿರುವ ಶ್ರೀ ಎಂ.ಆರ್. ಬನ್ನಿಹಟ್ಟಿರವರ ವೇತನದ ನಡುವೆ ಒಂದು ಹಂತದ ವ್ಯತ್ಯಾಸ ಉಂಟಾಗಿರುತ್ತದೆ. ಆದ್ದರಿಂದ, ಶ್ರೀ ಎಸ್.ಆರ್. ದೇಸಾಯಿರವರು ಅವರ ವೇತನವನ್ನು ದಿನಾಂಕ: 30.07.2005ಕ್ಕೆ ರೂ.17,700–00ಗಳಿಗೆ ನಿಗಧಿಗೊಳಿಸಿ, ವಾರ್ಷಿಕ ವೇತನ ಬಡ್ತಿಯ ದಿನಾಂಕವಾದ 01.08.2005ಕ್ಕೆ ರೂ.18,150–00ಗಳಿಗೆ ನಿಗಧಿಪಡಿಸಬೇಕೆಂದು ಕೋರಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು, ಇವರು ಶ್ರೀ ಎಸ್.ಆರ್. ದೇಸಾಯಿ ಮತ್ತು ಶ್ರೀ ಎಂ.ಆರ್. ಬನ್ನಿಹಟ್ಟಿ ಇವರುಗಳು ಮೇಲೆ (1)ರಲ್ಲಿ ಓದಲಾದ ದಿನಾಂಕ:24.07.1989ರ ಸರ್ಕಾರದ ಅಧಿಸೂಚನೆಯನ್ವಯ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿರುತ್ತಾರೆ. ದಿನಾಂಕ:1.1.1995ರಲ್ಲಿದ್ದಂತೆ ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರ ಜೇಷ್ಠತಾ ಪಟ್ಟಿಯಲ್ಲಿ ಕ್ರಮವಾಗಿ ಕ್ರ.ಸಂ:35 ಕ್ರ.ಸಂ:49 ಆಗಿದ್ದು, ಶ್ರೀ ಎಂ.ಆರ್. ಬನ್ನಿಹಟ್ಟಿರವರು ಶ್ರೀ ಎಸ್.ಆರ್. ದೇಸಾಯಿಯವರಿಗಿಂತ ಜೇಷ್ಠತೆಯಲ್ಲಿ ಕಿರಿಯವರಾಗಿರುತ್ತಾರೆ. ಶ್ರೀ ಎಂ.ಆರ್. ಬನ್ನಿಹಟ್ಟಿರವರಿಗೆ ಯಾವುದೇ ಬಡ್ತಿ ಇಲ್ಲದೆ ನಿರಂತರವಾಗಿ ಒಂದೇ ಹುದ್ದೆಯಲ್ಲಿ 15 ವರ್ಷಗಳ ಸೇವೆ ಸಲ್ಲಿಸಿದ್ದರಿಂದ ಸ್ವಯಂಚಾಲಿತ ವಿಶೇಷ ವೇತನ ಶ್ರೇಣಿಗೆ ಬಡ್ತಿ ಸಿಕ್ಕಿದ್ದು, ಅನಂತರ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಮುಂಬಡ್ತಿ ದೊರೆತಿರುವುದರಿಂದ, ಹಿರಿಯ ಅಧಿಕಾರಿಯ ಮತ್ತು ಕಿರಿಯ ಅಧಿಕಾರಿಯ ವೇತನದ ನಡುವೆ ಒಂದು ಹಂತದ ವ್ಯತ್ಯಾಸ ಉಂಟಾಗಿರುತ್ತದೆ. ಕೆ.ಸಿ.ಎಸ್(ಪರಿಷ್ಕೃತ) ನಿಯಮಗಳು 2007ರ ನಿಯಮ 7(8)ರಲ್ಲಿ ಹಿರಿಯ ಸರ್ಕಾರಿ ಅಧಿಕಾರಿಯ ವೇತನವನ್ನು ಕಿರಿಯ ಸರ್ಕಾರಿ ನೌಕರರ ವೇತನಕ್ಕಿಂತ ಕಡಿಮೆ ಇದ್ದಲ್ಲಿ ವೇತನವನ್ನು ಸಮಾನಗೊಳಿಸಲು ಅವಕಾಶವಿದೆ. ಆದ್ದರಿಂದ, ಜೇಷ್ಠತೆಯಲ್ಲಿ ಹಿರಿಯ ಅಧಿಕಾರಿಯಾದ ಶ್ರೀ ಎಸ್.ಆರ್. ದೇಸಾಯಿಯವರ ವೇತನವನ್ನು ದಿನಾಂಕ: 30.07.2005ರಂದು

ರೂ.17,700–00ಗಳಿಗೆ ಹೆಚ್ಚಿಸಿ ನಿಗಧಿಪಡಿಸಿ, ಕಿರಿಯ ಸರ್ಕಾರಿ ನೌಕರರಾದ ಶ್ರೀ ಎಂ.ಆರ್. ಬನ್ನಿಹಟ್ಟಿರವರ ವೇತನದೊಂದಿಗೆ ಸಮಾನಗೊಳಿಸಿ ಆದೇಶವನ್ನು ಹೊರಡಿಸಲು ಸರ್ಕಾರವನ್ನು ಕೋರಿರುತ್ತಾರೆ.

ಆದುದರಿಂದ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 401 ಪಿಪಿಇ 2008, ಬೆಂಗಳೂರು, ದಿನಾಂಕ: 11ನೇ ಮಾರ್ಚ್ 2009**.

ಶ್ರೀ ಎಸ್.ಆರ್. ದೇಸಾಯಿ, ಸರ್ಕಾರಿ ಅಭಿಯೋಜಕರು, ವಿಶೇಷ ನ್ಯಾಯಾಲಯ, (ಪ.ಜಾ/ಪ.ಪಂ), ಬಿಜಾಪುರ, ಇವರ ವೇತನವನ್ನು ಜೇಷ್ಠತೆಯಲ್ಲಿ ಇವರಿಗಿಂತ ಕಿರಿಯರಾದ ಶ್ರೀ ಎಂ.ಆರ್. ಬನ್ನಿಹಟ್ಟಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಇವರ ವೇತನ ರೂ.17,700–00ಕ್ಕೆ ದಿನಾಂಕ:30.07.2005ರಿಂದ ಅನ್ವಯವಾಗುವಂತೆ ಸಮಾನಾಂತರಗೊಳಿಸಿದೆ. ದಿನಾಂಕ:01.08.2005ಕ್ಕೆ ಇವರ ವೇತನವನ್ನು ರೂ.18,150–00ಗಳಿಗೆ ನಿಗಧಿಪಡಿಸಿದೆ.

ಸದರಿ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂ:ಒಸಾಇ 72103 ಆಂಆಸ 2008, ದಿನಾಂಕ:09.01.2009ರ ಅಭಿಪ್ರಾಯದೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 868

**ಕೆ.ಸಿ.ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಸಿ.ಎ.ರವೀಂದ್ರ, ಸಹಾಯಕ ಅಭಿಯೋಗ ನಿರ್ದೇಶಕರು, ಪೊಲೀಸ್ ಆಯುಕ್ತರ ಕಛೇರಿ, ಬೆಂಗಳೂರು ನಗರ ಇವರಿಗೆ ಸ್ವಯಂಚಾಲಿತ ವಿಶೇಷ ಹಿರಿಯ ವೇತನ ಶ್ರೇಣಿ ಮಂಜೂರು ಮಾಡುವ ಕುರಿತು.

**ಓದಲಾಗಿದೆ :**
1 ಸರ್ಕಾರದ ಅಧಿಸೂಚನೆ–II ಸಂ: ಲಾ 161 ಪಿಪಿಇ 86, ದಿನಾಂಕ: 24.07.1989.
2 ಸರ್ಕಾರದ ಆದೇಶ ನಂ. ಲಾ 47 ಪಿಪಿಇ 96, ದಿನಾಂಕ 24.04.1996.
3 ಸರ್ಕಾರದ ಆದೇಶ ನಂ. ಒಇ 133 ಪಿಪಿಇ 2006, ದಿನಾಂಕ 21.05.2007.
4 ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಸಿಶಾ–1/113/2004–05, ದಿನಾಂಕ: 17.3.2008

**ಪ್ರಸ್ತಾವನೆ:–**

ಶ್ರೀ ಸಿ.ಎ.ರವೀಂದ್ರ, ಸಹಾಯಕ ಅಭಿಯೋಗ ನಿರ್ದೇಶಕರು, ಪೊಲೀಸ್ ಆಯುಕ್ತರ ಕಛೇರಿ, ಬೆಂಗಳೂರು ನಗರ ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ 24.07.1989ರ ಕ್ರ.ಸಂ.50ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ ದಿನಾಂಕ 04.08.1989ರಂದು ಪೂರ್ವಾಹ್ನ ಸಹಾಯಕ ಸರ್ಕಾರಿ ಅಭಿಯೋಜಕರು, ಎಂ ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಶಿರ್ಸಿ ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುವುದಕ್ಕೆ ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ತೃಪ್ತಿಕರವೆಂದು ಘೋಷಣೆ ಮಾಡಲಾಗಿರುತ್ತದೆ.

ಸದರಿ ಅಧಿಕಾರಿಯವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ಯಾವುದೇ ಬಡ್ತಿ ಇಲ್ಲದೆ 10 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿದ್ದಕ್ಕಾಗಿ ಮೇಲೆ ಓದಲಾದ (3)ರ ಸರ್ಕಾರದ ಆದೇಶದಲ್ಲಿ ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡಲಾಗಿದೆ.

ಸದರಿ ಅಧಿಕಾರಿಯವರು ದಿನಾಂಕ 03.08.2004ರವರೆಗೆ ನೇಮಕಾತಿ ಹೊಂದಿದ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ಯಾವುದೇ ಬಡ್ತಿ ಇಲ್ಲದೆ 15 ವರ್ಷಗಳನ್ನು ತೃಪ್ತಿಕರವಾಗಿ ನಿರ್ವಹಿಸಿರುತ್ತಾರೆ. ಸದರಿಯವರು ಹುದ್ದೆಗೆ ನಿಗಧಿಪಡಿಸಲಾದ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿರುತ್ತಾರೆ. ಸದರಿ ಅವಧಿಯಲ್ಲಿ ಯಾವುದೇ ಅಸಾಧಾರಣ ರಜೆ/ವೇತನ ರಹಿತ ರಜೆ ಪಡೆದಿರುವುದಿಲ್ಲ. ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲ/ಹೂಡಲು ಉದ್ದೇಶಿಸಿರುವುದಿಲ್ಲ, ಸ್ವಯಂಚಾಲಿತ ವಿಶೇಷ ಹಿರಿಯ ವೇತನ ಶ್ರೇಣಿ ಮಂಜೂರು ಮಾಡುವ ದಿನಾಂಕಕ್ಕೆ ನಿಕಟಪೂರ್ವ 5 ವರ್ಷಗಳ ಕಾರ್ಯನಿರ್ವಹಣಾ ವರದಿಯಲ್ಲಿ ಪ್ರತಿಕೂಲ ಷರಾ ಇರುವುದಿಲ್ಲ. 15 ವರ್ಷಗಳ ಅವಧಿಯಲ್ಲಿ ಹಿರಿಯ ಸಹಾಯಕ

ಸರ್ಕಾರಿ ಅಭಿಯೋಜಕರು ಹುದ್ದೆಗೆ ಬಡ್ತಿ ನೀಡಿರುವುದು, ಬಡ್ತಿಯನ್ನು ಇವರು ನಿರಾಕರಿಸಿರುವುದು ಸೇವಾ ದಾಖಲೆಯಿಂದ ಕಂಡುಬರುವುದಿಲ್ಲ. ಸರ್ಕಾರದ ಆದೇಶ ನಂ. ಎಫ್‌ಡಿ 25 ಎಸ್‌ಆರ್‌ಪಿ 91, ದಿನಾಂಕ 29.10.91ರ ಅನುಸಾರ ರೂ. 6300–11940ರ 12ನೇ ವೇತನ ಶ್ರೇಣಿಯಲ್ಲಿ ಹುದ್ದೆಗಳನ್ನು ಹೊಂದಿರುವ ಸರ್ಕಾರಿ ನೌಕರರಿಗೂ ಸಹ ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ವೇತನ ಮುಂಬಡ್ತಿ) ನಿಯಮಗಳು 1991ರ ಉಪಬಂಧಗಳ ಅನ್ವಯ ಒಂದೇ ಹುದ್ದೆಯಲ್ಲಿ 15 ವರ್ಷಗಳ ಸೇವೆಯನ್ನು ಪೂರೈಸಿರುವ ಸರ್ಕಾರಿ ನೌಕರರಿಗೆ ಹಿರಿಯ ವೇತನ ಶ್ರೇಣಿಯನ್ನು ಮಂಜೂರು ಮಾಡಲು ಅವಕಾಶವಿದೆ.

ಆದಕಾರಣ ಶ್ರೀ ಸಿ.ಎ. ರವೀಂದ್ರ ಇವರಿಗೆ ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ವೇತನ ಮುಂಬಡ್ತಿ) ನಿಯಮಗಳು, 1991ರ ಅನ್ವಯ ರೂ.6300–150–7200–200–8800–260–10880–320–11840ರ ವೇತನ ಶ್ರೇಣಿ ಹೊಂದಿರುವ ಇವರಿಗೆ ಹಿರಿಯ ವೇತನ ಶ್ರೇಣಿ ರೂ.7400–200–8800–260–10880–320–13120ರಲ್ಲಿ ದಿನಾಂಕ 04.08.2004ರಿಂದ ಜಾರಿಗೆ ಬರುವಂತೆ ವೇತನ ಬಡ್ತಿ ನೀಡಿ, ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 42(ಬಿ) ಅನ್ವಯ ವೇತನ ನಿಗಧಿಪಡಿಸುವಂತೆ ಮೇಲೆ ಓದಲಾದ (4)ರಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ಕೋರಿರುತ್ತಾರೆ. ಈ ಬಗ್ಗೆ ದಿನಾಂಕ 10.02.2009ರಂದು ನಡೆದ ಇಲಾಖಾ ಮುಂಬಡ್ತಿ ಸಮಿತಿ ಸಭೆಯಲ್ಲಿ ಪರಿಗಣಿಸಲಾಗಿದ್ದು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 164 ಪಿಪಿಇ 2008, ಬೆಂಗಳೂರು,ದಿನಾಂಕ: 19ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಶ್ರೀ ಸಿ.ಎ.ರವೀಂದ್ರ, ಸಹಾಯಕ ಅಭಿಯೋಗ ನಿರ್ದೇಶಕರು, ಪೊಲೀಸ್ ಆಯುಕ್ತರ ಕಛೇರಿ, ಬೆಂಗಳೂರು ನಗರ ಇವರಿಗೆ ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ವೇತನ ಮುಂಬಡ್ತಿ) ನಿಯಮಗಳು, 1991ರ ಅನ್ವಯ ರೂ.6300–150–7200–200–8800–320–11840ರ ವೇತನ ಶ್ರೇಣಿಯನ್ನು ಹೊಂದಿರುವ ಸದರಿ ಅಧಿಕಾರಿಯವರಿಗೆ ಹಿರಿಯ ವೇತನ ಶ್ರೇಣಿ ರೂ.7400–200–8800–260–10880–320–13120ರಲ್ಲಿ ವೇತನ ಬಡ್ತಿ ನೀಡಿ, ದಿನಾಂಕ 04.08.2004ರಿಂದ ಅನ್ವಯವಾಗುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 42(ಬಿ) ಅನ್ವಯ ವೇತನ ನಿಗಧಿಪಡಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 935

**ಕೆ.ಸಿ.ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎಂ.ಎಸ್. ಈನೋಸ್, ನಿವೃತ್ತ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಇವರಿಗೆ ಸ್ವಯಂಚಾಲಿತ ವಿಶೇಷ ಹಿರಿಯ ವೇತನ ಶ್ರೇಣಿ ಮಂಜೂರು ಮಾಡುವ ಕುರಿತು.

**ಓದಲಾಗಿದೆ :**
1 ಸರ್ಕಾರದ ಅಧಿಸೂಚನೆ–II ನಂ. ಲಾ 161 ಪಿಪಿಇ 86, ದಿನಾಂಕ 24.07.1989.
2 ಸರ್ಕಾರದ ಆದೇಶ ನಂ. ಲಾ 187 ಪಿಪಿಇ 91, ದಿನಾಂಕ 18.01.1992.
3 ಸರ್ಕಾರದ ಆದೇಶ ನಂ. ಲಾ 55 ಪಿಪಿಇ 2002, ದಿನಾಂಕ 19.10.2002.
4 ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ ಸಿಶಾ–1 /176 / 2006–07, ದಿನಾಂಕ 08.01.2008.

**ಪ್ರಸ್ತಾವನೆ:**

ಶ್ರೀ ಎಂ.ಎಸ್. ಈನೋಸ್, ನಿವೃತ್ತ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ 24.07.1989ರ ಕ್ರ.ಸಂ.36ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ ದಿನಾಂಕ 04.08.1989ರಂದು ಪೂರ್ವಾಹ್ನ ಸಹಾಯಕ ಸರ್ಕಾರಿ ಅಭಿಯೋಜಕರು, ಎಂ ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಅರಕಲಗೂಡು ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುವುದಕ್ಕೆ ಮೇಲೆ ಓದಲಾದ (2)ರ ಸರ್ಕಾರದ ಆದೇಶದ ಕ್ರ.ಸಂ. 11ರಲ್ಲಿ ತೃಪ್ತಿಕರವೆಂದು ಘೋಷಣೆ ಮಾಡಲಾಗಿರುತ್ತದೆ.

ಸದರಿ ಅಧಿಕಾರಿಯವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ಯಾವುದೇ ಬಡ್ತಿ ಇಲ್ಲದೆ 10 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿದ್ದಕ್ಕಾಗಿ ಮೇಲೆ ಓದಲಾದ (3)ರ ಸರ್ಕಾರದ ಆದೇಶದಲ್ಲಿ ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡಲಾಗಿದೆ.

ಸದರಿ ಅಧಿಕಾರಿಯವರು ದಿನಾಂಕ 03.08.2004ರವರೆಗೆ ನೇಮಕಾತಿ ಹೊಂದಿದ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ಯಾವುದೇ ಬಡ್ತಿ ಇಲ್ಲದೆ 15 ವರ್ಷಗಳನ್ನು ತೃಪ್ತಿಕರವಾಗಿ ನಿರ್ವಹಿಸಿರುತ್ತಾರೆ. ಸದರಿಯವರು ಹುದ್ದೆಗೆ ನಿಗದಿಪಡಿಸಲಾದ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿರುತ್ತಾರೆ. ಸದರಿ ಅವಧಿಯಲ್ಲಿ ಯಾವುದೇ ಅಸಾಧಾರಣ ರಜೆ/ವೇತನ ರಹಿತ ರಜೆ ಪಡೆದಿರುವುದಿಲ್ಲ. ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲ / ಹೂಡಲು ಉದ್ದೇಶಿಸಿರುವುದಿಲ್ಲ, ಸ್ವಯಂಚಾಲಿತ ವಿಶೇಷ ಹಿರಿಯ ವೇತನ ಶ್ರೇಣಿ ಮಂಜೂರು ಮಾಡುವ ದಿನಾಂಕಕ್ಕೆ ನಿಕಟಪೂರ್ವ 5 ವರ್ಷಗಳ ಕಾರ್ಯನಿರ್ವಹಣಾ ವರದಿಯಲ್ಲಿ ಪ್ರತಿಕೂಲ ಷರಾ ಇರುವುದಿಲ್ಲ. 15 ವರ್ಷಗಳ ಅವಧಿಯಲ್ಲಿ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಹುದ್ದೆಗೆ ಬಡ್ತಿ ನೀಡಿರುವುದು, ಬಡ್ತಿಯನ್ನು ಇವರು ನಿರಾಕರಿಸಿರುವುದು ಸೇವಾ ದಾಖಲೆಯಿಂದ ಕಂಡುಬರುವುದಿಲ್ಲ. ಸರ್ಕಾರದ ಆದೇಶ ನಂ. ಎಫ್‌ಡಿ 25 ಎಸ್‌ಆರ್‌ಪಿ 91, ದಿನಾಂಕ 29.10.91ರ ಅನುಸಾರ ರೂ.6300–11940ರ 12ನೇ ವೇತನ ಶ್ರೇಣಿಯಲ್ಲಿ ಹುದ್ದೆಗಳನ್ನು ಹೊಂದಿರುವ ಸರ್ಕಾರಿ ನೌಕರರಿಗೂ ಸಹ ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ವೇತನ ಮುಂಬಡ್ತಿ) ನಿಯಮಗಳು 1991ರ ಉಪಬಂಧಗಳ ಅನ್ವಯ ಒಂದೇ ಹುದ್ದೆಯಲ್ಲಿ 15 ವರ್ಷಗಳ ಸೇವೆಯನ್ನು ಪೂರೈಸುವ ಸರ್ಕಾರಿ ನೌಕರರಿಗೆ ಹಿರಿಯ ವೇತನ ಶ್ರೇಣಿಯನ್ನು ಮಂಜೂರು ಮಾಡಲು ಅವಕಾಶವಿದೆ.

ಆದಕಾರಣ ಶ್ರೀ ಎಂ.ಎಸ್. ಈನೋಸ್ ಇವರಿಗೆ ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ವೇತನ ಮುಂಬಡ್ತಿ) ನಿಯಮಗಳು, 1991ರ ಅನ್ವಯ ರೂ.6300–150–7200–200–8800–260–10880–320–11840ರ ವೇತನ ಶ್ರೇಣಿ ಹೊಂದಿರುವ ಇವರಿಗೆ ಹಿರಿಯ ವೇತನ ಶ್ರೇಣಿ ರೂ.7400–200–8800–260–10880–320–13120ರಲ್ಲಿ ದಿನಾಂಕ 04.08.2004ರಿಂದ ಜಾರಿಗೆ ಬರುವಂತೆ ವೇತನ ಬಡ್ತಿ ನೀಡಿ, ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 42(ಬಿ) ಅನ್ವಯ ವೇತನ ನಿಗಧಿಪಡಿಸುವಂತೆ ಮೇಲೆ ಓದಲಾದ (4)ರಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ಕೋರಿರುತ್ತಾರೆ. ಈ ಬಗ್ಗೆ ದಿನಾಂಕ 10.02.2009ರಂದು ನಡೆದ ಇಲಾಖಾ ಮುಂಬಡ್ತಿ ಸಮಿತಿ ಸಭೆಯಲ್ಲಿ ಪರಿಗಣಿಸಿದ್ದು, ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 430 ಪಿಪಿಇ 2008, ಬೆಂಗಳೂರು, ದಿನಾಂಕ: 19ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಶ್ರೀ ಎಂ.ಎಸ್. ಈನೋಸ್, ನಿವೃತ್ತ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಇವರಿಗೆ ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ವೇತನ ಮುಂಬಡ್ತಿ) ನಿಯಮಗಳು, 1991ರ ಅನ್ವಯ ರೂ.6300–150–7200–200–8800–320–11840ರ ವೇತನ ಶ್ರೇಣಿಯನ್ನು ಹೊಂದಿರುವ ಸದರಿ ಅಧಿಕಾರಿಯವರಿಗೆ ಹಿರಿಯ ವೇತನ ಶ್ರೇಣಿ ರೂ.7400–200–8800–260–10880–320–13120ರಲ್ಲಿ ವೇತನ ಬಡ್ತಿ ನೀಡಿ ದಿನಾಂಕ 04.08.2004ರಿಂದ ಅನ್ವಯವಾಗುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 42(ಬಿ) ಅನ್ವಯ ವೇತನ ನಿಗಧಿಪಡಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 936

**ಕೆ.ಸಿ.ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಪಿ.ಎಂ. ಪಾಟೀಲ್, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಉಪನಿರ್ದೇಶಕರ ಕಛೇರಿ, ಬೆಳಗಾವಿ ಇವರಿಗೆ ಸ್ವಯಂಚಾಲಿತ ವಿಶೇಷ ಹಿರಿಯ ವೇತನ ಶ್ರೇಣಿ ಮಂಜೂರು ಮಾಡುವ ಕುರಿತು.

**ಓದಲಾಗಿದೆ :**

1. ಸರ್ಕಾರದ ಅಧಿಸೂಚನೆ–II ನಂ. ಲಾ 161 ಪಿಪಿಇ 86, ದಿನಾಂಕ 24.07.1989.
2. ಸರ್ಕಾರದ ಆದೇಶ ನಂ. ಲಾ 187 ಪಿಪಿಇ 91, ದಿನಾಂಕ 18.01.1992.
3. ಸರ್ಕಾರದ ಆದೇಶ ನಂ. ಲಾ 55 ಪಿಪಿಇ 2002, ದಿನಾಂಕ 19.10.2002.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ ಸಿಶಾ–1 / 176 / 2006–07, ದಿನಾಂಕ 07.07.2007.

**ಪ್ರಸ್ತಾವನೆ:**

ಶ್ರೀ ಪಿ.ಎಂ. ಪಾಟೀಲ್, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಉಪನಿರ್ದೇಶಕರ ಕಛೇರಿ, ಬೆಳಗಾವಿ ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ 24.07.1989ರ ಕ್ರ.ಸಂ.40ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ ದಿನಾಂಕ 07.08.1989ರಂದು ಪೂರ್ವಾಹ್ನ ಸಹಾಯಕ ಸರ್ಕಾರಿ ಅಭಿಯೋಜಕರು, ನೆಲಮಂಗಲ ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುವುದಕ್ಕೆ ಮೇಲೆ ಓದಲಾದ (2)ರ ಸರ್ಕಾರದ ಆದೇಶದ ಕ್ರ.ಸಂ. 13ರಲ್ಲಿ ತೃಪ್ತಿಕರವೆಂದು ಘೋಷಣೆ ಮಾಡಲಾಗಿರುತ್ತದೆ.

ಸದರಿ ಅಧಿಕಾರಿಯವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ಯಾವುದೇ ಬಡ್ತಿ ಇಲ್ಲದೆ 10 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿದ್ದಕ್ಕಾಗಿ ಮೇಲೆ ಓದಲಾದ (3)ರ ಸರ್ಕಾರದ ಆದೇಶದ ಕ್ರ.ಸಂಖ್ಯೆ:3ರಲ್ಲಿ ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡಲಾಗಿದೆ.

ಸದರಿ ಅಧಿಕಾರಿಯವರು ದಿನಾಂಕ 06.08.2004ರವರೆಗೆ ನೇಮಕಾತಿ ಹೊಂದಿದ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ಯಾವುದೇ ಬಡ್ತಿ ಇಲ್ಲದೆ 15 ವರ್ಷಗಳನ್ನು ತೃಪ್ತಿಕರವಾಗಿ ನಿರ್ವಹಿಸಿರುತ್ತಾರೆ. ಸದರಿಯವರು ಹುದ್ದೆಗೆ ನಿಗಧಿಪಡಿಸಲಾದ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿರುತ್ತಾರೆ. ಸದರಿ ಅವಧಿಯಲ್ಲಿ ಯಾವುದೇ ಅಸಾಧಾರಣ ರಜೆ / ವೇತನ ರಹಿತ ರಜೆ ಪಡೆದಿರುವುದಿಲ್ಲ. ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲ / ಹೂಡಲು ಉದ್ದೇಶಿಸಿರುವುದಿಲ್ಲ, ಸ್ವಯಂಚಾಲಿತ ವಿಶೇಷ ಹಿರಿಯ ವೇತನ ಶ್ರೇಣಿ ಮಂಜೂರು ಮಾಡುವ ದಿನಾಂಕಕ್ಕೆ ನಿಕಟಪೂರ್ವ 5 ವರ್ಷಗಳ ಕಾರ್ಯನಿರ್ವಹಣಾ ವರದಿಯಲ್ಲಿ ಪ್ರತಿಕೂಲ ಷರಾ ಇರುವುದಿಲ್ಲ. 15 ವರ್ಷಗಳ ಅವಧಿಯಲ್ಲಿ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಹುದ್ದೆಗೆ ಬಡ್ತಿ ನೀಡಿರುವುದು, ಬಡ್ತಿಯನ್ನು ಇವರು ನಿರಾಕರಿಸಿರುವುದು ಸೇವಾ ದಾಖಲೆಯಿಂದ ಕಂಡುಬರುವುದಿಲ್ಲ. ಸರ್ಕಾರದ ಆದೇಶ ನಂ. ಎಫ್‌ಡಿ 25 ಎಸ್‌ಆರ್‌ಪಿ 91, ದಿನಾಂಕ 29.10.91ರ ಅನುಸಾರ ರೂ.6300–11940ರ 12ನೇ ವೇತನ ಶ್ರೇಣಿಯಲ್ಲಿ ಹುದ್ದೆಗಳನ್ನು ಹೊಂದಿರುವ ಸರ್ಕಾರಿ ನೌಕರರಿಗೂ ಸಹ ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ವೇತನ ಮುಂಬಡ್ತಿ) ನಿಯಮಗಳು 1991ರ ಉಪಬಂಧಗಳ ಅನ್ವಯ ಒಂದೇ ಹುದ್ದೆಯಲ್ಲಿ 15 ವರ್ಷಗಳ ಸೇವೆಯನ್ನು ಪೂರೈಸುವ ಸರ್ಕಾರಿ ನೌಕರರಿಗೆ ಹಿರಿಯ ವೇತನ ಶ್ರೇಣಿಯನ್ನು ಮಂಜೂರು ಮಾಡಲು ಅವಕಾಶವಿದೆ.

ಆದಕಾರಣ ಶ್ರೀ ಪಿ.ಎಂ.ಪಾಟೀಲ್ ಇವರಿಗೆ ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ವೇತನ ಮುಂಬಡ್ತಿ) ನಿಯಮಗಳು, 1991ರ ಅನ್ವಯ ರೂ.6300–150–7200–200–8800–260–10880–320–11840ರ ವೇತನ ಶ್ರೇಣಿ ಹೊಂದಿರುವ ಇವರಿಗೆ ಹಿರಿಯ ವೇತನ ಶ್ರೇಣಿ ರೂ.7400–200–8800–260–10880–320–13120ರಲ್ಲಿ ದಿನಾಂಕ 08.08.2004ರಿಂದ ಜಾರಿಗೆ ಬರುವಂತೆ ವೇತನ ಬಡ್ತಿ ನೀಡಿ, ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 42(ಬಿ) ಅನ್ವಯ ವೇತನ ನಿಗಧಿಪಡಿಸುವಂತೆ ಮೇಲೆ ಓದಲಾದ (4)ರಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ಕೋರಿರುತ್ತಾರೆ. ಈ ಬಗ್ಗೆ ದಿನಾಂಕ 10.02.2009ರಂದು ನಡೆದ ಇಲಾಖಾ ಮುಂಬಡ್ತಿ ಸಮಿತಿ ಸಭೆಯಲ್ಲಿ ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 391 ಪಿಪಿಇ 2008, ಬೆಂಗಳೂರು,ದಿನಾಂಕ: 19ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಶ್ರೀ ಪಿ.ಎಂ. ಪಾಟೀಲ್, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಉಪನಿರ್ದೇಶಕರ ಕಛೇರಿ, ಬೆಳಗಾವಿ ಇವರಿಗೆ ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ವೇತನ ಮುಂಬಡ್ತಿ) ನಿಯಮಗಳು, 1991ರ ಅನ್ವಯ ರೂ.6300–150–7200–200–8800–320–11840ರ ವೇತನ ಶ್ರೇಣಿಯನ್ನು ಹೊಂದಿರುವ ಸದರಿ ಅಧಿಕಾರಿಯವರಿಗೆ ಹಿರಿಯ ವೇತನ ಶ್ರೇಣಿ ರೂ.7400–200–8800–260–10880–320–13120ರಲ್ಲಿ ವೇತನ ಬಡ್ತಿ ನೀಡಿ, ದಿನಾಂಕ 08.08.2004ರಿಂದ ಅನ್ವಯವಾಗುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 42(ಬಿ) ಅನ್ವಯ ವೇತನ ನಿಗಧಿಪಡಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 937

**ಕೆ.ಸಿ.ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎಂ.ಹೆಚ್. ಕಬಾಡಿ ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರಿಗೆ ಸ್ವಯಂಚಾಲಿತ ವಿಶೇಷ ಹಿರಿಯ ವೇತನ ಶ್ರೇಣಿ ಮಂಜೂರು ಮಾಡುವ ಕುರಿತು.

**ಓದಲಾಗಿದೆ :** 1 ಸರ್ಕಾರದ ಅಧಿಸೂಚನೆ–II ನಂ. ಲಾ 161 ಪಿಪಿಇ 86, ದಿನಾಂಕ 24.07.1989.

2 ಸರ್ಕಾರದ ಆದೇಶ ನಂ. ಲಾ 252 ಪಿಪಿಇ 93, ದಿನಾಂಕ 19.08.1995.

3 ಸರ್ಕಾರದ ಆದೇಶ ನಂ. ಲಾ 70 ಪಿಪಿಇ 2001, ದಿನಾಂಕ 25.07.2001.

4 ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ಸಿಶಾ–1/176/2006–07, ದಿನಾಂಕ 01.01.2008.

**ಪ್ರಸ್ತಾವನೆ:**

ಶ್ರೀ ಎಂ.ಹೆಚ್.ಕಬಾಡಿ, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ 24.07.1989ರ ಕ್ರ.ಸಂ.57ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ ದಿನಾಂಕ 01.08.1989ರಂದು ಪೂರ್ವಾಹ್ನ ಸಹಾಯಕ ಸರ್ಕಾರಿ ಅಭಿಯೋಜಕರು, ಎಂ ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಮದ್ದೂರು ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುವುದಕ್ಕೆ ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ತೃಪ್ತಿಕರವೆಂದು ಘೋಷಣೆ ಮಾಡಲಾಗಿರುತ್ತದೆ.

ಸದರಿ ಅಧಿಕಾರಿಯವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ಯಾವುದೇ ಬಡ್ತಿ ಇಲ್ಲದೆ 10 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿದ್ದಕ್ಕಾಗಿ ಮೇಲೆ ಓದಲಾದ (3)ರ ಸರ್ಕಾರದ ಆದೇಶದಲ್ಲಿ ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡಲಾಗಿದೆ.

ಸದರಿ ಅಧಿಕಾರಿಯವರು ದಿನಾಂಕ 31.07.2004ರವರೆಗೆ ನೇಮಕಾತಿ ಹೊಂದಿದ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ಯಾವುದೇ ಬಡ್ತಿ ಇಲ್ಲದೆ 15 ವರ್ಷಗಳನ್ನು ತೃಪ್ತಿಕರವಾಗಿ ನಿರ್ವಹಿಸಿರುತ್ತಾರೆ. ಸದರಿಯವರು ಹುದ್ದೆಗೆ ನಿಗಧಿಪಡಿಸಲಾದ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿರುತ್ತಾರೆ. ಸದರಿ ಅವಧಿಯಲ್ಲಿ ಯಾವುದೇ ಅಸಾಧಾರಣ ರಜೆ / ವೇತನ ರಹಿತ ರಜೆ ಪಡೆದಿರುವುದಿಲ್ಲ. ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲ / ಹೂಡಲು ಉದ್ದೇಶಿಸಿರುವುದಿಲ್ಲ, ಸ್ವಯಂಚಾಲಿತ ವಿಶೇಷ ಹಿರಿಯ ವೇತನ ಶ್ರೇಣಿ ಮಂಜೂರು ಮಾಡುವ ದಿನಾಂಕಕ್ಕೆ ನಿಕಟಪೂರ್ವ 5 ವರ್ಷಗಳ ಕಾರ್ಯನಿರ್ವಹಣಾ ವರದಿಯಲ್ಲಿ ಪ್ರತಿಕೂಲ ಷರಾ ಇರುವುದಿಲ್ಲ. 15 ವರ್ಷಗಳ ಅವಧಿಯಲ್ಲಿ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಹುದ್ದೆಗೆ ಬಡ್ತಿ ನೀಡಿರುವುದು, ಬಡ್ತಿಯನ್ನು ಇವರು ನಿರಾಕರಿಸಿರುವುದು ಸೇವಾ ದಾಖಲೆಯಿಂದ ಕಂಡುಬರುವುದಿಲ್ಲ. ಸರ್ಕಾರದ ಆದೇಶ ನಂ. ಎಫ್‌ಡಿ 25 ಎಸ್‌ಆರ್‌ಪಿ 91, ದಿನಾಂಕ 29.10.91ರ ಅನುಸಾರ ರೂ.6300–11940ರ 12ನೇ ವೇತನ ಶ್ರೇಣಿಯಲ್ಲಿ ಹುದ್ದೆಗಳನ್ನು ಹೊಂದಿರುವ ಸರ್ಕಾರಿ ನೌಕರರಿಗೂ ಸಹ ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ವೇತನ ಮುಂಬಡ್ತಿ) ನಿಯಮಗಳು 1991ರ ಉಪಬಂಧಗಳ ಅನ್ವಯ ಒಂದೇ ಹುದ್ದೆಯಲ್ಲಿ 15 ವರ್ಷಗಳ ಸೇವೆಯನ್ನು ಪೂರೈಸುವ ಸರ್ಕಾರಿ ನೌಕರರಿಗೆ ಹಿರಿಯ ವೇತನ ಶ್ರೇಣಿಯನ್ನು ಮಂಜೂರು ಮಾಡಲು ಅಕಾಶವಿದೆ.

ಆದಕಾರಣ ಶ್ರೀ ಎಂ.ಹೆಚ್. ಕಬಾಡಿ ಇವರಿಗೆ ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ವೇತನ ಮುಂಬಡ್ತಿ) ನಿಯಮಗಳು, 1991ರ ಅನ್ವಯ ರೂ.6300–150–7200–200–8800–260–10880–320–11840ರ ವೇತನ ಶ್ರೇಣಿ ಹೊಂದಿರುವ ಇವರಿಗೆ ಹಿರಿಯ ವೇತನ ಶ್ರೇಣಿ ರೂ.7400–200–8800–260–10880–320–13120ರಲ್ಲಿ ದಿನಾಂಕ 01.08.2004ರಿಂದ ಜಾರಿಗೆ ಬರುವಂತೆ ವೇತನ ಬಡ್ತಿ ನೀಡಿ, ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 42(ಬಿ) ಅನ್ವಯ ವೇತನ ನಿಗಧಿಪಡಿಸುವಂತೆ ಮೇಲೆ ಓದಲಾದ (4)ರಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ಕೋರಿರುತ್ತಾರೆ. ಈ ಬಗ್ಗೆ ದಿನಾಂಕ 10.02.2009ರಂದು ನಡೆದ ಇಲಾಖಾ ಮುಂಬಡ್ತಿ ಸಮಿತಿ ಸಭೆಯಲ್ಲಿ ಪರಿಗಣಿಸಿದ್ದು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 46 ಪಿಪಿಇ 2008, ಬೆಂಗಳೂರು, ದಿನಾಂಕ: 19ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಶ್ರೀ ಎಂ.ಹೆಚ್.ಕಬಾಡಿ, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರಿಗೆ ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ವೇತನ ಮುಂಬಡ್ತಿ) ನಿಯಮಗಳು, 1991ರ ಅನ್ವಯ ರೂ.6300–150–7200–200–8800–320–11840ರ ವೇತನ ಶ್ರೇಣಿಯನ್ನು ಹೊಂದಿರುವ ಸದರಿ ಅಧಿಕಾರಿಯವರಿಗೆ ಹಿರಿಯ ವೇತನ ಶ್ರೇಣಿ ರೂ.7400–200–8800–260–10880–320–13120ರಲ್ಲಿ ವೇತನ ಬಡ್ತಿ ನೀಡಿ ದಿನಾಂಕ 01.08.2004ರಿಂದ ಅನ್ವಯವಾಗುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 42(ಬಿ) ಅನ್ವಯ ವೇತನ ನಿಗಧಿಪಡಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 938

**ಕೆ.ಸಿ.ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಪ್ರಕಾಶ್, ನಿವೃತ್ತ ಸಹಾಯಕ ಅಭಿಯೋಗ ನಿರ್ದೇಶಕರು ಇವರಿಗೆ ಸ್ವಯಂಚಾಲಿತ ವಿಶೇಷ ಹಿರಿಯ ವೇತನ ಶ್ರೇಣಿ ಮಂಜೂರು ಮಾಡುವ ಕುರಿತು.

**ಓದಲಾಗಿದೆ :** 1 ಸರ್ಕಾರದ ಅಧಿಸೂಚನೆ–II ನಂ. ಲಾ 161 ಪಿಪಿಇ 86, ದಿನಾಂಕ 24.07.1989.

2 ಸರ್ಕಾರದ ಆದೇಶ ನಂ. ಲಾ 187 ಪಿಪಿಇ 91, ದಿನಾಂಕ 18.01.1992.

3 ಸರ್ಕಾರದ ಆದೇಶ ನಂ. ಒಇ 577 ಪಿಪಿಇ 2007, ದಿನಾಂಕ 19.10.2002.

4 ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ ಸಿಶಾ–1/ 176/2004–05, ದಿನಾಂಕ 19.03.2008.

**ಪ್ರಸ್ತಾವನೆ:**

ಶ್ರೀ ಪ್ರಕಾಶ್, ನಿವೃತ್ತ ಸಹಾಯಕ ಅಭಿಯೋಗ ನಿರ್ದೇಶಕರು ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ 24.07.1989ರ ಕ್ರ.ಸಂ.49ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ ದಿನಾಂಕ 05.08.1989ರಂದು ಪೂರ್ವಾಹ್ನ ಸಹಾಯಕ ಸರ್ಕಾರಿ ಅಭಿಯೋಜಕರು, ಹೊಸದುರ್ಗ, ಚಿತ್ರದುರ್ಗ ಜಿಲ್ಲೆ ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುವುದಕ್ಕೆ ಮೇಲೆ ಓದಲಾದ (2)ರ ಸರ್ಕಾರದ ಆದೇಶದ ಕ್ರ.ಸಂ. 18ರಲ್ಲಿ ತೃಪ್ತಿಕರವೆಂದು ಘೋಷಣೆ ಮಾಡಲಾಗಿರುತ್ತದೆ.

ಸದರಿ ಅಧಿಕಾರಿಯವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ಯಾವುದೇ ಬಡ್ತಿ ಇಲ್ಲದೆ 10 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿದ್ದಕ್ಕಾಗಿ ಮೇಲೆ ಓದಲಾದ (3)ರ ಸರ್ಕಾರದ ಆದೇಶದಲ್ಲಿ ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡಲಾಗಿದೆ.

ಸದರಿ ಅಧಿಕಾರಿಯವರು ದಿನಾಂಕ 04.08.2004ರವರೆಗೆ ನೇಮಕಾತಿ ಹೊಂದಿದ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ಯಾವುದೇ ಬಡ್ತಿ ಇಲ್ಲದೆ 15 ವರ್ಷಗಳನ್ನು ತೃಪ್ತಿಕರವಾಗಿ ನಿರ್ವಹಿಸಿರುತ್ತಾರೆ. ಸದರಿಯವರು ಹುದ್ದೆಗೆ ನಿಗಧಿಪಡಿಸಲಾದ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿರುತ್ತಾರೆ. ಸದರಿ ಅವಧಿಯಲ್ಲಿ ಯಾವುದೇ ಅಸಾಧಾರಣ ರಜೆ/ವೇತನ ರಹಿತ ರಜೆ ಪಡೆದಿರುವುದಿಲ್ಲ. ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲ / ಹೂಡಲು ಉದ್ದೇಶಿಸಿರುವುದಿಲ್ಲ, ಸ್ವಯಂಚಾಲಿತ ವಿಶೇಷ ಹಿರಿಯ ವೇತನ ಶ್ರೇಣಿ ಮಂಜೂರು ಮಾಡುವ ದಿನಾಂಕಕ್ಕೆ ನಿಕಟಪೂರ್ವ 5 ವರ್ಷಗಳ ಕಾರ್ಯನಿರ್ವಹಣಾ ವರದಿಯಲ್ಲಿ ಪ್ರತಿಕೂಲ ಷರಾ ಇರುವುದಿಲ್ಲ. 15 ವರ್ಷಗಳ ಅವಧಿಯಲ್ಲಿ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಹುದ್ದೆಗೆ ಬಡ್ತಿ ನೀಡಿರುವುದು, ಬಡ್ತಿಯನ್ನು ಇವರು ನಿರಾಕರಿಸಿರುವುದು ಸೇವಾ ದಾಖಲೆಯಿಂದ ಕಂಡುಬರುವುದಿಲ್ಲ. ಸರ್ಕಾರದ ಆದೇಶ ನಂ. ಎಫ್‌ಡಿ 25 ಎಸ್‌ಆರ್‌ಪಿ 91, ದಿನಾಂಕ 29.10.91ರ ಅನುಸಾರ ರೂ.6300–11940ರ 12ನೇ ವೇತನ ಶ್ರೇಣಿಯಲ್ಲಿ ಹುದ್ದೆಗಳನ್ನು ಹೊಂದಿರುವ ಸರ್ಕಾರಿ ನೌಕರರಿಗೂ ಸಹ ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ವೇತನ ಮುಂಬಡ್ತಿ) ನಿಯಮಗಳು 1991ರ ಉಪಬಂಧಗಳ ಅನ್ವಯ

ಒಂದೇ ಹುದ್ದೆಯಲ್ಲಿ 15 ವರ್ಷಗಳ ಸೇವೆಯನ್ನು ಪೂರೈಸುವ ಸರ್ಕಾರಿ ನೌಕರರಿಗೆ ಹಿರಿಯ ವೇತನ ಶ್ರೇಣಿಯನ್ನು ಮಂಜೂರು ಮಾಡಲು ಅವಕಾಶವಿದೆ.

ಆದಕಾರಣ ಶ್ರೀ ಪ್ರಕಾಶ್ ಇವರಿಗೆ ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ವೇತನ ಮುಂಬಡ್ತಿ) ನಿಯಮಗಳು, 1991ರ ಅನ್ವಯ ರೂ.6300–150–7200–200–8800–260–10880–320–11840ರ ವೇತನ ಶ್ರೇಣಿ ಹೊಂದಿರುವ ಇವರಿಗೆ ಹಿರಿಯ ವೇತನ ಶ್ರೇಣಿ ರೂ.7400–200–8800–260–10880–320–13120ರಲ್ಲಿ ದಿನಾಂಕ 05.08.2004ರಿಂದ ಜಾರಿಗೆ ಬರುವಂತೆ ವೇತನ ಬಡ್ತಿ ನೀಡಿ, ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 42(ಬಿ) ಅನ್ವಯ ವೇತನ ನಿಗಧಿಪಡಿಸುವಂತೆ ಮೇಲೆ ಓದಲಾದ (4)ರಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ಕೋರಿರುತ್ತಾರೆ. ಈ ಬಗ್ಗೆ ದಿನಾಂಕ 10.02.2009ರಂದು ನಡೆದ ಇಲಾಖಾ ಮುಂಬಡ್ತಿ ಸಮಿತಿ ಸಭೆಯಲ್ಲಿ ಪರಿಗಣಿಸಿದ್ದು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 163 ಪಿಪಿಇ 2008, ಬೆಂಗಳೂರು, ದಿನಾಂಕ: 19ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಶ್ರೀ ಪ್ರಕಾಶ್, ನಿವೃತ್ತ ಸಹಾಯಕ ಅಭಿಯೋಗ ನಿರ್ದೇಶಕರು ಇವರಿಗೆ ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ವೇತನ ಮುಂಬಡ್ತಿ) ನಿಯಮಗಳು, 1991ರ ಅನ್ವಯ ರೂ.6300–150–7200–200–8800–320–11840ರ ವೇತನ ಶ್ರೇಣಿಯನ್ನು ಹೊಂದಿರುವ ಸದರಿ ಅಧಿಕಾರಿಯವರಿಗೆ ಹಿರಿಯ ವೇತನ ಶ್ರೇಣಿ ರೂ.7400–200–8800–260–10880–320–13120ರಲ್ಲಿ ವೇತನ ಬಡ್ತಿ ನೀಡಿ, ದಿನಾಂಕ 05.08.2004ರಿಂದ ಅನ್ವಯವಾಗುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 42(ಬಿ) ಅನ್ವಯ ವೇತನ ನಿಗಧಿಪಡಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 939

**ಕೆ.ಸಿ.ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ವಾಗೀಶ್ ವಿ. ಹಿರೇಮಠ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಎ.ಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು ನಗರ ಇವರಿಗೆ ಸ್ವಯಂಚಾಲಿತ ವಿಶೇಷ ಹಿರಿಯ ವೇತನ ಶ್ರೇಣಿ ಮಂಜೂರು ಮಾಡುವ ಕುರಿತು.

**ಓದಲಾಗಿದೆ :**
1 ಸರ್ಕಾರದ ಅಧಿಸೂಚನೆ–II ನಂ. ಲಾ 161 ಪಿಪಿಇ 86, ದಿನಾಂಕ 24.07.1989.
2 ಸರ್ಕಾರದ ಆದೇಶ ನಂ. ಲಾ 46 ಪಿಪಿಇ 92, ದಿನಾಂಕ 11.03.1992.
3 ಸರ್ಕಾರದ ಆದೇಶ ನಂ. ಒಇ 342 ಪಿಪಿಇ 2005, ದಿನಾಂಕ 22.03.2006.
4 ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ಸಿಶಾ–1 / 176 / 2006–07, ದಿನಾಂಕ 01.01.2008.

**ಪ್ರಸ್ತಾವನೆ:–**

ಶ್ರೀ ವಾಗೀಶ್ ವಿ. ಹಿರೇಮಠ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಎ.ಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು ನಗರ ಇವರು ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆ ದಿನಾಂಕ 24.07.1989ರ ಕ್ರ.ಸಂ.27ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ ದಿನಾಂಕ 04.08.1989ರಂದು ಪೂರ್ವಾಹ್ನ ಸಹಾಯಕ ಸರ್ಕಾರಿ ಅಭಿಯೋಜಕರು, ಎಂ ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಮುಧೋಳ್ ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುವುದಕ್ಕೆ ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ತೃಪ್ತಿಕರವೆಂದು ಘೋಷಣೆ ಮಾಡಲಾಗಿರುತ್ತದೆ.

ಸದರಿ ಅಧಿಕಾರಿಯವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ಯಾವುದೇ ಬಡ್ತಿ ಇಲ್ಲದೆ 10 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿದ್ದಕ್ಕಾಗಿ ಮೇಲೆ ಓದಲಾದ (3)ರ ಸರ್ಕಾರದ ಆದೇಶದಲ್ಲಿ ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡಲಾಗಿದೆ.

ಸದರಿ ಅಧಿಕಾರಿಯವರು ದಿನಾಂಕ 03.08.2004ರವರೆಗೆ ನೇಮಕಾತಿ ಹೊಂದಿದ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಯಲ್ಲಿ ಯಾವುದೇ ಬಡ್ತಿ ಇಲ್ಲದೆ 15 ವರ್ಷಗಳನ್ನು ತೃಪ್ತಿಕರವಾಗಿ ನಿರ್ವಹಿಸಿರುತ್ತಾರೆ. ಸದರಿಯವರು ಹುದ್ದೆಗೆ ನಿಗಧಿಪಡಿಸಲಾದ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿರುತ್ತಾರೆ. ಸದರಿ ಅವಧಿಯಲ್ಲಿ ಯಾವುದೇ ಅಸಾಧಾರಣ ರಜೆ/

ವೇತನ ರಹಿತ ರಜೆ ಪಡೆದಿರುವುದಿಲ್ಲ. ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿ ಇರುವುದಿಲ್ಲ/ ಹೂಡಲು ಉದ್ದೇಶಿಸಿರುವುದಿಲ್ಲ, ಸ್ವಯಂಚಾಲಿತ ವಿಶೇಷ ಹಿರಿಯ ವೇತನ ಶ್ರೇಣಿ ಮಂಜೂರು ಮಾಡುವ ದಿನಾಂಕಕ್ಕೆ ನಿಕಟಪೂರ್ವ 5 ವರ್ಷಗಳ ಕಾರ್ಯನಿರ್ವಹಣಾ ವರದಿಯಲ್ಲಿ ಪ್ರತಿಕೂಲ ಷರಾ ಇರುವುದಿಲ್ಲ. 15 ವರ್ಷಗಳ ಅವಧಿಯಲ್ಲಿ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು ಹುದ್ದೆಗೆ ಬಡ್ತಿ ನೀಡಿರುವುದು, ನೀಡಲಾದ ಬಡ್ತಿಯನ್ನು ಇವರು ನಿರಾಕರಿಸಿರುವುದು ಸೇವಾ ದಾಖಲೆಯಿಂದ ಕಂಡುಬರುವುದಿಲ್ಲ. ಸರ್ಕಾರದ ಆದೇಶ ನಂ. ಎಫ್‌ಡಿ 25 ಎಸ್‌ಆರ್‌ಪಿ 91, ದಿನಾಂಕ 29.10.91ರ ಅನುಸಾರ ರೂ.6300–11940ರ 12ನೇ ವೇತನ ಶ್ರೇಣಿಯಲ್ಲಿ ಹುದ್ದೆಗಳನ್ನು ಹೊಂದಿರುವ ಸರ್ಕಾರಿ ನೌಕರರಿಗೂ ಸಹ ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ವೇತನ ಮುಂಬಡ್ತಿ) ನಿಯಮಗಳು 1991ರ ಉಪಬಂಧಗಳ ಅನ್ವಯ ಒಂದೇ ಹುದ್ದೆಯಲ್ಲಿ 15 ವರ್ಷಗಳ ಸೇವೆಯನ್ನು ಪೂರೈಸುವ ಸರ್ಕಾರಿ ನೌಕರರಿಗೆ ಹಿರಿಯ ವೇತನ ಶ್ರೇಣಿಯನ್ನು ಮಂಜೂರು ಮಾಡಲು ಅವಕಾಶವಿದೆ.

ಆದಕಾರಣ ಶ್ರೀ ವಾಗೀಶ್ ವಿ. ಹಿರೇಮಠ್ ಇವರಿಗೆ ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ವೇತನ ಮುಂಬಡ್ತಿ) ನಿಯಮಗಳು, 1991ರ ಅನ್ವಯ ರೂ.6300–150–7200–200–8800–260–10880–320–11840ರ ವೇತನ ಶ್ರೇಣಿ ಹೊಂದಿರುವ ಇವರಿಗೆ ಹಿರಿಯ ವೇತನ ಶ್ರೇಣಿ ರೂ.7400–200–8800–260–10880–320–13120ರಲ್ಲಿ ದಿನಾಂಕ 04.08.2004ರಿಂದ ಜಾರಿಗೆ ಬರುವಂತೆ ವೇತನ ಬಡ್ತಿ ನೀಡಿ, ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 42(ಬಿ) ಅನ್ವಯ ವೇತನ ನಿಗಧಿಪಡಿಸುವಂತೆ ಮೇಲೆ ಓದಲಾದ (4)ರಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರು ಕೋರಿರುತ್ತಾರೆ. ಈ ಬಗ್ಗೆ ದಿನಾಂಕ 10.02.2009ರಂದು ನಡೆದ ಇಲಾಖಾ ಮುಂಬಡ್ತಿ ಸಮಿತಿ ಸಭೆಯಲ್ಲಿ ಪರಿಗಣಿಸಿದ್ದು, ಸರ್ಕಾರವು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 429 ಪಿಪಿಇ 2008, ಬೆಂಗಳೂರು, ದಿನಾಂಕ: 19ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಶ್ರೀ ವಾಗೀಶ್ ವಿ. ಹಿರೇಮಠ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಎ.ಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು ನಗರ ಇವರಿಗೆ ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ವೇತನ ಮುಂಬಡ್ತಿ) ನಿಯಮಗಳು, 1991ರ ಅನ್ವಯ ರೂ.6300–150–7200–200–8800–320–11840ರ ವೇತನ ಶ್ರೇಣಿಯನ್ನು ಹೊಂದಿರುವ ಸದರಿ ಅಧಿಕಾರಿಯವರಿಗೆ ಹಿರಿಯ ವೇತನ ಶ್ರೇಣಿ ರೂ.7400–200–8800–260–10880–320–13120ರಲ್ಲಿ ವೇತನ ಬಡ್ತಿ ನೀಡಿ, ದಿನಾಂಕ 04.08.2004ರಿಂದ ಅನ್ವಯವಾಗುವಂತೆ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 42(ಬಿ) ಅನ್ವಯ ವೇತನ ನಿಗಧಿಪಡಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 940 **ಕೆ.ಸಿ.ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ಕಂದಾಯ ಸಚಿವಾಲಯ**

**ಸೇರ್ಪಡೆ ಆದೇಶ**

**ಸಂಖ್ಯೆ: ಕಂಇ 48 ಮುಅಬಿ 2008, ಬೆಂಗಳೂರು, ದಿನಾಂಕ: 11ನೇ ಫೆಬ್ರವರಿ 2009**

ಸರ್ಕಾರಿ ಆದೇಶ ಸಂಖ್ಯೆ:ಕಂಇ 01 ಮುಅಬಿ 2006 ದಿನಾಂಕ: 3.6.2006ರಲ್ಲಿ ಕೈಲಾಸ ಮಾನಸ ಸರೋವರ ಯಾತ್ರೆ ಕೈಗೊಳ್ಳುವ ಯಾತ್ರಾರ್ಥಿಗಳಿಗೆ ಧನ ಸಹಾಯ ನೀಡಲು ಮಾರ್ಗಸೂಚಿಯ ಹೊರಡಿಸಲಾಗಿದ್ದು, ಈ ಮಾರ್ಗಸೂಚಿಯ ಅನುಬಂಧದ ಕ್ರಮ ಸಂಖ್ಯೆ (10)ರಲ್ಲಿ ಕೈಲಾಸ ಮಾನಸ ಸರೋವರ ಯಾತ್ರೆ ಕೈಗೊಂಡ ಸಂದರ್ಭದಲ್ಲಿ ಹಾಗೂ ಯಾತ್ರೆಯನ್ನು ಪೂರ್ಣಗೊಳಿಸಿ ನಿಗಧಿತ ಸಮಯದಲ್ಲಿ ಅನುದಾನ ಕೋರಿ ಧಾರ್ಮಿಕ ದತ್ತಿ ಆಯುಕ್ತರಿಗೆ ಅರ್ಜಿ ಸಲ್ಲಿಸಿದ ನಂತರದಲ್ಲಿ ಮೃತರಾದ ಯಾತ್ರಾರ್ಥಿಗಳಿಗೆ ಅನುದಾನ ಮಂಜೂರು ಮಾಡಲು ಪರಿಗಣಿಸತಕ್ಕದ್ದು ಎಂದು ಸೇರ್ಪಡಿಸಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 616 **ಜಿ. ರಾಮಚಂದ್ರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಮುಜರಾಯಿ)